॥ ಶ್ರೀವಿಜಯ ವಿಠ್ಠಲ ಪ್ರಸೀದತು ॥

# ಶ್ರೀ ಗೋಪಾಲದಾಸರ ಸುಳಾದಿಗಳು, ಪದಗಳು ಹಾಗೂ ಉಗಾಭೋಗಗಳು

**ಸಂಗ್ರಹ : ಶ್ರೀ ಗುರುಮಧ್ವರಾವ ಉಪ್ಪಲಿ (ತಾತ)**

ಪ್ರಕಾಶಕರು :

ಶ್ರೀ ವೆಂಕಟಕೃಷ್ಣ ಭಜನಾ ಮಂಡಳಿ

ಉತ್ತನೂರು.

# ಶ್ರೀ ಗೋಪಾಲದಾಸರ
# ಸುಳಾದಿಗಳು, ಪದಗಳು ಹಾಗೂ ಉಗಾಭೋಗಗಳು


ಪ್ರಥಮ ಮುದ್ರಣ : 2018





ಪ್ರತಿಗಳು : 1000

ಬೆಲೆ : 200–00

ಪ್ರಕಾಶಕರು : **ಶ್ರೀ ವೆಂಕಟಕೃಷ್ಣ ಭಜನಾ ಮಂಡಳಿ**
ಉತ್ತನೂರು.
ಸೆಲ್ : 97045 94421, 97416 82362, 99661 90744

ಅಕ್ಷರ ಜೋಡಣೆ ಮತ್ತು ಮುಖಪುಟ ವಿನ್ಯಾಸ :
**ಗೋಪಿ ಪುರಾಣಿಕ್,** ಹೈದರಾಬಾದ್.
ಸೆಲ್ : 98485 77673

ಮುದ್ರಣ :
**ಆನಂದ ಪ್ರಿಂಟರ್ಸ್**
3–4–320, ಗುಜರಾತಿ ಪ್ರಗತಿ ಸಮಾಜ ಮುಂಭಾಗ,
ಕಾಚೀಗೂಡಾ, ಲಿಂಗಂಪಲ್ಲಿ, ಹೈದರಾಬಾದ್ – 27.
ದೂ. : 040– 27561270, 98488 07151

जगद्गुरू श्री मध्वाचार्य महा संस्थानम्

**H.H.Sree Vidyesha Teertha Swamiji**
Shree Sathyateertha Bhandarakeri Mutt
Udupi - 576101 (Karnataka State)

**महाराज श्री विद्येशतीर्थ स्वामीजी**
श्री सत्यतीर्थ भण्डारकेरि मठ
उडुपि - ५७६ १०१ (कर्नाटक राज्य)



# ಹೃದಯ ವಾಣಿ

ಪುಣ್ಯ ಪುರುಷರಾದ ದಾಸವರೇಣ್ಯರು ಹರಿಭಕ್ತಿ ಪ್ರಚೋದಕಗಳಾದ ಪದ-ಸುಳಾದಿ-ಉಗಾಭೋಗಗಳನ್ನು ವಿರಚಿಸಿ ಕಲಿಯುಗದ ಪರಮ ಧರ್ಮವೆನಿಸಿದ ಹರಿನಾಮ ಕೀರ್ತನೆ ಯಜ್ಞವನ್ನು ಉತ್ತೇಜಿಸಿದರು. ದವಾದಶ ಸ್ತೋತ್ರ ಪುಷ್ಪಗುಚ್ಛಗಳನ್ನು ವಿರಚಿಸಿದ ಶ್ರೀ ಮದಾನಂದತೀರ್ಥರು ಶ್ರೀ ಯಜ್ಞಕ್ಕೆ ನಾಂದಿ ಹಾಡಿದರು. ಶ್ರೀಮದಾಚಾರ್ಯರ ಶುದ್ಧ ಹರಿ ಭಕ್ತಿ ಸಿದ್ಧಾಂತದಿಂದ ಪ್ರತಿಬಿಂಬಿತವಾದ ಹರಿದಾಸ ಸಾಹಿತ್ಯ ಪ್ರಪಂಚಕ್ಕೆ ಮಹತ್ವಪೂರ್ಣ ಕೊಡುಗೆಯನ್ನು ನೀಡಿದವರಲ್ಲಿ ಶ್ರೀ ಗೋಪಾಲದಾಸರೂ ಸೇರುತ್ತಾರೆ. ಅವರ 72 ಸುಳಾದಿಗಳು, 48 ಪದಗಳು ಹಾಗೂ 10 ಉಗಾಭೋಗಗಳಲನ್ನೊಟ್ಟುಗೊಂಡ ಕೃತಿಪುಷ್ಪವು ಶ್ರೀ ಹರಿಪಾದವನ್ನು ಸೇರಿದ ಶ್ರೀ ಉಪ್ಪಲಿ ಮಧ್ವರಾಯರ ಜನ್ಮ ಶತಮಾನೋತ್ಸವದ ಶುಭಾವಸರದಲ್ಲಿ ಮಧ್ವಾಂತರ್ಗತ ಶ್ರೀಮನ್ನಾರಾಯಣನ ಅಡಿದಾವರೆಗೆ ಸಮರ್ಪಿತವಾಗಲೆಂದು ತಿಳಿದು ಸಂತಸವಾಯಿತು. ಇಪ್ಪಲಿ ಮಧ್ವರಾಯರ ಶಿಷ್ಯರನ್ನೊಳಗೊಂಡ ಶೇಷದಾಸರ ಸೇವಾ ಸಮಿತಿಯು, ಶ್ರೀ ವೆಂಕಟಕೃಷ್ಣ ಭಜನಾ ಮಂಡಳಿ, ಪಟವಾರಿ ಬಂಧುಗಳು, ಉತ್ತನೂರು ಇವರ ಮುಖೇನ ಪ್ರಕಾಶನಪಡಿಸಿ ಜಿಜ್ಞಾಸುಗಳಿಗೆ ತಲುಪಿಸುತ್ತಿರುವುದು ಶ್ಲಾಘನೀಯ ಕಾರ್ಯವಾಗಿದೆ. ಈ ಕಾರ್ಯಕ್ಕಾಗಿ ಪ್ರಕಾಶಕರನ್ನು ಹಾಗೂ ಶೇಷದಾಸರ ಸೇವಾಸಮಿತಿಯನ್ನು ಅಭಿನಂದಿಸಿ ಹರಿಗುರುಗಳಲ್ಲಿ ಅವರಿಗೆ ಶ್ರೇಯಸ್ಸನ್ನು ಪ್ರಾರ್ಥಿಸುತ್ತೇವೆ. ಉಪ್ಪಲಿ ಶ್ರೀ ಮಧ್ವರಾಯರು ಹರಿದಾಸ ಸಆಹಿತ್ಯ ಸೇವೆಯನ್ನು ಅನನ್ಯಾದೃಶವಾಗಿ ಮಾಡಿದ ಮಹನೀಯರು. ಅವರೇ ಸಂಗ್ರಹಿಸಿದ ಗೋಪಾಲದಾಸರ ಸುಳಾದಿಗಳು ಈ ಹಿಂದೆ ಪ್ರಕಾಶಿತಗಳಾದರೂ, ಪೂರ್ವಮುದ್ರಿತ ಪುಸ್ತಕಗಳು ಈಗ ಲಭ್ಯವಾಗದಿರುವುದರಿಂದ ಅದನ್ನು ಪ್ರಕಾಶಪಡಿಸಿ ಭಗವಂತನಿಗೆ ಅರ್ಪಿಸುವ ಕಾರ್ಯವ ಶ್ರೀ ಉಪ್ಪಲಿ ಮಧ್ವರಾಯರಿಗೆ ಮಾಡಿವ ದೊಡ್ಡ ಸನ್ಮಾನ. ಸುಜನರು ಈ ಕೃತಿಪುಷ್ಪವನ್ನು ಸದುಪಯೋಗಿಸಿಕೊಂಡು ಕೃತಾರ್ಥರಾಗಲಿ ಎಂದಯ ಹಾರೈಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

ಮಂತ್ರಾಲಯ ಮಠಾಧೀಶರಾದ
ಶ್ರೀ ಶ್ರೀ 1008 ಶ್ರೀ ಸುಶಮೀಂದ್ರತೀರ್ಥ ಶ್ರೀಪಾದರ ಕರಕಮಲ ಸಂಜಾತ

# ಶ್ರೀ ಶ್ರೀ ಸುವಿದ್ಯೇಂದ್ರತೀರ್ಥ ಶ್ರೀಪಾದಂಗಳವರು

ಶ್ರೀ ರಾಘವೇಂದ್ರಸ್ವಾಮಿ ಮಠ, ಮಂತ್ರಾಲಯ



## ಅನುಗ್ರಹ ಸಂದೇಶ

ದೇವರ ಪೂಜೆಯು ಅಂಗರಂಗ ವೈಭವ ಎಂದು ಮೂರು ಬಗೆ. ಅಂಗ ಪೂಜೆ ಮೂಲ ಮೂರ್ತಿಗೆ, ಗರ್ಭಗುಡಿಯಲ್ಲಿ ನಡೆಯುವಂಥದ್ದು. ರಂಗಪೂಜೆಯು ಮಧ್ಯ ಮಂಟಪದಲ್ಲಿ ಉತ್ಸವ ಮೂರ್ತಿಗೆ. ವೈಭವ ಪೂಜೆಯು ದೇವಾಲಯದ ಹೊರಗೆ ರಥಬೀದಿ ಮುಂತಾದ ಕಡೆ ನಡೆಯುವಂತಹುದು. ಅದರಂತೆ ಸಂಸ್ಕೃತದ ವ್ಯಾಸ ಸಾಹಿತ್ಯವು ಅಂದರೆ ವೇದಾದಿಗಳು ಅಂಗಪೂಜೆಯಂತೆ. ಪುರಾಣಾದಿಗಳು ರಂಗ ಪೂಜೆಯಂತೆ ಇದ್ದರೆ ದಾಸಸಾಹಿತ್ಯವು ವೈಭವ ಪೂಜೆಯಂತೆ ಇದೆ. ದಾಸವರೇಣ್ಯರು ಶ್ರೀಹರಿತತ್ತ್ವವನ್ನು ಎಲ್ಲರ ಮನೆಯಮುಂದೆ ಮನದ ಮುಂದೆ ತಂದು ತೋರಿಸಿದವರು. ಅಂತಹ ದಾಸಶ್ರೇಷ್ಠರಲ್ಲಿ ಗಾಯತ್ರೀ ಸಿದ್ಧಿ ಮಾಡಿಕೊಂಡು ಶ್ರೀಗೋಪಾಲದಾಸರು ಒಬ್ಬರು. ಇವರ ಸುಳಾದಿ, ಪದಗಳು ಹಾಗೂ ಉಗಾಭೋಗಗಳನ್ನು ಸಂಗ್ರಹಿಸಿದವರು ಶ್ರೀ ಗುರುಮಧ್ವರಾವ್ ಉಪ್ಪಲಿಯವರು. ತಮ್ಮ ಜೀವನವನ್ನು ಇದಕ್ಕೆ ಮೀಸಲಿಟ್ಟ ಮಹಾನುಭಾವರು. ಅವರ ಪರಿಶ್ರಮ ಸಾರ್ಥಕವಾಗಲೆಂದು ಶ್ರೀ ವೆಂಕಟ ಕೃಷ್ಣ ಭಜನಾ ಮಂಡಳಿಯವರು ಇದನ್ನು ಪ್ರಕಟಪಡಿಸಿ ಧನ್ಯರಾಗಿದ್ದಾರೆ. ಇದನ್ನು ಸಜ್ಜನರೆಲ್ಲರೂ ಸ್ವಾಗತಿಸುವುದರಲ್ಲಿ ಸಂದೇಹವೇ ಇಲ್ಲ. ಇಂತಹ ಸಾರ್ಥಕ ಕೃತ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡ ಇವರಿಗೆ ಶ್ರೀ ಹರಿವಾಯು ಗುರುಗಳು ಅನುಗ್ರಹಿಸಲೆಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

[signature]

॥ ಜೈ ವಿಜಯರಾಯ ॥

ಆಗತಾದಿ ತ್ರಿಕಾಲಜ್ಞಂ ಆಗಮಾರ್ಥ ವಿಶಾರದಂ ।
ತ್ಯಾಗ ಭೋಗ್ಯ ಸಮಾಯುಕ್ತಂ ಭಾಗಣ್ಣಾರ್ಯ ಗುರುಂ ಭಜೇ ॥

# ಮುನ್ನುಡಿ

ಅನಂತಕೋಟಿ ಬ್ರಹ್ಮಾಂಡನಾಯಕನಾದ ಶ್ರೀಹರಿಗೆ ಈ ವರಕಲಿಯುಗದಲ್ಲಿ ಅವತಾರವಿಲ್ಲ. ಆದರೇ ಭಗವತ್ ಭಕ್ತರನ್ನು ಉದ್ಧಾರ ಮಾಡುವುದಗೋಸ್ಕರ ಭಗವಂತನ ಸೇವಕರಾದ ವಾಯುದೇವರೇ ಮೊದಲಾದವರೆಲ್ಲಾ ಈ ಭುವಿಯಲ್ಲಿ ಅವತಾರ ಮಾಡಲು ಆಜ್ಞಾಪಿಸಿ, ಜ್ಞಾನ, ಭಕ್ತ್ಯಾದಿಗಳನ್ನು ತಿಳಿಸಿಕೊಡುತ್ತಾ ಸತ್ಸಾಧನಕ್ಕೆ ಅನುಕೂಲ ಮಾಡಿಕೊಟ್ಟಿದ್ದಾನೆ ಸರ್ವೋತ್ತಮನಾದ ಶ್ರೀಹರಿ. ಸಕಲ ವೇದ ಪುರಾಣಗಳ ಸಾರವನ್ನು ಶೋಧಿಸಿ ಪಾಮರರಿಗೆ ಬೋಧಿಸಿ, ಸಾಧನಮಾರ್ಗ ತೋರಿಸಿ, ಸದಾ ಹರಿನಾಮ ಸ್ಮರಣೆಯನ್ನು ವದನದಲ್ಲಿ ನುಡಿಸಿದವರೇ ಶ್ರೀ ಹರಿದಾಸರು. ಇಂಥಾ ಹರಿದಾಸ ಪಂಥದ ಮೂಲಪುರುಷರು ಆನಂದತೀರ್ಥ ಭಗವತ್ಪಾದರು. ಇವರೇ ಮೊದಲಾದ ಸಮಸ್ಥ ಯತಿವರೇಣ್ಯರು, ದಾಸವರೇಣ್ಯರು ಎಲ್ಲಾರು ತಮ್ಮ ಅಂಶದಿಂದಾ ಅವತರಿಸಿ ಸದ್ಗುರುಗಳಿಂದ ಮಂತ್ರೋಪದೇಶ, ಅಂಕಿತ ಉಪದೇಶ, ಅಪರೋಕ್ಷಜ್ಞಾನ ಪಡೆದು ಶ್ರೀ ಹರಿಯಾಜ್ಞೆಯಂತೆ ತಮ್ಮ ಉಪಾಸ್ಯ ಮೂರ್ತಿಯನ್ನು ಕೊಂಡಾಡಿ ಭಗವದರ್ಪಣೆ ಮಾಡಿರುವರು.

ಇಂತಾ ಹರಿದಾಸ ಪಂಥದ ಹಾದಿ ಹಿಡಿದವರೇ ನಮ್ಮ ಕಥಾನಾಯಕರಾದ ಗಣೇಶಾಂಶ ಸಂಬೂತರಾದ "ಗೋಪಾಲದಾಸರು".

ಕನ್ನಡನಾಡಿನ ರಾಯಚೂರು ಪ್ರಾಂತ್ಯದ ಮೊಸರುಕಲ್ಲು ಗ್ರಾಮದಲ್ಲಿ ಶ್ರೇಷ್ಟ ಹರಿತಸ ಗೋತ್ರಜ ಮುರಾರಿ ವೆಂಕಮ್ಮ ಪುಣ್ಯದಂಪತಿಗಳ ಪ್ರಥಮ ಸಂತಾನವೇ "ಭಾಗಣ್ಣ". ತಂದೆ ಮರಣಾನಂತರ ಸಂಕಟ ಪಡುತ್ತಾ ಸಂಕಾಪುರದ ಜೀವೋತ್ತಮನಾದ ವ್ಯಾಸರಾಯ ಪ್ರತಿಷ್ಟಿತ ಮುಖ್ಯಪ್ರಾಣದೇವರ ಸನ್ನಧಿಗೆ ತಾಯಿ ತಮ್ಮಂದಿರ ಸಹಿತ ಸೇರಿದರು. ಶಾನುಭೋಗ ಗುಂಡಪ್ಪನ ಮನೆಯಲ್ಲಿ ಉಪನಯನ ನಡೆಯಿತು. ಮಂತ್ರಶೇಷ್ಟ ಗಾಯತ್ರಿ ಸಿದ್ಧಿಪಡೆದರು. ಸಂಕಟಗಳ ಪರಿಹರಿಸಿಕೊಳ್ಳಲು

ವೆಂಕಟರಮಣನು ನೆಲಿಸಿರುವ ಉತ್ತನೂರು ಸೇರಿದರು. ಅಲ್ಲಿ ಧನ್ವಂತ್ರಿರೂಪ ಶ್ರೀ ಶ್ರೀನಿವಾಸನನ್ನು ತಮ್ಮ ಭಕ್ತಿ ಗಾನದಿಂದ "ವೆಂಕಟಕೃಷ್ಣಾ" ಎಂದು ಸ್ತುತಿಸಲು ಶ್ರೀ ಹರಿಯೇ ತಾನು ನೂಪುರಗಳನ್ನು ಧರಿಸಿ ಕುಣಿದ. ಜ್ಯೋತಿಷ್ಯವು ಅವರಿಗೆ ವ್ಯಾಪಾರವಾಯಿತು. ಇಂಥಾ ವ್ಯಾಪಾರದಿಂದಾ ಆದವಾನಿ ಗ್ರಾಮದಲ್ಲಿ ತಾವು ಬಿಚ್ಚಿಟ್ಟು ಕೂತಿದ್ದ ಅಂಗಡಿಯನ್ನು ಮುಚ್ಚಿಸಿ, ಲೌಕಿಕ ವ್ಯಾಪಾರವನ್ನು ಭಂಗಮಾಡಿ, ಮಂಗರಾಯ ಸನ್ನಿಧಿಗೆ ಕರೆದೊಯ್ದು, "ಗೋಪಾಲವಿಠ್ಠಲ" ಎಂಬ ಅಂಕಿತ ಅನುಗ್ರಹಿಸಿ ರಂಗನ ಕೊಂಡಾಡಲು ಅನುಗ್ರಹಿಸಿದರು. ಶ್ರೀ ಭೃಗು ಅಂಶ ಸಂಬೂತರಾದ ವಿಜಯುಪ್ರಭುಗಳು, ಭಾಗಣ್ಣ ದಾಸರು ಗೋಪಾಲದಾಸರಾದರು. ಶ್ರೀ ವಿಜಯರಾಯರಿಂದ ಅನುಗ್ರಹಿಸಲ್ಪಟ್ಟ ಗೋಪಾಲದಾಸರ ವದನದಿಂದ ಹರಿದು ಬಂದ ಜ್ಞಾನಸಾಗರ ಬಿಂದುಗಳೇ ಈ ಪದ, ಪದ್ಯ ಸುಳಾದಿಗಳು. ಪ್ರತಿ ಒಂದು ಕ್ಷಣವೂ ತಾವು ಅಕ್ಷರ ಪುರುಷನ ವೀಕ್ಷಿಸುತ್ತಾ, ಅಕ್ಷಯ ಜ್ಞಾನವನ್ನಿಟ್ಟು, ಸೂಕ್ಷ್ಮೋಪಾಸನದಿಂದಾ, ಪ್ರಮೇಯ, ಬಿಂಬೋಪಾಸನಗಳನ್ನು ಅಕ್ಷರಗಳಿಂದ ಸುಲಕ್ಷಣವಾಗಿ ಲಕ್ಷ್ಮೀರಮಣನ ಸ್ತೋತ್ರ ಮಾಡಿ, ನಿರಕ್ಷರ ಕುಕ್ಷಿಗಳಾಗಿ ವೀಕ್ಷಿಸುತ್ತಿರುವ ನಮಗೆ ಅನುಗ್ರಹಿಸಿ ಕೊಟ್ಟಿದ್ದಾರೆ ಈ ಪದ, ಪದ್ಯ, ಸುಳಾದಿಗಳನ್ನು "ಭಕ್ತಿಯಲ್ಲಿ ಭಾಗಣ್ಣ ದಾಸರು".

ಸರ್ವೋತ್ತಮನಾದ ಶ್ರೀಹರಿ ಪಂಡರೀಪುರದಲ್ಲಿ ಕುದುರೆಯನೇರಿ ದರ್ಶನ ನೀಡಿದ್ದ ಸುಳಾದಿ ಅತ್ಯಂತ ಭಕ್ತಿಭರಿತವಾಗಿದೆ. ಪ್ರತಿ ಸುಳಾದಿಯಲ್ಲಿ ಭಾಗಣ್ಣದಾಸರ ಭಕ್ತಿ ಭಾವವು ತುಂಬಿ ತುಳುಕುತ್ತಿದೆ. ಭಗವಂತನಲ್ಲಿ ದೀನ ಪ್ರಾರ್ಥನಾ, ವೈರಾಗ್ಯದ ದೇವರನಾಮದಲ್ಲಿ "ಹೇಂಗೆ ಮಾಡಲಯ್ಯಾ ಕೃಷ್ಣ ಹೋಗುತಿದೇ ಆಯುಷ್ಯಾ" ಎಂಬ ಕೀರ್ತನದಲ್ಲಿ "ಗರುಡ ಪುರಾಣ"ದ ಕೆಲವು ವಿಷಯಗಳು ವಿವರಿಸಿದ್ದಾರೆ. ಗರ್ಭಸ್ಥನಾದ ಜೀವ ಆಲೋಚನೆಯ ಸರಳಿ ವಿವರಣೆಗೆ ಬರುತ್ತದೆ. ಹೀಗೆ ಅನೇಕ ಪದ ಪದ್ಯ ಸುಳಾದಿಗಳಲ್ಲಿ ಪುರಾಣ ಇತಿಹಾಸಗಳು ಕಂಡು ಬರುತ್ತವೆ.

ಈ ಸತೋತ್ರಗಳನ್ನು ತಮ್ಮ ಇಡೀ ಜೀವನವನ್ನೇ ಭಗವಂತನಿಗೆ ಮುಡುಪಾಗಿಟ್ಟು ಸೇಕರಿಸಿ, ಈ ಜ್ಞಾನ ಭಾಂಡಾರವನ್ನು ಆರಿಸಿದವರು ಚಿರಸ್ಮರಣೀಯರಾದ ಶ್ರೀ ಗೋರೆಬಾಳ ಹನುಮಂತರಾಯರು. ಪುನಃ ಈ

ಜ್ಞಾನನಿಧಿಯನ್ನು ಹೊರೆತಂದು ಬರಿಸಿ, ಪಾರಾಯಣಕ್ಕೆ ಅನುಕೂಲವಾಗಿ ಎಲ್ಲಾರ ಕೈಸೇರಿಸುವರು ಮಹಾನ್ ಸಾಧಕರಾದ ಶ್ರೀ ಉಪ್ಪಲಿ ಮಧ್ವರಾಯ ತಾತ ಅವರು. ಇವರಿಬ್ಬರ ಉಪಕಾರ ಚಿರಸ್ಮರಣೀಯವಾದದ್ದು.

ತಾತ ವರ ಅನುಗ್ರಹ ಬಲದಿಂದ, ತಾವು ಪಾರಾಯಣ ಮಾಡುತ್ತಾ ಎಲ್ಲರಿಂದಾ ಪಾರಾಯಣ ಮಾಡಿಸಲು 72 ಸುಳಾದಿಗಳನ್ನು, 48 ಪದಗಳನ್ನು, 10 ಉಗಾಭೋಗಗಳನ್ನು ಮುದ್ರಣ ಮಾಡಿಸುತಿದ್ದಾರೆ ಶ್ರೀ ಗೋವಣ್ಣ.

'ಭ' ಎನಲು ಭಕುತಿ, 'ಗ' ಎನಲು ಜ್ಞಾನ, 'ಣ್ಣ' ಎನಲು ಮುಕ್ತಿಕೊಡುವನು ಪಾರಾಯಣ ಪ್ರಿಯನಾದ ನಮ್ಮ ಲಕ್ಷ್ಮೀನಾರಾಯಣ. ಕಾರಣ ನಾವೂ ಪಾರಾಯಣ ಮಾಡಿ ಧನ್ಯರಾಗೋಣ.

ಏನೂ ಅರಿಯದ, ಮಂದಮತಿಯಾದ ನನಗೆ ಈ ನಾಲ್ನುಡಿಗಳನ್ನು ಮುನ್ನುಡಿಯಾಗಿ ಬರೆದುದಕೆ ಅನುಗ್ರಹಿಸಿದ ಭಾಗಣ್ಣ ದಾಸರ ದಿವ್ಯ ಚರಣಾರವಿಂದಗಳಿಗೆ ಶಿರಬಾಗಿ ನಮಿಸುತ್ತಾ...

ಶ್ರೀ ವಿಜಯದಾಸಾಂತರ್ಗತ ಭಾರತೀರಮಣ ಮುಖ್ಯಪ್ರಾಣಾಂತರ್ಗತ ಶ್ರೀಕೃಷ್ಣಾರ್ಪಣಮಸ್ತು

ಜೈ ವಿಜಯರಾಯ... ಜೈ ವಿಜಯರಾಯ... ಜೈ ವಿಜಯರಾಯ

ಇಂತಿ, ಶ್ರೀ ವಿಜಯ ರಾಘವ ಪಾದ ಸೇವಕ

(ಕೆ.ರಾಜಾರಾಂ)

ಶ್ರೀ ರಾಘವೇಂದ್ರ ಶಿಲಾ ಬೃಂದಾವನ ಸನ್ನಿಧಾನಮ್,

ಗುಂತಕಲ್ಲು.

॥ ಶ್ರೀ ಧನ್ವಂತರಿ ವೆಂಕಟರಮಣ ಪ್ರಸೀದ ॥
॥ ಶ್ರೀ ಗೋಪಾಲರಾಯ ಪ್ರಸೀದ ॥

ಗೋಪಾಲದಾಸರ ಆರಾಧಕರಾದ ಕೀರ್ತಿಶೇಷ ಶ್ರೀ ವೆಂಕೋಬರಾವ ಪಟವಾರಿ ಉತ್ತನೂರು ಕ್ಷೇತ್ರವು ಶ್ರೀ ಗೋಪಾಲದಾಸರ ಕಾರ್ಯಕ್ಷೇತ್ರವೆಂದು ಪ್ರಸಿದ್ಧಿ. ಶ್ರೀ ಧನ್ವಂತರಿ ವೆಂಕಟರಮಣನು ಇಲ್ಲಿಯ ಕ್ಷೇತ್ರ ಮೂರ್ತಿ. ಜನಮೇಜಯ ಮಹಾರಾಜನಿಂದ ಪ್ರತಿಷ್ಠಿತನಾಗಿದ್ದಾನೆ. ಶ್ರೀ ಗೋಪಾಲದಾಸರು ಉಪಾಸಿಸಿದ ಮೂರ್ತಿ. ಮುರಾರಿರಾಯ ಹಾಗು ವೆಂಕಮ್ಮ ದಂಪತಿಗಳಲ್ಲಿ ನಾಲ್ಕು ಅಪರೋಕ್ಷಿ ಜ್ಞಾನಿಗಳು ಜನಿಸಿದರು. ಇವರೇ ಶ್ರೀ ಗೋಪಾಲದಾಸರು, ವರದಗೋಪಾಲದಾಸರು, ಗುರುಗೋಪಾಲದಾಸರು ಹಾಗೂ ತಂದೆಗೋಪಾಲದಾಸರು. ಗಣೇಶಾಂಶ ಸಂಭೂತರಾದ ಗೋಪಾಲದಾಸರು ಚಿಕ್ಕಂದಿನಲ್ಲಿ ಸಂಕಾಪುರದಲ್ಲಿ ಶ್ರೀ ಪ್ರಾಣದೇವರನ್ನು ಉಪಾಸಿಸಿ ಗಾಯತ್ರಿ ಮಂತ್ರವನ್ನು ಸಿದ್ಧಿ ಮಾಡಿಕೊಂಡವರು ಮತ್ತು ಗಾಯತ್ರಿ ಪ್ರತಿಪಾದ್ಯನಾದ ಶ್ರೀಮನ್ನಾರಾಯಣನನ್ನು ಒಲಿಸಿಕೊಂಡವರು. ಶ್ರೀ ಜಗನ್ನಾಥದಾಸರಿಗೆ ಬಂದಉದರಶೂಲೆಯನ್ನು ಶ್ರೀ ವಿಜಯರಾಯರ ಆಜ್ಞೆಯಂತೆ ಇದೇ ವೆಂಕಟರಮಣನ ದೇವಸ್ಥಾನದಲ್ಲಿ "**ಎನ್ನ ಭಿನ್ನಪ ಕೇಳು ಧನ್ವಂತರಿದಯ ಮಾಡು ಸಣ್ಣವನು ಇವ ಕೇವಲ**" ಎಂಬ ಸ್ತೋತ್ರ ಪದದಿಂದ ಧನ್ವಂತರಿಯನ್ನು ಸ್ತೋತ್ರ ಮಾಡಿ ಉದರಶೂಲೆಯನ್ನು ಉಪಶಮನ ಮಾಡಿದರಲ್ಲದೆ ನಲವತ್ತು ವರ್ಷ ಆಯುರ್ದಾನ ಮಾಡಿದರು ಎಂದು ಪ್ರತೀತಿ ಮತ್ತು ಆಪ್ತವಾಕ್ಯಗಳುಂಟು. ಅಂದಿನಿಂದ ಇದು ಶ್ರೀ ಧನ್ವಂತರಿ ವೆಂಕಟರಮಣ ದೇವಸ್ಥಾನವೆಂದು ಪ್ರಸಿದ್ಧಿ ಪಡೆದು ಇಂದಿಗೂ ಭಕ್ತಾದಿಗಳ ದುರಿತಗಳನ್ನು ಕಳೆದು ಅಭೀಷ್ಟೆಗಳನ್ನು ಈಡೇಸಿರುತ್ತಿರುವದು ಜನಜನಿತವಾಗಿದೆ. ಶ್ರೀ ಗೋಪಾಲದಾಸರು ಇದೇ ದೇವಸ್ಥಾನದಲ್ಲಿ ಮುಕ್ತಕಂಠದಿಂದ ವೆಂಕಟರಮಣನ ಪದಪದ್ಯ ಸುಳಾದಿಗಳಿಂದ ಸ್ತೋತ್ರ ಮಾಡಲು ವೆಂಕಟರಮಣನು ಕುಣಿಯುತ್ತಿದ್ದನು ಮತ್ತು ಪುರಜನರೆಲ್ಲ ಕುಣಿವ ನೂಪುರ ಶಬ್ದವನ್ನು ಕೇಳಿಸಿಕೊಳ್ಳುತ್ತಿದ್ದರು ಎಂದು ಅವರ ಚರಿತ್ರಪದದಲ್ಲಿ ಉಲ್ಲೇಖಿತವಾಗಿದೆ. ಅವರು ಉಪಾಸಿಸಿದ ಮೂರ್ತಿಗಳು ಅದ್ಯಾಪಿ ಅವರ ವಂಶೀಕರ ಮನೆಯಲ್ಲಿದ್ದು ದಾಸರಗುಡಿ ಎಂದೇ ಪ್ರಸಿದ್ಧವಾಗಿರುವ ಅವರ ಮನೆಯಲ್ಲಿ ಇವೆ. ಶ್ರೀ ಗೋಪಾಲದಾಸರ ಅಜ್ಞೆಯಂತೆ ಅವರು ಯಾತ್ರೆ ಮಾಡಿದಾಗ ಅವರ ಪವಿತ್ರವಾದಂಥ ಅಸ್ಥಿಗಳನ್ನು ಊರ ಮುಂದಿನ ಭಾವಿಯಲ್ಲಿ ಹಾಕಲಾಗಿದ್ದು ಈ ಭಾವಿಯು ಪವಿತ್ರವಾದ ಕ್ಷೇತ್ರವಾಗಿದೆ.

ದಾಸರಾಯರ ಮನೆ ಬಹಳ ಜೀರ್ಣವಾಗಿ ಬೀಳುವ ಹಂತತಲುಪಿದಾಗ ಅದನ್ನು ಪುನರುಜ್ಜೀವನ ಮಾಡಿಸಬೇಕೆಂದು ಉತ್ತನೂರು ಪಟವಾರಿ ಮನೆತನದ

ಶ್ರೀ ವೆಂಕೋಬರಾಯರು ಪೂಜ್ಯ ಉಪ್ಪಲಿ ತಾತ ಅವರ ಆದೇಶದಂತೆ ದಾಸರಾಯರ ಮುಂದೆಚೀಟಿ ಹಾಕಿ ಪ್ರಶ್ನೆ ಕೇಳಲಾಗಿ ದಾಸರಾಯರಿಂದ ಸಮ್ಮತಿ ಪಡೆದುಕೊಂಡು ಕಾರ್ಯ ಪ್ರವರ್ತರಾದರು ಶ್ರೀ ವೆಂಕೋಬರಾಯರು. ದಾಸರಾಯರು ಉಪಾಸಿಸಿದ ಮೂರುತಿಗಳನ್ನು ಹೊರಗೆ ತೆಗೆಸಿ ಅವುಗಳ ಪೂಜೆಗೆ ವ್ಯವಸ್ಥೆ ಮಾಡಿದವರು ಪೂಜ್ಯ ಶ್ರೀ ಗುರುಮಧ್ವರಾವ್ ಉಪ್ಪಲಿ ಇವರ ಅಣತಿಯಂತೆ ಶ್ರೀ ವೆಂಕೋಬರಾಯರು ವ್ಯವಸ್ಥೆ ಮಾಡಿದರು. ಇವರು ಮತ್ತು ಇವರ ಅಣ್ಣಂದಿರಾದ ಕೀ.ಶೇ.ಶ್ರೀ ಏಗನೂರು ಕಿಷನರಾಯರು ದಾಸರಾಯರ ಗುಡಿಯನ್ನು ನಿತ್ಯ ಕಸಗುಡಿಸುತ್ತಿದುದನ್ನು ನಾವೆಲ್ಲರು ನೋಡಿದ್ದೇವೆ. ಅಂದಿನಿಂದ ನಿಸ್ಪ್ರಹರಾಗಿ ಶ್ರೀ ಗೋಪಾಲದಾಸರ ಸೇವೆಯನ್ನು ಅಖಂಡ 59 ವರ್ಷ ಮಾಡಿ ತಮ್ಮ ಜೀವನವನ್ನೆ ಸಾರ್ಥಕಗೊಳಿಸಿದರು. ಇದಕ್ಕೂ ಪೂರ್ವದಲ್ಲಿ ಉತ್ತನೂರು ವೆಂಕಣ್ಣನವರ ತಾಯಿಯವರಾದ ಕೀ.ಶೇ.ರಾಮಮ್ಮ ಇವರು ದಾಸರಾಯರ ಆರಾಧನೆಯನ್ನು ಬೆಂಗಳೂರಿನ ಕಡ್ಡಿ ಶ್ರೀನಿವಾಸಾಚಾರ್ಯ ಇವರ ಅಧ್ವರ್ಯದಲ್ಲಿ ಶ್ರೀ ಉತ್ತನೂರಿನಲ್ಲಿ ಆಚರಿಸುತ್ತಿದ್ದರು. ತದನಂತರದಲ್ಲಿ ಶ್ರೀ ವೆಂಕೋಬರಾಯರು ತಮ್ಮ ಪರಿವಾರದೊಂದಿಗೆ ಸೇರಿ ಪ್ರತಿ ವರ್ಷ ಶ್ರೀ ಗೋಪಾಲದಾಸರ ಆರಾಧನೆಯನ್ನು ಅತಿ ವಿಜೃಂಭಣೆಯಿಂದ ನಿರಪೇಕ್ಷರಾಗಿ ಮಾಡಿದಂಥ ಪುಣ್ಯ ಜೀವಿಗಳು. ಇವರ ಮತು ಪೂಜ್ಯ ತಾತಅವರ ಒಡನಾಟ, ಸಖ್ಯ ಅವಿಸ್ಮರಣೀಯವಾದುದು. ಯಾವುದೇ ಕಾರ್ಯವನ್ನು ಪೂಜ್ಯತಾತಅವರನ್ನು ಮುಂದಿಟ್ಟುಕೊಂಡು ಮಾಡುತ್ತಿದ್ದುದು ಎಲ್ಲರಿಗೂ ಅನುಭವವೇದ್ಯ. ಪೂಜ್ಯತಾತಾಅವರಾದರೂ ಉತ್ತನೂರ ವೆಂಕೋಬರಾಯರ ಮನೆ ತಮ್ಮ ತವರು ಮನೆ ಎಂದು ಸ್ಮರಿಸುತ್ತಿದ್ದರು. ಅವರಿಬ್ಬರ ಅವಿನಾಭಾವ ಸಂಬಂಧ ಪೂಜ್ಯ ಗೋಪಾಲದಾಸರು ಬಲ್ಲರು ಎಂದರೆ ತಪ್ಪಾಗಲಾರದು. ಅವರ ಪರಿವಾದವರು ಅದ್ಯಾಪಿ ಪೂಜ್ಯತಾತರವರು ಈ ಹಿಂದೆ ಸಂಗ್ರಹ ಮಾಡಿ ಪ್ರಕಾಶನಗೊಳಿಸಿದ ಶ್ರೀ ಗೋಪಾಲದಾಸರ ಕೃತಿಗಳನ್ನು ಪುನರ್ಮುದ್ರಣ ಮಾಡಿಸುತ್ತಿರುವದು ಆ ಎರಡು ಹಿರಿಯಚೇತನರಿಗೆ ಸಮ್ಮತವಾಗಿದೆ. ಪ್ರಸ್ತುತ ಗ್ರಂಥದ ಮುದ್ರಣ ವೆಚ್ಚವನ್ನು ವೆಂಕೋಬರಾಯರ ಮಗಳು ಮತ್ತು ಅಳಿಯಂದಿರರಾದ ಶ್ರೀಮತಿ ಭಾಗ್ಯಮ್ಮ ಮತ್ತು ರಾಜಣ್ಣ ದಂಪತಿಗಳು ತಮ್ಮ ತಂದೆ ತಾಯಿಗಳಾದ ಕೀ.ಶೇ. ಚೊಕ್ಕನಹಳ್ಳಿ ವೆಂಕೋಬರಾವ ಮತ್ತು ನಿರ್ಮಲಾಬಾಯಿ ಇವರ ಸ್ಮರಣಾರ್ಥ ಮತ್ತು ಪಟವಾರಿ ಸಮಸ್ತ ಪರಿವಾರದವರಿಗೆ ಗೋಪಾಲದಾಸರ ಅಂತರ್ಗತ ಧನ್ವಂತರಿ ವೆಂಕಟರಮಣನು ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

**ಶ್ರೀ ಶ್ರೀನಿವಾಸ ಕಟ್ಟಿ**
ಬೆಂಗಳೂರು



|| ಶ್ರೀ ವಿಠ್ಠಲ ಪ್ರಸೀದ ||

ಶ್ರೀ ಕೇಶವ ಸ್ವಾಮಿನಾಂ

ಶ್ರೀ ರಾಘವೇಂದ್ರ ಗುರುವಂತರ್ಗತ
ಅಸ್ಮದ್ ಗುರುರಾಜ ಮಣಿನಾಂ

|| ಶ್ರೀ ರುಕ್ಮಿಣೀ ಸತ್ಯಭಾಮಾ ಶೋಭಿತಃ ಪಾರ್ಶ್ವಯೋಸ್ತದಾ |
| ಸುಪ್ರಸನ್ನೋಸ್ತು ಗೋಪಾಲ ಕೃಷ್ಣಃ ಪ್ರಾಣೇಶ ಸೇವಿತಃ || ೧ ||
| ಶ್ರೀ ರಾಮೋ ವಿಠ್ಠಲ ಶ್ಚೈವ ಹಯಾಸ್ಯೋ ನರಸಿಂಹಕಃ |
| ಮದಾಂತರ್ಯಗಃ ಸಮುಪಾಸ್ಯಾಸ್ತು ಕುರ್ವಂತು ಮಮ ಮಂಗಲಂ || ೨ ||

| ತುಂಗಾತೀರ ಸುವೇಣಿ ಸೋಮಪುರಗಾತ್ ಗೋಪಾಲಕೃಷ್ಣ
ಪ್ರಿಯಾಜ್ಞ ತತ್ವಜ್ಞ ಗುರೋಃ ಪ್ರಸಾದ ಬಲ ತತ್ಸೂನು ಕೃಷ್ಣಾರ್ಯತಃ |
ಶ್ರೀ ಸೋಮ ದ್ವಯ ಯಾಜಿನೋ ಜನಿತಾಚ್ಛ ರಾಘವೇಂದ್ರ ಪ್ರಿಯಾ-
ದ್ವಿಜ ವಂಶ ಜನೇ ಜನಾರ್ದನ ಗುರೋರ್ಜಾತೋಸಿ ಕೃಷ್ಣಾಭಿದಃ ||೧||
| ಗದ್ವಾಲ ಶ್ರೀತ ರಾಮಭೂಪ ಮಹಿತ ಶ್ರೀ ಕೇಶವ ಸ್ವಾಮಿನೋ
ಭೂತ್ಯಾ ಪ್ರೇರಣಾ ಪಾಲ ಸೋಮ ಸವನಂ ಕರ್ತುಂ ಪ್ರಸಕ್ತೋಧುನಾ ||
ಸಂತಃ ಸರ್ವ ಸಮಸ್ತ ವಿತ್ ಸುಸುಹೃದಾಗತ್ಯ ನಿಮರ್ಜ್ಞರಾ ದೃಷ್ಟ್ವಾ
ಯಜ್ಞಮಿಮಂ ಕೃಪಾಂ ಮಯಿ ಸದಾ ಕುರ್ವಂತಿತಿ ಪ್ರಾರ್ಥಯೇ ||೨||

ಶ್ರೀ ಮಧ್ವಾನಂದ ತೀರ್ಥ
ಸುತೀರ್ಥ ಪ್ರವರ್ತಕತ್ವಾದಿ
ಸದ್ಗುಣಾಲಂಕೃತನಾಂ ಸರ್ವ
ಜೀವೋತ್ತಮ ಶ್ರೀಹರಿಲಾಜ್ಞಾ ಪಾತ್ರಾಣಾಂ

ಶ್ರೀ ಗದ್ವಾಲ ಸಂಸ್ಥಾನ ಸ್ಥಿತ
ವಿಜಿ ಗೋಪಾಲ ಕೃಷ್ಣಾಚಾರ್ಯ
ಮದ್ ಕೃತ ಉಭಯ ಕುಶಲೋಪರಿ
ತರವಾಯ

“ಅಗ್ನೇ ಶ್ರಿಯಾ ವೆತಾಮ್ ಇತಿ” ಭಾಷ್ಯೋಕ್ತ ರೀತ್ಯಾ
ಬಹುರೂಪಸನಾಧಿಷ್ಠಾನ ಜಿಹ್ವಾಗ್ರವಾಹಿತ ಅಗ್ನಿದೇವಾಧಿಷ್ಠಿತ
ಮುಖ್ಯಪ್ರಾಣಾಂತರ್ಗತ ಹರಿಗೆ ಸಮೇತ ಜಾಮದಗ್ನಿ ಪ್ರೀತ್ಯರ್ಥಂ

ಪರಮ ಮುಖ್ಯಾನು ಮುಖ್ಯ ಮುಖ್ಯ ವೃತ್ತಿಭಿಃ ಹರಿ
ಮುಖ್ಯಾರ್ಥ ವಾಚ್ಯ ಯಜ್ಞ ಪದ ವಾಚ್ಯ ಸೋಮ ಕ್ರತು ಯ
ಸವನ ರೂಪೋ ಚತುರ್ಥ ...ನಾಮಕ ಕ್ರತುಂ ವಿಶೇಷೋ
ಅಯೋರ್ನ್ಯಃ ನಿಶ್ಚಿತಃ। ಶ್ರೀ ಕೃಷ್ಣಾ ವೇಣಾ ತುಂಗಭದ್ರಾ ಯೋಃ
ಪಂಚ ಕೋಶ ಮಧ್ಯಕ್ಷೇತ್ರೇ ಸಹದಭಿಮತ।

ರಾಯಚೂರು ಪುರಸ್ಥ ಮಹಾಮಹಿಮ್ನ ಆವಿರ್ಭೂತ
ಶ್ರೀ .......... ಸನ್ನಿಧೌ
ಶ್ರೀ ಗದ್ವಾಲ ಸಂಸ್ಥಾನಾಧೀಶ ಶ್ರೀ ಆಜ್ಞಾ ಧಾರಕ ರಾಮ ಭೂಪಾಲ
ಮಹಾರಾಜ ಸಹಾಯ್ಯೇನ ರಾಜಶ್ರೀ ಅಬಕಾರಿ ರಂಗಣ್ಣ ತಥಾ
ಪ್ಲೀಡರ ಭೀಮಸೇನರಾವ, ವಕೀಲ ಗಿರಿರಾಯ ಪ್ರಭೃತಿ
ಗೃಹಸ್ಥ ಸಹಾಯೇನ ಚ ರಾಜ ಮಂದಿರ ಉದ್ಯಾನ ಸಮೀಪೆ
ಪ್ರವರ್ತತೆ। ಮನ್ಮಥ ನಾಮ ಸಂವತ್ಸರ ಮಾಘ ಶುದ್ಧ ೧
ಬುಧವಾರ ಪರ್ಯಂತ ಅಯಂ ಯಜ್ಞ ಮಹೋತ್ಸವೋ
ಭವತಿ ಭವಂತಃ। ಸಕುಟುಂಬ ಸಪರಿವಾರ ಆಗತ್ಯ
ಏತೈ ಯಜ್ಞೋತ್ಸವಂ ದೃಷ್ಟ್ವಾ ಅಸ್ಮಾನ್ ಮನೋಹರ್ಷಂ
ಕುರ್ಯಾರಿತ್ಯಪೇಕ್ಷ್ಯಂ ಪ್ರತಿ ಮಂಗಲಂ।

ವ್ಯವಸ್ಥಾಪಕ
ಚಂದ್ರರಾವ್

ಚಂದ್ರೋದಯ ಛಾಪಖಾನಾ
ರಾಯಚೂರು.

ಸೂಚನೆ : ಐಜಿ ಸ್ವಾಮಿಗಳ ಮೊಮ್ಮಕ್ಕಳಾದ ಶ್ರೀ ಹಿರೆ ವೇಣುಗೋಪಾಲ ಕೃಷ್ಣಾಚಾರ್ ರಾಯಚೂರಿನಲ್ಲಿ ಮಾಡಿದ ಮೂರನೇ ಸೋಮಸವನದ ಆಹ್ವಾನ ಪತ್ರಿಕೆ

॥ ಶ್ರೀ ವಿಜಯರಾಯ ವಿಜಯತೇ ॥

॥ ಶ್ರೀ ರಾಮ ॥

ಭಾಗಣ್ಣ ಆಯ್ಯಾನ್ವಿಗೆ,

ಸ್ವಸ್ತಿಶ್ರೀ ಜಯಾಭ್ಯುದಯ ಶಾಲಿವಾಹನ ಶಕೆ ವರುಷಂಗಳು 1685ನೆಯ ಸ್ವಭಾನು ನಾಮ ಸಂವತ್ಸರದ ಆಷಾಢ ಶುದ್ಧ ಪಂಚಮಿಯಲ್ಲಿ ವೇದಮೂರ್ತಿ ಸಂಕಾಘುರ ಮುರಾರಿ ಭಟ್ಟರ ಮಕ್ಕಳು ಶ್ರೀನಿವಾಸ ಭಟ್ಟರಿಗೆ (ಗುರುಗೋಪಾಲದಾಸರಿಗೆ) ಐಜಿ ಸೇಮೆಯ ನಾಡಿ ಕುಲಕರ್ಣಿ ಹಳ್ಳಿ ತಿಮ್ಮಾಜಿ ಮೊಮ್ಮಗ ಬರೆದುಕೊಟ್ಟ ಭೂದಾನ ಪತ್ರ, ಕ್ರಮವೆಂತೆಂದರೆ, ನಮ್ಮ ಹಿರಿಯರಿಗೆ ಸುಕೃತವಾಗಿ ಕರ್ಕಾಟಕ ಭಾಗೀರಥೀ ಪರ್ವಣೀ ಪುಣ್ಯಕಾಲದಲ್ಲಿ, ರಾ॥ ಅಯ್ಯನವರ ನಿಮಿತ್ಯವಾಗಿ ನಾನು ಸಂಕಲ್ಪ ಮಾಡಿದ್ದರೆಂದಕಾರಣ ನಿಮಗೆ ನಮ್ಮ ಸಂಕಾಪುರದ ಪಾತೂರು ಚೇನು ಪೊಳಗೆ ಶೇರಿದ ನಾಲ್ಕು ಮಾನಕ್ಕೆ 60/06, ಎರಡು ಕೂರಿಗಿ ಹೊಲ ನನ್ನ ತ್ರಿಕರಣ ಶುದ್ಧವಾಗಿ ನಿಮಗೆ ತೋರಿಸಿದ ಪೊಲಿಮೇರ ಪೂರ್ವಕ್ಕೆ ಗೌಡರ ಮಾನ್ಯ ದಕ್ಷಿಣಕ್ಕೆ ತಿಮ್ಮಾರೆಡ್ಡಿ ಹೊಲ ಎದುರು ಪೊಲಿಮೇರ. ಪಶ್ಚಿಮಕ್ಕೆ ನಮ್ಮ ಕುಂಧಾಮಾನ್ಯ ಪಾತೂರುಹೊಲ, ಉತ್ತರಕ್ಕೆ ಬಾಬಾಪುರ ಮಾನ್ಯ, ಈ ಪ್ರಕಾರ ಚತುಃಸೀಮ ಏರ್ಪಾಟು ಮಾಡಿ ಹನ್ನೆರಡು ಮಾನ ಪಂಪಿನ ವೊಳಗೆ ಉತ್ತರಭಾಗದ ತಟುಕೊಟ್ಟು ಇದ್ದೇನು. ನಿಮ್ಮಪುತ್ರ ಪೌತ್ರ ಪಾರಪರ್ಯಂತರ ಅನುಭವಿಸಿಕೊಂಡು ಸುಖದಲ್ಲಿ ಇಹೋದು. ನಮ್ಮ ವಂಶದ ಪೊಳಗೆ ದಾರು ಅಭ್ಯುದನ ಮಾಡೋ ಕಾರಣವಿಲ್ಲಾ. ಹೀಗೆಂದು ನಮ್ಮ ಹಿರಿಯರು ನಮ್ಮಗೆ ನಿರೂಪಣ ಬರೆದುಕೊಟ್ಟ ಭೂಧಾನ ಪತ್ರವು. ಇದಕ್ಕೆ ದಾರು ಅಕ್ಷೇಪಣ ಮಾಡಿದರೆ ಕಾಶೀಲಿ ಗೋಹತ್ಯ ಬ್ರಹ್ಮಹತ್ಯಾ ಮಾಡಿದ ಪಾಪಕ್ಕೆ ಹೋಗುವರು ಯಂದು ತ್ರಿಕರಣ ವಚನಗಳು (ಇದಕ್ಕೆ ಧರ್ಮ ವಷನಗಳು) ಸವಹಸ್ತೆ ತಿಮ್ಮಯ್ಯ ಇಪ್ಪಿತವು.

**ಧರ್ಮವಚನಗಳು**

**ಶ್ಲೋಕ** ॥ ಸ್ವಧತ್ತ ದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ । ಪರದತ್ತಾಪಹಾರೇಣ ಸ್ವದತ್ತು ನಿಷ್ಪಲಂ ಭವೇತ್ ॥ ದಾನಪಾಲನಯೋರ್ಮಧ್ಯೆ ದಾನಾಶ್ರೇಯೋನು ಪಾಲನಂ। ದಾನಾ ಸವರ್ಗನಾವಾಪ್ನೋತಿ ಪಾಲನಾದಚ್ಯುತಂ ಪದಂ ॥

॥ ಶ್ರೀಕೃಷ್ಣಾರ್ಪಣಮಸ್ತು ॥

**ಸಾಕ್ಷಿಗಳು** : ಐಜಿ ನರಸಿಂಹಾಚಾರ್ಯ ಪುತ್ರ ರಾಮಾಃ

ಉತ್ತನೂರು ಗೌಡಾ ಕುಲಕರ್ಣಿರು : ಭೀಮಣ್ಣಮಗ ಶೇಷಗಿರಿ 2. ಸಾಕ್ಷಿ ಉತ್ತನೂರು ಕುಲಕರ್ಣಿ ಕೃಷ್ಣಯ್ಯನ ಮಗ ಶೀನ್ಯಾ.

ತಿಮ್ಮಾರೆಡ್ಡಿ ಮನವಡು ನಾರಾಯಣ ವಪ್ಪಿತಮು. ಹನ್ಮರೆಡ್ಡಿಮನವಡು ತಿಮ್ಮನ್ನ ವಪ್ಪಿತಮು. ಚಿಕ್ಕಲಮು ದೇಶಪಾಂಡೆ ತಿಮ್ಮಯ್ಯ ಪರಗಣನೆ ಐಜಿ ಕಸಬಾ. ವಲ್ಲೂರು, ಚಾಗಾಪುರಮು.

॥ ಶ್ರೀ ವಿಜಯರಾಯ ವಿಜಯತೇ ॥

ಶ್ರೀ ಗೋಪಾಲದಾಸ ಗುರುಭ್ಯೋನಮಃ || ಶ್ರೀ ಲಕ್ಷ್ಮೀ ವೆಂಕಟರಮಣ ಪ್ರಸನ್ನ || ಋಖ್ ಶಾಖಾಧ್ಯಾಯಿ

## ಶ್ರೀ ಹರಿತಸ ಗೋತ್ರೋದ್ಭವರಾದ

ಉತ್ತನೂರು ಗ್ರಾಮನಿವಾಸರಾದ ಶ್ರೀ ಗೋಪಾಲದಾಸವರ್ಯರ ವಂಶವೃಕ್ಷ. ಇವರ ಜನ್ಮಸ್ಥಾನ ರಾಯಚೂರು ಜಿಲ್ಲೆಗೆ ಸೇರಿದ ಮೊಸರಕಲ್ ಗ್ರಾಮ, ಇವರ ತಾಯಿ ವೆಂಕಮ್ಮ ಗದ್ವಾಲ ತಾಲುಕಕ್ಕೆ ಸೇರಿದ ಉತ್ತನೂರು ವಂಜರಾ ಸಂಕಾಪುರದಲ್ಲಿ 5ನೇ ವರ್ಷ ವಯಸ್ಸಿನಿಂದ ವಾಸಸ್ಥಳವನ್ನಾಗಿ ಮಾಡಿಕೊಂಡರು. ಇವರ ಚರಿತ್ರೆಯಿಂದ ಕೆಳಕಂಡ ವಿಷಯಗಳು ತಿಳಿದುಬರುತ್ತಿವೆ.



॥ ಶ್ರೀ ಗೋಪಾಲವಿಠ್ಠಲ ಪ್ರಸನ್ನೋಭವತು ॥

ಗದ್ವಾಲಿ ಸಂಸ್ಥಾನಕ್ಕೆ ಶೇರಿದ ಉತ್ತನೂರು ಗ್ರಾಮ ಕುಲಕರ್ಣಿ
ಮೂಲ ಪುರುಷ ಭೀಮಣ್ಣಯ್ಯನವರ ವಂಶವೃಕ್ಷ 1652
ಆಗ್ಗೆ ಶ್ರೀಭಾಗಣ್ಣ ದಾಸರ ವಯಸ್ಸು 8 ವರ್ಷಗಳು

## ಮೂಲಪುರುಷರು

ಉತ್ತನೂರು 1. ಕುಲಕಣಿ ಭೀಮಣ್ಣ ಶಕೆ 1644ಕ್ಕೆ ಪೂರ್ವ ಈ ಕುಲಕರ್ಣಿ ಭೀಮಣ್ಣ ಹಪ್ತಿ ದಶೆಯಿಂದ ಭಾಗಣ್ಣದಾಸರು ತಾಯಿ ವೆಂಕಮ್ಮ ಖಣ ನಿಂದ್ರಿಸಿ ಭಾವಿ ಹತ್ತಿಲಿ ಮನೆಗೆ ತರಲಿಸಿದೆ ಬಾಧೆಪಡಿಸಿದ ಕಾರಣ ಭಾಗಣ್ಣನವರು ಈ ಕುಲಕರ್ಣಿ ಇವರಿಗೆ **ವಂಶಕ್ಕೆ ನಮ್ಮಂಥ ಮಕ್ಕಳು ಇಲ್ಲದೆ ಹೋಗಲೆಂದು ಶಾಪ ಕೊಟ್ಟರು. ಅಲ್ಲಿಂದ ದತ್ತ ಸಂತತಿ ಆಯಿತು.**

**2. ಶೇಷಗಿರಿ ಶಕೆ ॥ 1684**

**3. ಕ್ರಿಷ್ಟಪ್ಪ**

**4. ಸೀನಪ್ಪ**

**5. ಶೇಷಪ್ಪ**

**6. ಯಂಕಪ್ಪ – ಪತ್ನಿ ಕ್ರಷ್ಟಮ್ಮ**




ಇವರಿಂದ ಶ್ರೀಭಾಗಣ್ಣದಾಸರು ಕೊಟ್ಟ ಶಾಪ ನಿವೃತ್ತಿ ಆಯಿತು.
ದಾಸರ ಅನುಗ್ರಹದಿಂದ ಸಂತಾನ ಬೆಳೆಯಿತು.

# ಕೃತಜ್ಞತೆಗಳು

ಶ್ರೀ ಗೋಪಾಲದಾಸರ ಕೃತಿಗಳನ್ನು ಪ್ರಕಾಶನಗೊಳಿಸುವದಕ್ಕೆ ಹರ್ಷವೆನಿಸುತ್ತದೆ. ಈ ಹಿಂದೆ ಪೂಜ್ಯ ಉಪ್ಪಲಿ ಮಧ್ವರಾಯರು ಸಂಗ್ರಹಿಸಿ ಪ್ರಕಾಶನಗೊಳಿಸಿದ್ದ ಪ್ರತಿಗಳು ಉಪಲಬ್ಧವಿಲ್ಲವಾದ ಕಾರಣ ಪ್ರಸ್ತುತ ಗ್ರಂಥ ಪ್ರಕಾಶನಗೊಳಿಸಲಾಗುತ್ತಿದೆ. ಇದಕ್ಕೆ ಪ್ರೇರಣೆ ಪೂಜ್ಯ ಉಪ್ಪಲಿ ತಾತಾಅವರು ಮತ್ತು ನಮ್ಮ ತಂದೆಯವರಾದ ಕೀ.ಶೇ.ಶ್ರೀ ವೆಂಕೋಬರಾಯರು. ಪ್ರಸ್ತುತ ಹೊತ್ತಿಗೆಗೆ ಪೂಜ್ಯ ಶ್ರೀ ವಿದ್ಯೇಶತೀರ್ಥರು, ಪೀಠಾಧಿಪತಿಗಳು ಜಗದ್ಗುರು ಶ್ರೀ ಮಧ್ವಚಾರ್ಯರ ಮೂಲಮಹಾಸಂಸ್ಥಾನ ಭಂಡಾರಕೇರಿ ಮಠ ಇವರು ಆಶೀರ್ವಾದಪೂರ್ವಕ ಅನುಗ್ರಹಸಂದೇಶ ನೀಡಿ ಹರಸಿದ್ದಾರೆ. ಪೂಜ್ಯ ತಾತಾಅವರು ಸಂಗ್ರಹ ಮಾಡಿ ಪ್ರಕಾಶನಗೊಳಿಸಿದ ಇದೇ ಗ್ರಂಥಕ್ಕೆ ದ್ವಂದ್ವ ಮಠಾಧೀಶರಾದ ಪ್ರಾತಃಸ್ಮರಣೀಯರಾದ ಶ್ರೀ ವಿದ್ಯಾಮಾನ್ಯತೀರ್ಥರು ಅನುಗ್ರಹಸಂದೇಶ ನೀಡಿ ಹರಸಿದ್ದನ್ನು ಸ್ಮರಿಸುತ್ತ ಪ್ರಸ್ತುತ ಗ್ರಂಥಕ್ಕೆ ಅದೇ ಮಠದ ಪೀಠಾಧಿಪತಿಗಳಾದ ಶ್ರೀ ವಿದ್ಯಾಮಾನ್ಯತೀರ್ಥರ ವರಕುಮಾರರಾದ ಶ್ರೀ ವಿದ್ಯೇಶತೀರ್ಥರು ಸಂದೇಶ ನೀಡಿ ಹರಸಿದ್ದು ನಮ್ಮ ಸೌಭಾಗ್ಯ, ಅವರಿಗೆ ನಮ್ಮ ಅನಂತ ಭಕ್ತಿಪೂರ್ವಕ ನಮನಗಳು. ಅದರಂತೆ ನಡೆದಾಡುವ ರಾಯರೆಂದೇ ಪ್ರಖ್ಯಾತರಾದ ಪೂಜ್ಯ ಶ್ರೀ ಸುಶಮೀಂದ್ರತೀರ್ಥರ ವರಕುಮಾರರಾದ ಪೂಜ್ಯ ಶ್ರೀ ಸುವಿದ್ಯೇಂದ್ರತೀರ್ಥರು ಅನುಗ್ರಹ ಸಂದೇಶ ದಯಪಾಲಿಸಿ ಹರಿಸಿದ್ದಾರೆ. ಅವರಿಗೆ ನಮ್ಮ ಭಕ್ತಿಪೂರ್ವಕ ಪ್ರಣಾಮಗಳು. ದಾಸ ಸಾಹಿತ್ಯದಲ್ಲಿ ವಿಶೇಷ ಕೃಷಿ ಮಾಡಿ ಅನೇಕ ಗ್ರಂಥಗಳನ್ನು ಪ್ರಕಾಶನಗೊಳಿಸಿದ ದಾಸಶಾಸ್ತ್ರನಿಧಿ ಪೂಜ್ಯ ಶ್ರೀ ಎಮ್.ಟಿ. ಪ್ರಲ್ಹಾದರವರು ಶುದ್ಧಪ್ರತಿ ಪರಿಷ್ಕಾರಮಾಡಿ ಸಹಾಯ ಮಾಡಿದ್ದಾರೆ. ಶ್ರೀ ಕೆ.ರಾಜಾರಾಂ, ಗುಂತಕಲ್ ಅವರು ಮುನ್ನುಡಿಯನ್ನು ಬರೆದುಕೊಟ್ಟು ಅನುಗ್ರಹಿಸಿದ್ದಾರೆ. ಶ್ರೀ ಎಮ್.ಟಿ.ಪ್ರಹ್ಲಾದ ಮತ್ತು ಶ್ರೀ ಕೆ.ರಾಜಾರಾಂ ಇವರುಗಳಿಗೆ ನಮ್ಮ ಕೃತಜ್ಞತಾಪೂರ್ವಕ ಸಾಷ್ಟಾಂಗ ನಮಸ್ಕಾರಗಳು. ಸುಂದರವಾಗಿ ಮುದ್ರಿಸಿಕೊಟ್ಟ ಆನಂದ ಪ್ರಿಂಟರ್ಸ್‌ನ ಯಜಮಾನರಾದ ಶ್ರೀ ರಾಘವೇಂದ್ರಾಚಾರ್ಯ ಪುರಾಣಿಕ್ ಇವರಿಗೆ ಹಾಗೂ ಪ್ರತ್ಯಕ್ಷವಾಗಿ ಮತ್ತು ಪರೋಕ್ಷವಾಗಿ ಗ್ರಂಥ ಪ್ರಕಾಶನದಲ್ಲಿ ಸಹಾಯ ಮಾಡಿದ ಎಲ್ಲ ಆಧ್ಯಾತ್ಮ ಬಂಧುಗಳಿಗೆ ನಮ್ಮ ವಂದನೆಗಳು.

**ವೆಂಕಟಕೃಷ್ಣ ಭಜನಾ ಮಂಡಳಿ ಮತ್ತು**
**ಉತ್ತನೂರು ಪಟವಾರಿ ಬಂಧುಗಳು**

## ಪರಿವಿಡಿ

## ಮಂಗಳಪದ



## ಶ್ರೀ ಗೋಪಾಲದಾಸರ ಪದಗಳು

## ಶ್ರೀ ಗೋಪಾಲದಾಸರ ಉಗಾಭೋಗಗಳು



## ಪದ

॥ ಶ್ರೀವಿಜಯ ವಿಠ್ಠಲ ಪ್ರಸೀದತು ॥

ಧ್ರುವತಾಳ

## ಸುಳಾದಿ 1

ರಾಗ : ಭೈರವಿ

ನೀಲಗುದರಿಯನೇರಿ ಶಾಲು ಸೊಂಟಕೆ ಸುತ್ತಿ
ಶಾಲು ಕುಪ್ಪಸ ತೊಟ್ಟು ಮೇಲೆ ಮೇಲೆ ಮೋಹನ್ನ ಹಾಕಿ
ಓಲ್ಯಾಡಿಸುತ್ತ ವಂಟಿ ಥಾಳಾಗಿ ಶೋಭಿಸಲು
ಸಾಲು ಬೆರಳುಂಗುರ ಕೈಯಲಿ ಖಡ್ಗವ ಪಿಡಿದು
ತೋಳು ತಾಯಿತ ಶಿರಕೆ ಮೇಲಾದ ವಸ್ತ್ರ ಸುತ್ತಿ
ಫಾಲ ಕಸ್ತೂರಿನಿಟ್ಟು ಮೈಲಿ ಗಂಧವ ಪೂಸಿ
ಪಾಲಾಯನಾದಿ ಅಶ್ವವೇರಿ ಓಲ್ಯಾಡಿಸುತ್ತ
ಆಲೆನಾಹಿ ಎಂದು ಕೇಳಿದವ ನಾರವ್ವ
ವೇಳಸಾಲಧ್ಧೋಯಿತು ಕೇಳುವದಕೆನಗೆ
ಹೇಳುವದಕೆ ವಚನ ಗದ್ಗದದಿ
ಏಳದು ವಚನ ಉಚ್ಚರಿಸುವೆನೆನಲು
ಆಲೋಚನಿಗೆ ಅತಿ ವಿಚಿತ್ರವು
ಕೇಳಿಲ್ಲ ಕಂಡಿಲ್ಲ ಇಂಥ ಪುರುಷನ್ನ ಎಂದು
ಕಾಳಗತ್ತಲು ಅಲ್ಲ ಅತ್ತ ನೋಡು ಹಗಲು
ಕೇಳು ತಗ್ಗು ಮಿಟ್ಟಿ ಮೇಲೆ ಮಂಜರವಲ್ಲ
ಹೇಳಲೆ ನಾ ನಿಂದು ಸೋಜಿಗವೆ
ಕಾಲು ಏಳವು ಮುಂದೆ ನಡೆಯಲಿ ಎನಗಿನ್ನು
ಆಲೋಚನೆ ಎಲ್ಲ ಅತ್ತಲಾಗಿ ಎನ್ನ
ಕೇಳಿದನಲ್ಲೇ ಅರೆ ಮಾತಿನಿಂದಲಿ ಇನ್ನು
ಹೇಳುವ ಪುರುಷ ಆವನಾಗುವನು
ಆಲೋಚನೆಗೆ ಎನಗೆ ತೋರುತಲಿದೆ ತುಲಸಿ
ಮಾಲೆ ಪರಿಮಳ ಗಂಧ ಕುರುಹು ತಿಲಕದಿಂದ
ಶೀಲಮೂರುತಿ ಪಂಢರಿ ರಾಯಾ ಗೋಪಾಲವಿಠ್ಠಲ
ಓಲ್ಯಾಡಿ ಕುದುರೆ ಓಡ್ಯಾಡಿಸುತ್ತ ಪೋದನಲೆ ॥ 1 ॥

ಮಟ್ಟತಾಳ

ಕಂಡಿರ್ಯಾ ಕಂಡಿರ್ಯಾಖಂಡ ವ್ಯಾಪುತನಿವ ॥
ಕಂಡಿರ್ಯಾ ಕಂಡಿರ್ಯಾ ಬೊಮ್ಮಾಂಡ ದೊಡೆಯನ ॥
ಕಂಡಿರ್ಯಾ ಕಂಡಿರ್ಯಾ ಅಜಭವಾದಿಗಳ ॥
ತೋಂಡರಮಾಡಿ ಬಿಡದ್ಯಖಂಡಪೊರೆವವನ
ಕಂಡಿರ್ಯಾ ಕಂಡಿರ್ಯಾ ಸರ್ವಜೀವರ ಪಶು
ಹಿಂಡು ಮಾಡಿ ಬಿಡದೆ ಕಾಯುವ ಗೋಪಾಲನ
ಕಂಡಿರ್ಯಾ ಕಂಡಿರ್ಯಾ ಮಣಿಮೌಳಿ ಮಲ್ಲಿಗೆ ದಂಡೆಯು
ಮಂಡಿಯು ಶೋಭಿಸೆ ಮುದ್ದು ಮೊಗದ ಚಲುವ
ಪುಂಡರೀಕದಳನಯನ ಕಸ್ತೂರಿತಿಲಕ
ಕುಂಡಲಕರ್ನ ಕಪೋಲ ತತ್ಥಳಿಸುತ್ತ
ಪುಂಡರೀಕ ತುಲಸಿ ದಂಡೆಯು ಕೊರಳೊಲಿಯೆ
ಚಂಡು ಬೊಗರಿ ಚಿಣಿ ಗೋಲುಗಳಾಡುತ
ಪುಂಡರೀಕನ ಭಕುತಿಗೊಲಿದುಬಂದು ನಿಂದಾ
ಪಂಢರಿಪುರಿರೇಯಾ ಗೋಪಾಲ ವಿಠ್ಠಲನ್ನ
ಕಂಡಿರ್ಯಾ ಕಂಡಿರ್ಯಾ ಕಪಟ ನಾಟಕ ಹರಿಯ ॥ 2 ॥

ರೂಪಕ ತಾಳ

ಆವರೂಪದಲ್ಲೆ ಗೋವು ಕಾಯಿದರೂಪ
ಆವ ಈ ರೂಪವೆ ಮತ್ಸ್ಯಾದಿ ರೂಪವು
ಆವ ಈ ರೂಪವರ ಅಜಾದಿ ರೂಪವು
ಆವ ಈ ರೂಪವೆ ಆತ್ಮಾದಿ ರೂಪವು
ಆವ ಈ ರೂಪವೆ ಅನಂತಾತ್ಮಕ
ಶ್ರೀವಿಷ್ಣು ರೂಪವು ಮತ್ತಿವನೆ ಸಾಕ್ಷಾತ್ ನೋಡಾ
ಈವಿಧ ರೂಪವು ಅನಂತಾನಂತ ವಿರಲು
ಆವ ರಾಹುತನಂತೆ ಅಶ್ವವೇರಿ ಎನ್ನ
ಈ ವಿಧದಲಿ ಎನ್ನ ಕಾವಳ ಗೊಳಿಸಿದುದು ಏನು
ನಾವಂದರಿತವನಲ್ಲ ನಿನ್ನ ಲೀಲೆ
ಆವಬಗೆಯೊ ನಾನರಿಯೆ ಈ ವಿಧ ತೋರಿದ್ದು

ಸೇವಕ ಜನ ಸ್ಥಿತಿ ನೀನೆ ಬಲ್ಲೆ
ಗೋವರ್ಧನೋದ್ಧರ ಗೋಪಾಲವಿಠ್ಠಲ
ದೇವ ಪಂಢರಿರಾಯ ಶ್ರೀ ವಿಜಯ ದಾಸರ ಪ್ರಿಯಾ ॥ 3 ॥

ಝುಂಪೆ ತಾಳ

ನೋಡಿದಂತೆನಗೆ ನೋಡದಿದ್ದರೆನಗೆ
ಮಾಡಿಕೊಂಬೆ ಮನಕೆ ಆವನಾಧಾನೆಂದು
ನೋಡಿದ ಕ್ಷಣದಲ್ಲಿ ಕಾಣಧೋದರಿಂದ
ನೋಡಾಬೇಕಾಯಿತು ಆವವನೋ ಎಂದು
ನೋಡಾ ನೋಡಾ ಅದೃಶ್ಯನಾದ ಕಾರಣ ಮನಕೆ
ನೋಡು ಎಂತಿಪ್ಪುವದು ನೋಡುವರಿಗೆ
ಆಡುವ ಮಾತಿಲ್ಲ ಕಂಡ ಕಂಡತಿನ್ನು
ನೋಡಬಾರದೆ ಒಂದು ಘಳಿಗೆ ನಿಂದು
ನೋಡಿದಾಕ್ಷಣ ನಿಂದು ಬೇಡುವದಿನ್ನೇನು
ನೋಡುವ ಯೋಗ್ಯತೆ ಇನಿತೆ ಇತ್ತೋ ಏನು ಧೊರಿಯೆ
ಆಡಿದ್ದೆಲ್ಲ ಬರಲಿ ಇಲ್ಲವೆಂದು ಎನ್ನ
ನೋಡು ಆವಸ್ಥಳಕೆ ಬರಲಿ ಆನು
ನೋಡು ತಿಳಿಯದು ಸ್ವಾಮಿ ಗೋಪಾಲವಿಠ್ಠಲ
ನೋಡು ಪಂಢರಿರಾಯಾ ಮಾಡು ದಯವ ॥ 4 ॥

ತ್ರಿವಿಡಿತಾಳ

ಆವ ದೇಶಕೆ ಬರಲಿ ಆವಕ್ಷೇತ್ರವು ನೋಡಲಿ
ಆವ ಸಂಗವ ಬಿಡಲಿ ಆವ ಪಿಡಿಯಲಿ ಸಂಗ
ಆವ ವ್ರತಗಳು ಮಾಡಲಿ ಆವ ಶ್ರವಣವು ಕೇಳಲಿ
ಆವ ಧೈರ್ಯವು ಇರಲಿ ಆವಾದಾವದು ತಿಳಿಯಲಿ
ಆವಾ ಸಾಧನ ಮಾಡಲಿ ಆವದಾವದು ಕೊಡಲಿ
ಆವದಾವದು ಉಣಲಿ ಆವದಾವದು ಹೊದಿಯಲಿ
ಆವದಾವದು ನೋಡಲಿ ಆವದಾವದು ಬಿಡಲಿ
ಆವದಾವದು ತಡಿಯಲಿ ಆವದಾವದು ಜಡಿಯಲಿ
ಆವದಾವದು ಅರ್ಚಿಸಲಿ ಆವ ದಾವದು ಕೇಳಲಿ

ಆವದಾವದು ನುಡಿಯಲಿ ಆವದಾವದು ಜಪಿಸಲಿ
ದೇವ ನೀನಲ್ಲದಿಲ್ಲ ಇದರೊಳಗೊಂದು
ಆವಲ್ಲಿಗೋ ನಾ ನರಿಯೆ ಬರಹೇಳಿದ್ದು ಎನ್ನ
ಪಾವನ್ನ ಮಾಳ್ಪ ಶಕ್ತ ನೀನೆ ಎನ್ನ
ಆವಲ್ಲಿದ್ದರು ಎನಗೆ ಅನುಭವ ಈಗಲೆ
ಕಾವಲಿ ಬಹು ಇರಲಿ ಕಾಕು ಜನರಿಂದ ಬಂದ ಸೊಲ್ಲಿಗೆ ಮ
ನ ವೈದು ವಶವು ಮಾಡಲಿ ಬೇಡ
ನಾ ನೊಬ್ಬನೇವೆ ಅಲ್ಲ ನಿನ್ನ ಪೊಂದಿ ನಡೆವ ಸಿ
ರಿ ವಿಜಯ ದಾಸರ ಸಹವಾಸದಲ್ಲಿಪ್ಪ
ಜೀವರುಗಳಿಗೆಲ್ಲ ನೋವು ಎಂಬುದು ಬೇಡ
ದೇವ ಪಂಢರಿರಾಯ ಗೋಪಾಲವಿಠ್ಠಲ
ನೀವಲಿದದಕಿಂದು ಈ ವರವ ನೀಡು ॥ 5 ॥

ಅಟ್ಟತಾಳ

ಶರಣು ಗೋವಳರಾಯಾ ಶರಣು ನಿರ್ಜಿತ ಮಾಯಾ
ಶರಣು ಮುಕ್ತಾಶ್ರಯ ಶರಣಾನಂದಮಯಾ
ಶರಣು ದೋಷವಿದೂರ ಶರಣು ನಿರ್ವಿಕಾರ
ಶರಣು ಭಕ್ತರಪಾಲ ಶರಣು ಲೀಲಾವತಾರ
ಶರಣು ಅವ್ಯಕ್ತಕಾಯಾ ಶರಣು ಪ್ರಾಕೃತ ಕಾಯಾ
ಶರಣು ಜ್ಞಾನಪೂರ್ಣ ಶರಣು ಮೂಲ ಕಾರಣ
ಶರಣು ಅಖಂಡೇಶ ಶರಣು ಅನಾದಿ ದೇವಾ
ಶರಣು ನಿತ್ಯತೃಪ್ತ ಶರಣು ನಿರಂಜನಾ
ಶರಣು ಘಟಿತಾಘಟಿತಾನಂತ ಐಶ್ವರ್ಯ
ಶರಣು ಅಗಮ್ಯ ಅಲೌಕಿಕ ಐಶ್ವರ್ಯ
ಶರಣು ಮಹಾ ಪ್ರಭೋ ಹೇ ರಾಜಾಧಿರಾಜಾ
ಶರಣು ಅಯ್ಯಾ ಪೊತುರೆ ಪೊತುರೆ
ಶರಣು ಶರಣು ಸಿರಿ ಅಜಭವಾದಿಗಳೀಶಾ
ಶರಣು ಪಂಢರಿರಾಯಾ ಗೋಪಾಲವಿಠ್ಠಲಾ
ಶರಣು ಶರಣು ನಿನ್ನ ಪರಿವಾರ ಸಹ ನಿತ್ಯ ॥ 6 ॥

ಆದಿತಾಳ

ಮಾನಿಸ ರೂಪದಿ ಮಹಿಮೆಯ ತೋರ್ಪನೆ
ಮಾನಿಸ ರೂಪದಿ ಮನೆ ಮನೆ ಪೊಕ್ಕನೆ
ಮಾನಿಸ ರೂಪದಿ ಮಣ್ಣನೆ ಮೆದ್ದನೆ
ಮಾನಿಸ ರೂಪದಿ ಮುನಿಮನ ಶೆಳೆವನೆ
ಮಾನಿಸರೂಪದಿ ಮಾನಿನಿಗೊಲಿದನೆ
ಮಾನಿಸ ರೂಪದಿ ದನುಜರ ಕೊಂದನೆ
ಮಾನಿಸರೂಪದಿ ಧನುವನು ಮುರಿದನೆ
ಮಾನಿಸ ದೃಷ್ಟಿಗೆ ಮಾನುಷ್ಯನಂತೆ ಅ
ಮಾನುಷ್ಯ ಮಹಿಮನೆ ಮರೆ ಮೋಸಮಾಡೋದು
ಮಾನಿತವೇನಯ್ಯಾ ಮಾನವಂತನೆ ಹೀಗೆ
ಮಾನಿಸಾನ್ನವನುಂಬ ಮನುಜನಾದುದರಿಂದ
ಮಾನುಷ್ಯನಂತೆ ನಿನ್ನ ಮನದಿ ನಿಶ್ಚಯಿಸಿದೇ
ಮಾನಗುಣಾಂಬುಧಿ ಗೋಪಾಲವಿಠ್ಠಲ
ಮನಸಾ ವಾಚಾ ಕಾಯಾ ಮೊರೆ ಹೊಕ್ಕೆ ಮನನೀಡು ॥ 7 ॥

ಜತೆ

ಎಲ್ಲ ನೋಡಿದರು ಒಳಿತೆಲ್ಲ ವಿರಲು ಬರ
ಲಿಲ್ಲವೆಂದನು ಗೋಪಾಲವಿಠ್ಠಲ ತಿಳಿಸೋ ॥ 8 ॥

## ಸುಳಾದಿ 2

ಧ್ರುವತಾಳ — ರಾಗ : ಕಾಂಬೋಧಿ

ಮಗುವಾಗಿ ಮಗನಾಗಿ ಮಮತೆ ಪುಟ್ಟಿಸಿ ನಿನ್ನ
ಮಗುವ ರೂಪವ ತೋರಿ ಮರಳಿ ಎನ್ನ ಕಣ್ಣಿಗೆ
ಸಿಗದಂತೆ ನೀನು ಎನ್ನ ಮಗನೆಂದು ಪೇಳಿಕೊಂಡ
ಬಗೆ ಆವ ಲೀಲೆಯೋ ಚನ್ನಿಗನೆ ಗೋವಳರಾಯಾ ಬಪ್ಪ
ಬಗೆ ಏನೋ ಎನ್ನೊಡನೆ ಚುನ್ನಾಟವಾಡಲಿಕ್ಕೆ
ಅಗಣಿತಗುಣಗಣ ಅಂಬುಧಿಯೋ ।
ಸೊಗಸಾಗಿ ಎನಗೆ ಮೊದಲಿಗೆ ನಿಜವ ತೋರಿದರೆ
ಮಿಗಿಲಾಗಿ ನಿನ್ನ ಸ್ತೋತ್ರಗಳನಾದರು ಮಾಳ್ಪೆ

ಯುಗ ಮಹಾ ಪ್ರಳಯಕೆ ಚಲಿಸದ ಸರ್ವೇಶ
ಮಗುವಾಗಿ ತೋರಿ ಮೋಸ ಗೊಳಿಸುವದರಿಯದಾದೆ
ನಗುಬಾಟಲವ ಮಾಡಿ ಕಡಿಗೆ ಹಿಂದೆನೋಳ್ಪಿಯೊ
ಧಿಕು ಧಿಕು ಎನ್ನ ಜನ್ಮ ಸಾರ್ಥಕೇನೊ
ನಗಧರ ಚಲುವ ಗೋಪಾಲ ವಿಠ್ಠಲ ಕೃಷ್ಣ
ನಗೆ ಆಟ ತೋರೆನ್ನೊಡನೆ ಸಿಗದೆ ಮರಿಯಾಗಬಹುದೆ ॥ 1 ॥

ಮಟ್ಟತಾಳ

ತಿಳಿಯದೆ ಸ್ವಪ್ನದಿ ಕಳವಳಿಕೆ ಇಂದ
ಶಳದುನೂಕಿದೆನಲ್ಲ ಬಳಿಯ ನಿಲ್ಲ ಗೊಡದೆ
ಕಿಲ ಕಿಲನೆ ನಗುತ ಚಿನ್ನ ಬಾಲಕನಾಗಿ
ಸುಳಿದು ಆಡಿದರು ತಿಳಿಯದೆ ನಾಪೋದೆ
ತಳುಕು ಹಾಕಿ ಕಾಲು ತೊಡರಿಸಿಕೊಂಡರು
ಎಳೆದು ಎಳೆದು ನಿನ್ನ ಎಬ್ಬಟ್ಟಿದೆನಲ್ಲಾ
ಭಳಿರೆನಿನ್ನ ಮಾಯಾ ಬಡವರಿಗೆ ಇನ್ನು
ತಿಳಿಯಲೊಶವೆ ಕರುಣ ಚಿತ್ರ ವಿಚಿತ್ರನೆ
ಮಲತ ಮಲ್ಲರಗಂಡ ಗೋಪಾಲವಿಠ್ಠಲ
ಅಲೌಕಿಕ ಚರಿಯ ಅಘಟಿತ ಮಹಾ ಘಟಿತಾ ॥ 2 ॥

ತ್ರಿವಿಡಿತಾಳ

ಪುಟ್ಟಿದ ಶಿಶುವೆಲ್ಲಿ ಎಷ್ಟು ದಿವಸಾಯಿತು
ದೃಷ್ಠಿಲಿ ನಾನೆತ್ತ ನೋಡಿದವನೆ ಅಲ್ಲ
ಕೊಟ್ಟವನೆ ಕೊಂಡೊಯ್ದನೆಂದು ಮನಸು ಎಲ್ಲ
ಘಟ್ಯಾಗಿ ಅದರ ಚಿಂತನಿಯ ಗಂಧವೆ ಎಲ್ಲ
ಬಿಟ್ಟವನಿಗೆ ಸ್ವಪ್ನದಲ್ಲಿ ಆ ರೂಪದಿ
ಚೇಷ್ಟಿಯ ತೋರಿಸಿ ಚತುರ ಕ್ರೀಡೆಯನಾಡಿ
ಬಿಟ್ಟು ಕೊನಿಗೆ ಎನಗೆ ದೃಷ್ಠಿಗೆ ತೋರದ
ಶ್ರೇಷ್ಠ ಬಾಲಕ ರೂಪ ನೀನೋ ಆಜೀವನೊ
ಇಷ್ಟು ಮಾತ್ರವು ಎನ್ನ ಮನದಲ್ಲಿ ನೆಲೆಗೊಂಡು
ಸ್ಪಷ್ಟಾಗಿ ತಿಳಿಪೋದು ಸರ್ವೇಸ್ವರ

ಎಷ್ಟಿಲ್ಲ ವೆಂದರೆ ಎನ್ನ ಮನದ ವ್ಯಥೆ
ಬಿಟ್ಟು ಪೋಗದು ಕಾಣೋ ಬಿನ್ನೈಸುವೆ
ಇಷ್ಟು ಮಾತ್ರವು ಅಲ್ಲ ನಿನ್ನ ರೂಪ ಬಾಲ
ಕೃಷ್ಣನೆಂದು ಪೆಸರು ಪೇಳಿದ್ಯಾಗ
ಎಷ್ಟು ಜನ್ಮದ ನೋವು ನಾ ತಿಳಿದವನಲ್ಲ
ಪಟ್ಯಾಗಿ ಎನ್ನ ಗುರುಗಳೆ ಬಲ್ಲರೊ
ಪುಟ್ಟ ಬಾಲಕ ಉಡುಪಿ ಕೃಷ್ಣ ಗೋಪಾಲ ವಿಠ್ಠಲ
ಇಷ್ಟೇವೊ ಎನ್ನ ಪ್ರಾಪ್ತಿ ಮುಂದೆ ಉಂಟೊ ॥ 3 ॥

ಅಟ್ಟತಾಳ

ತೃಷಿಲಿಂದ ನೀರು ರಭಸದಿ ಕುಡಿವಂಗೆ
ಕಸಕೊಡ ತೆರನಂತೆ ಕೈಯೊಳ ಪಾತ್ರೆಯ
ಹಸಿದನ್ನವ ಕೊಂಬಗೆ ಹಾರ ಹೊಡೆದ ತುತ್ತು
ಕೊಸರಿ ಬಿಟ್ಟಂತಿನ್ನು ಎನ್ನ ಆಶಿಯ ನೋಡು
ಉಸುರಲಾರೆನೊ ನೀ ಪೋಷಿಸಿ ಸುಖಿಸಿ ಎನ್ನ
ಕೊಸರಿ ಬಿಟ್ಟ ಕ್ಲೇಶ ಕೊಂದೆನಲಿಲ್ಲ ಈಡಿಲ್ಲ
ಕಸುಕೊಂಡು ಗಂಟಗಲ್ಲದ ಬಿಡಿದಿನ್ನು
ಉಸುರದೆ ಮೆಲ್ಲಗೆ ಪೋದವನಂತೆ ರಾ
ಜಸಮತಿಯವನಿಗೆ ನಿನ್ನ ಒಲಿಮೆ ಎಂತ
ಅಸಮ ದೇವ ಕೃಷ್ಣ ಗೋಪಾಲ ವಿಠ್ಠಲ ಕ
ನಸಿನ ರೂಪವು ಮನಸ್ಸಿಗೆ ನೆಲೆಯಾಗು ॥ 4 ॥

ಆದಿತಾಳ

ಏನನ್ನರಿಯೆ ನಿನ್ನ ಮಹಿಮೆ
ಏನನ್ನರಿಯೆ ನಿನ್ನ ಸೇವೆ
ಏನನ್ನರಿಯೆ ಪ್ರೀತಿ ಕರ್ಮ
ಏನನ್ನರಿಯೆ ಜ್ಞಾನ ಮಾರ್ಗ
ಏನನ್ನರಿಯೆ ಭಕುತಿ ಸ್ಥಿತಿಯು
ಏನನ್ನರಿಯೆ ವಿರಕುತಿಯು
ಏನೋ ನಿನ್ನ ಕರುಣ ಪೂರ್ಣ ನೀನು ಎಂದು ನಾನು ಬಲ್ಲೆ

ದೀನನಾಥ ಎನ್ನ ಅವಗುಣ ಗುಣ ನಿನಗೇನೊ
ಜೇನು ಕ್ರಿಮಿಗಳ ವಮನವನು ಮಜ್ಜನವು ಎಂದು
ಜ್ಞಾನಿಗಳು ತಂದು ಸ್ನಾನ ಮಾಡಿಪರೋ ನಿನಗೆ
ಜ್ಞಾನಿಗಳ ಪಾದದಡಿಯಲಿ ನಾನು ಬಿದ್ದವನು ಎಂದು
ನೀನೆ ನೋಡಿ ಸಾಕಬೇಕು
ಶ್ರೀನಿವಾಸ ದಯಾಂಬುಧಿ ಮಾನಿಸರೂಪಾಗಿ ಪೊಳೆದ
ಜಾಣಗೋಪಾಲ ವಿಠ್ಠಲ ಪ್ರಾಣಾಧಾರ ನಿನ್ನ ಇರವ
ಧ್ಯಾನದೊಳಗೆ ನಿಲಿಸಿ ಕಾಯೋ ॥ 5 ॥

ಜತೆ

ಸ್ವಪ್ನದಲ್ಲಿ ಸುಳಿದ ಅಪರಿಮಿತ ಮಹಿಮ
ತಪಸಿಗೆ ಒದಗೋ ಗೋಪಾಲ ವಿಠ್ಠಲಕೃಷ್ಣ ॥ 6 ॥

## ಸುಳಾದಿ 3

ಧ್ರುವತಾಳ ರಾಗ : ಭೈರವಿ

ಒಂದಪರಾಧವೆಂದು ವಂದಿಸಲೇನಯ್ಯ ನಾ
ಒಂದರ ಚಿಂತೆಯನ್ನು ವರ್ಣಿಸಲೇನಯ್ಯಾ
ಒಂದರ ಭಯವೆಂದು ಒತ್ತಿ ಕೊಳ್ಳಲೇನಯ್ಯಾ
ಒಂದರ ಹರುಷವೆಂದು ಒದಗಿ ನುಂಗಲೇನಯ್ಯಾ
ಒಂದರ ಆಶೆ ಎಂದು ಒಲಿಸಿ ಪೇಳಲೇನಯ್ಯಾ.
ಒಂದರ ಮೋಹವೆಂದು ಒಳ್ಳೆದೆಂದೆನಲೇನಯ್ಯಾ
ಒಂದರುಪಾಯ ವೆಂದು ವಂದಿಸಲೇನಯ್ಯಾ ನಾ
ಒಂದಲ್ಲ ಎರಡಲ್ಲ ವಿವರಿಸಿ ಪೇಳಲಿನ್ನು
ಒಂದಪರಾಧ ಇದಕೆ ಕಾರಣವೆಲ್ಲ
ಇಂದಿರೆ ಯರಸನೆ ಗೋಪಾಲವಿಠ್ಠಲ
ತಂದೆ ನಿನ್ನ ವಿಸ್ಮೃತಿ ಎನಗೆ ಮುಖ್ಯಪರಾಧ ॥ 1 ॥

ಮಟ್ಟತಾಳ

ಜನನದ ಚಿಂತೆ ಜನಿಸುವ ಭಯವ್ರೋ
ಜನಿಸಿದರೆ ಹರುಷ ದಿನದಿನಕೆ ಆಗೆ
ಘನ ಆಶೆಯಿಂದಲಿ ಮೋಹ ಘನಮೋಹಕೆ ಕ್ಲೇಶ

ಆನ ನಂತರಪಾಯಗಳೇ ವಂದೆನಂತ ಇನಿತು ಅಜ್ಞ
ಘನತಿ ಕಾಳಿಂದ ದಣಿದು ದಣಿದು ನಾನು ಧೈರ್ಯಭ್ರಷ್ಟನಾಗಿ
ಮುಣುಗಿ ತೇಲಿಪೆನಯ್ಯಾ ಮುಂದು ಗಾಣದೆ ಇನ್ನು
ಘನದಯಾವಾರಿಧಿ ಗೋಪಾಲವಿಠ್ಠಲ
ನೆನೆಯದೆ ನಾ ನಿನ್ನ ಕೊನೆಗಾಣದೆ ಪೋದೆ ॥ 2 ॥

ರೂಪಕತಾಳ

ಹಿಂದಿನ ಸಾಧನ ಏನೇನು ಆದರು ಎಲ್ಲ
ಇಂದಿಗಾ ಇದರ ವಿಚಾರವ ತಿಳಿಯಿತು
ಮುಂದಿನ ಗತಿಗೆ ಮುಕುಂದ ಪೊಂದುವದೋ
ದ್ವಂದ್ವವ ನರಿಯನಯ್ಯಾ ಸುಂದರಾಂಗ ದೇವ
ನಿಂದಲ್ಲಿ ಕುಳಿತಲ್ಲಿ ಬಂದಲ್ಲಿ ಹೋದಲ್ಲಿ
ತಂದು ನೀಡು ನಿನ್ನ ಚಂದುಳ್ಳ ಸ್ಮೃತಿಯನ್ನು
ನಂದನಕಂದ ಗೋಪಾಲವಿಠ್ಠಲ ದಯಾ
ಸಿಂಧೂ ಅನಿಮಿತ್ಯ ಬಂಧು ನೀ ಸಲಹೋ ಎನ್ನ ॥ 3 ॥

ಝಂಪೆತಾಳ

ಸಲಹುವ ನೀನಯ್ಯಾ ಸಲುಹಿ ಕೊಂಬುವ ನಾನು
ಫಲಿತಾರ್ಥ ಒಂದೇ ಸರಿ ಉಳಿದಾದನೇನಯ್ಯಾ
ಹಲವು ಪರಿ ಸಾಧನಗಳು ಎಲ್ಲ ಕೂಡಿದರು
ಕಳಿಯಬಲ್ಲದೆ ಎನ್ನ ಭವಾ ರೋಗವಾ
ತಿಳಿದದ್ದು ಇಷ್ಟೇ ಸರಿ ನಳಿನನಾಭನೆ ನಿನ್ನ
ಸುಲಭ ಸ್ಮರಣೆಕಿಂತ ಮಿಗಿಲು ಇಲ್ಲಾ
ಸುಲಭ ಕೇಳಯ್ಯಾ ಕೊಳ್ಳೆಯ ನೀ ವೈಯ್ಯಾ
ಚಲಿಸಲಿಬೇಡಿನ್ನು ಮನದಲಿಂದಾ
ಗೆಲಿಸೆ ಈ ಸಂಸಾರ ಕೊಲಿಯ ತಾಳಲಾರೆ
ಬಳಲಿ ಬಳಲಿ ಬಾಯಿ ಬಿಡುತಲಿಹೆನಯ್ಯಾ
ಹೊಳಿಯ ಜನಕ ನಮ್ಮ ಗೋಪಾಲವಿಠ್ಠಲನೆ
ತಿಳಿಯಬೇಕು ಎನ್ನ ಸ್ಥಿತಿ ಗತಿಗಳ ॥ 4 ॥

ತ್ರಿವಿಡಿತಾಳ

ಆವಾಗ ಎನಗಿನ್ನು ನಿನ್ನ ಸ್ಮೃತಿಯು ಬಂತೆ
ಆವ ಕಾಲವೆ ಪುಣ್ಯ ಕಾಲವಯ್ಯಾ
ಆವ ದೇಶದಲ್ಲಿ ನಿನ್ನ ಸ್ಮೃತಿಉಂಟಾಯ್ತು
ಆವ ದೇಶವೆ ಪುಣ್ಯ ದೇಶವಯ್ಯಾ
ಆವ ಸಂಗತಿ ಇಂದ ನಿನ್ನ ಸ್ಮೃತಿಯು ಬಂತೆ
ಆವವಾಸವೆ ಸಜ್ಜನ ಸಹವಾಸ
ಆವ ಕರ್ಮಾದರು ನಿನ್ನ ಸ್ಮರಣೆ ಇನ್ನು
ಆವು ಒದಗಿತ್ತೆ ಅದೆ ಸುಕರ್ಮಾ
ಆವ ನಿನ್ನ ಸ್ಮರಣೆ ರಹಿತವಾದ ಕರ್ಮ
ದೇವಾರ್ಚನಾದರೂ ಏನು ಫಲವೋ
ನಾ ವಲ್ಲೆನಯ್ಯಾ ನಿನ್ನ ಸ್ಮರಣೆ ರಹಿತನಾಗಿ
ಜೀವಿಸಿಕೊಂಡಿನ್ನು ವ್ಯರ್ಥವಾಗಿ
ಆವ ಭಯಕು ನಾನು ಅಂಜುವದಿಲ್ಲವೋ
ದೇವ ನಿನ್ನ ವಿಸ್ಮೃತಿ ಗೊಂದಂಜುವೆ
ಪಾವನ ಕಾಯ ಗೋಪಾಲವಿಠ್ಠಲ ನಿನ್ನ
ಆವ ಸರ್ವದಾ ಸ್ಮರಣೇವೆ ಜೀವನ್ಮುಕ್ತಾ ॥ 5 ॥

ಅಟ್ಟತಾಳ

ನಿನ್ನ ಸ್ಮೃತಿಯೆ ವಿಧಿ ವಿಸ್ಮೃತಿಯೆ ನಿಷೇಧ
ಪುಣ್ಯವೆಂಬದು ಇದೆ ಪಾಪವೆಂಬದು ಅದೆ
ಇನ್ನಿಲ್ಲ ಇನ್ನಿಲ್ಲ ಇದಕ್ಕಿಂತ ಸಾಧನ
ಸ್ತನ್ನಿ ಪಾನವು ತಾನೋ ಉಣ್ಣಲೊಲ್ಲೆನು ಮನಃ
ಇನ್ನೆಂಬೊ ಆವಂಗೆ ಇದೆ ಇದೆ ಉಪಾಯ
ತನ್ನ ಮೊದಲು ಮಾಡಿ ತೃಣಜೀವ ಕಡಿಮಾಡಿ
ಚನ್ನಾಗಿ ತತ್ವೇಶರಿನ್ನು ಲಕುಮಿ ಸಹಿ –
ತಿನ್ನವರ ವರ್ಗ ತನ್ನಿಯಾಮಕನಾಗಿ
ಎನ್ನ ಅಂತರ್ಯಾಮಿ ಯವನೆ ಮಾಡಿಪನೆಂಬೊ
ಇನ್ನ್ಯಾವ ಸ್ಮೃತಿ ಏನು ಪುಣ್ಯ ಸಾಧನವಯ್ಯಾ

ಘನ್ನದಯಾನಿಧಿ ಗೋಪಾಲ ವಿಠ್ಠಲ
ನಿನ್ನರೂಪವ ಧನ್ಯ ಪುಣ್ಯ ಪಾಪಗಳಲ್ಲಿ ॥ 6 ॥

ಆದಿತಾಳ

ನಿನ್ನ ಅರಿಯದಿಪ್ಪದೆ ಅಜ್ಞಾನವಯ್ಯಾ ಅಯ್ಯಾ
ಇನ್ನು ಅಜ್ಞಾನದಿಂದ ಅನ್ಯಥ ಜ್ಞಾನವಯ್ಯಾ
ಅನ್ಯಥಾ ಜ್ಞಾನ ಈಗ ಅಧಮ ಜೀವಿಗಳಿಗೆ
ಇನ್ನು ಮಿಥ್ಯಾಜ್ಞಾನವನ್ನು ಪುಟ್ಟಿಪುದಯ್ಯಾ
ಇನ್ನು ಆರಾರ ಗತಿ ಅರಿತು ಜ್ಞಾನಕೆ ನೀನು
ಮುನ್ನೆ ಪ್ರೇರಕನಾಗಿ ಮುದದಿ ಮಾಡಿಸುವಯ್ಯಾ
ಘನ್ನ ಸ್ವಾಮಿಯು ನೀನು ಬನ್ನದಾಸನು ನಾನು
ನಿನ್ನವರವ ನಾನು ನಿನ್ನ ತಿಳಿವ ಜ್ಞಾನ
ವನ್ನು ಎನಗೆ ಇತ್ತು ಜನನ ಮರಣದ ಬಾಧಿಯ ಬಿಡಿಸಿನ್ನು
ನಿನ್ನ ಸೇವೆಯೊಳಿಟ್ಟು ಚನ್ನಾಗಿ ಪಾಲಿಸಯ್ಯಾ
ಚಿನ್ಮಯ ಮೂರುತಿ ಗೋಪಾಲ ವಿಠ್ಠಲ
ಎನ್ನ ಯತನ ಸಾಧನ ನಿನ್ನಾಧೀನವಯ್ಯಾ ॥ 7 ॥

ಜತೆ

ಅಪರಾಧ ಅಪರಾಧ ಅಪರಾಧ ನಮೋ ನಮೋ
ಕೃಪೆ ಮಾಡಿ ಸಲಹಯ್ಯಾ ಗೋಪಾಲವಿಠ್ಠಲಯ್ಯಾ ॥ 8 ॥

ಧ್ರುವತಾಳ

## ಸುಳಾದಿ 4

ರಾಗ : ಭೈರವಿ

ನಿನ್ನ ಸತಿಯಳಾದ ಸಿರಿಯ ಪದವಿಯ ನೋಡು
ನಿನ್ನ ಮಗನು ಆದ ಅಜನ ಪದವಿಯ ನೋಡು
ನಿನ್ನ ಮೊಮ್ಮಗನಾದ ಹರನ ಪದವಿಯ ನೋಡು
ನಿನ್ನಸೇವಕರೊಳು ಇಂದ್ರನ್ನ ಭಾಗ್ಯ ನೋಡು
ನಿನ್ನ ಮಗಳು ಭಾಗೀರಥಿಯ ಭಾಗ್ಯವ ನೋಡು
ನಿನ್ನ ಭಕ್ತರಾದ ಗಂಧರ್ವರ ಭಾಗ್ಯ ನೋಡು
ನಿನ್ನಿಂದಲಿವರನ್ನೆಲ್ಲ ಸೃಷ್ಟಿಸಲಿ ಪಟ್ಟಿತು
ಎನ್ನನು ನೀನು ಹರಿ ಸೃಷ್ಟಿಯ ಮಾಡಲಿಲ್ಲೆ

ತನ್ನ ಮಕ್ಕಳಿಗೆ ತಾಯಿ ಅನಂತದಿದ್ದರನ್ನ
ಮನ್ನಿಸಿ ಒಬ್ಬರನ್ನ ಮನ್ನಿಸದಲೀ ಹೊಳೆ
ಇನ್ನು ಇವರು ಎಲ್ಲ ಏನಿತ್ತರು ನಿನಗೆ
ಮುನ್ನೆ ನಾನೇನು ನಿನಗೀಯದಾದನೋ ರಂಗ
ಮನ್ನಿಸುವರು ನೀ ಮನ್ನಿಸದಿರೆ ಇವರು
ಕಣ್ಣೆತ್ತಿ ನೋಡರು ನೀ ಕರುಣಿಸದಿರಿನ್ನು
ಮುನ್ನೆ ಇವರ ಉಚ್ಛಿಷ್ಟನ್ನವಾದರು ಎನಗೆ
ಇನ್ನಿತಾದರು ಎನಗೆ ಕಾರಣವಿಲ್ಲ ವೇನೋ
ನಿನ್ನ ಬೇಡುವ ಸಥೆ ಎಲ್ಲಿಂದ ಬಂತು ಎಂಬೆ
ನಿನ್ನವರು ಕೊಟ್ಟಂಥ ಬಲವು ಎನಗೆ ಇದ್ದು
ಹಣ್ಣು ಉಂಟಾದ ವೃಕ್ಷ ಹಂಬಲಿಸೋರು ಜನರು
ನಿನ್ನಲ್ಲಿಹೊ ಮಾಯಾ ನೀನೆ ಬಲ್ಲಿಯೋ ದೇವಾ
ಘನ್ನ ಮಹಿಮ ಚಲುವ ಗೋಪಾಲ ವಿಠ್ಠಲ
ನಿನ್ನಂತೆ ಸಾಕುವರು ಇನ್ನೊಬ್ಬರಿಲ್ಲೊ ದೇವಾ ॥ 1 ॥

ಮಟ್ಟತಾಳ

ಧರಿಯೊಳುಇದ್ದಂಥ ಪರಿ ಪರಿ ಕಮಲಗಳು
ಅರಳುವದಕೆ ಇನ್ನು ಬೇರೆ ಬೇರೆ ರವಿಉಂಟೆ
ವರುಷ ಕಾಲಗಳಲ್ಲಿ ಸುರಿಸುವ ಮೇಘಗಳು
ಪರಿ ಪರಿ ಗ್ರಾಮಕ್ಕೆ ಪರಿ ಪರಿ ಬೇರುಂಟೆ
ಎರಡೇಳು ಲೋಕಕ್ಕೆ ಧೊರೆ ನೀನಲ್ಲದೆ
ಮರಳಿ ಇನ್ನೊಂದು ದೇವರ ನಾಕಾಣೆ
ಕರುಣಾಕರ ರಂಗ ಗೋಪಾಲ ವಿಠ್ಠಲ
ಮೊರೆ ಹೊಕ್ಕೆನೋ ಕಾಯೋ ಬಿರಿದುಳ್ಳ ದೇವ ॥ 2 ॥

ತ್ರಿವಿಡಿತಾಳ

ಪಿಡಿಯದೆ ಎನ್ನ ಕರವ ಸಡಿಲ ಬಿಟ್ಟರೆ ಇನ್ನು
ಪೊಡವಿಯೊಳಗೆ ನಿನ್ನ ಒಬ್ಬರೂ ಮೆಚ್ಚರು
ಮಡದಿ ಪತಿಯರು ಕೂಡಿ ಪಡೆದ ಬಂದ ಶಿಶುವು
ಬಡದಾಡಿ ದೋಪಾದಿ ನಿನಗೆ ನನಗೆ ನ್ಯಾಯ

ಕೆಡಿವ್ಯಾಟ ಬಿದ್ದರೆ ಬಿಡಿಸುವರಿಲ್ಲವು
ಪಿಡಿಸೊ ನಿನ್ನ ಪಾದ ಎಂದೆಂದಿಗೆ
ಪೊಡವಿ ಯೊಳಗೆ ಇನ್ನು ನಿನಗೆ ಸರಿ ಆರಿಲ್ಲ
ಧೃಡವಾಗಿ ನೀನಲ್ಲ ದೆನಗಿನ್ನು ಗತಿ ಇಲ್ಲ
ಬಿಡದೆ ಎನ್ನಲ್ಲಿ ನೀ ಪಡದಂಥ ಸುತರನ್ನು
ಕೊಡುವೆ ನಿನಗೆ ತಡಿಯದಲೆ ಇನ್ನು
ತುಡುಗು ತನವ ಬಿಡಿಸು ಕೆಡಿಸದೆ ಎನ್ನ ಕಂಡ
ಕಡೆ ವಿಷಯಗಳಿಗೆ ಎರಗಿಸದೆ
ಬಡವನೆಂದು ಎನ್ನ ಕಡೆ ಕಣ್ಣು ನೋಡಿದರೆ
ಬಡವನಾನಲ್ಲ ನಿನ್ನೊಡತಿಗೆ ಪಡಿದೊತ್ತು
ಕಡಲ ಶಯನ ರಂಗ ಗೋಪಾಲ ವಿಠ್ಠಲ
ಕಡುದೀನ ರಕ್ಷಕ ನಿಮ್ಮ ನಾಮ ॥ 3 ॥

ಅಟ್ಟತಾಳ

ಊರ ಔತನ ಹೇಳಿ ಸಾರಿ ಡಂಗುರ ಹೊಯಿಸಿ
ಧೀರ ರಾಯರಿಗೆಲ್ಲ ಸಾರ ಷಡ್ರಸವಿತ್ತು
ತಿರುಗಿ ತಿರುಗಿ ಇನ್ನು ಬೀರಿತು ಉಣಿಸೊಗೆ
ದ್ವಾರದಲೊಬ್ಬ ಮಾಧಕಾರದವನು ಬಂದು
ಅರಿವರಿದರನ್ನು ಹಾರಿಸಾಕುವರುಂಟೆ
ಕಾರುಣ್ಯ ಮೂರುತಿ ಕರುಣದಿಂದಲಿ ಕೇಳು
ನೀರೊಳಗಿನ ಮತ್ಸ್ಯ ನೀರೇ ಬಯಸುವವು
ಘೋರ ಅರಣ್ಯಕ್ಕೆ ಹಾರೈಸ ಬಲ್ಲವೆ
ಮಾರ ಜನಕ ನಮ್ಮ ಗೋಪಾಲ ವಿಠ್ಠಲ
ಸೇರಿಸೋ ನಿನ್ನನು ಸೇರಿದವರ ಬಳಿಯಾ ॥ 4 ॥

ಆದಿತಾಳ

ಒಂದೆ ಬೇಡುವ ನಿನ್ನ ಒಂದೆ ದೇವನೆ ಕೇಳು
ಒಂದೆ ಮನವು ಕೊಡು ವಂದಿಸೆ ನಿನ್ನನ್ನು
ಹಿಂದಾನಂತ ಜನ್ಮದಿ ಮಾಡಿದ ದೋಷ
ಮುಂದಾಗುವ ಅನಂತ ದೋಷಗಳಿಗೆ

ಒಂದು ಭಾರೆನ್ನ ನಿನ್ನ ಸ್ಮರಣೆ ಮರಿಸದೆ
ಚಂದದಿ ನಿಂತು ಆನಂದದಿ ಪೊರೆಯೊ
ಬಂದೆನು ನಾ ನಿತ್ತ ಚಿರಬಾರದೆ ಇನ್ನು
ನೊಂದೆನು ನಾ ಬಲು ಬಂಧಾನಸಿಲ್ಕಿನ್ನು
ತಂದದಕೆ ಎನ್ನ ತಂದು ಕಾರ್ಯ ಮಾಡಿಸಿ
ಪೊಂದಿಸು ನಿನ್ನ ಅರವಿಂದ ಚರಣದಲ್ಲಿ
ಕಂದರ್ಪನಯ್ಯ ಗೋಪಾಲವಿಠ್ಠಲ ಇನ್ನು
ಎಂದೆಂದಿಗೆ ಇನ್ನು ನೀನೆ ನೀನೆ ಗತಿ ॥ 5 ॥

ಜತೆ

ನಿನ್ನ ದಾಸರ ದ್ವಾರವನ್ನು ಕಾಯ್ವರ ಮನೆ
ಕುನ್ನಿ ಎಂದೆನಿಸೆನ್ನ ಗೋಪಾಲವಿಠ್ಠಲ ॥ 6 ॥

ಧ್ರುವತಾಳ **ಸುಳಾದಿ 5** ರಾಗ : ಪಂತುರಾವಳಿ

ನೀನೆ ಏನೋ ವಿಠಲ ನಿಗಮವು ತಂದವನು
ನೀನೆ ಏನೋ ವಿಠಲ ನಗವನ್ನು ಪೊತ್ತವನು
ನೀನೆ ಏನೋ ವಿಠಲ ವರಹ ರೂಪನಾದವ
ನೀನೆ ಏನೋ ವಿಠಲ ನರಮೃಗ ರೂಪಾದದ್ದು
ನೀನೆ ಏನೋ ವಿಠಲ ವಟುರೂಪ ತಾಳಿದವ
ನೀನೆ ಏನೋ ವಿಠಲ ಪರಶುವ ಪಿಡಿದವ
ನೀನೆ ಏನೋ ವಿಠಲ ಶಿಲೆಯನ್ನುದ್ಧರಿಸಿದವ
ನೀನೆ ಏನೋ ವಿಠಲ ಪಾಂಡವರ ಕಾಯ್ದುವ
ನೀನೆ ಏನೋ ವಿಠಲ ಭೌದ್ದ ರೂಪನಾದದ್ದು
ನೀನೆ ಏನೋ ವಿಠಲ ತುರಗವ ನೇರಿದವ
ನೀನೆ ಏನೋ ವಿಠಲ ಚತುರಮೂರ್ತಿ ಆದವ
ನೀನೆ ಏನೋ ವಿಠಲ ಅಷ್ಟ ಮೂರ್ತಿ ಆದವ
ನೀನೆ ಏನೋ ವಿಠಲ ಕೇಶವಾದಿ ಆದವ
ನೀನೆ ಏನೋ ವಿಠಲ ಅಜ್ಯಾದಿ ಮೂರ್ತ್ಯಾದವ
ನೀನೆ ಏನೋ ವಿಠಲ ವಿಶ್ವ ಮೂರ್ತಿ ಆದವ
ನೀನೆ ಏನೋ ವಿಠಲ ಅನಂತಾನಂತ ರೂಪ
ನೀನೆ ಏನೋ ವಿಠಲ ಸಿರಿ ಅಜಭವರಿಂದ

ನಾನಾಕು ಪರಿಯಲ್ಲಿ ಸೇವೆಯ ಕೊಂಬುವನೆ
ನೀನೆ ಏನೋ ವಿಠಲ ಆತ್ಮ ಅಂತರಾತ್ಮ
ಕಾಣಿಸುವೆ ಎನ್ನಲ್ಲಿ ಅನಂತ ಒಂದೇ ಆಗಿ
ಖೂನಪಿಡಿದು ಬಿಡೆ ಯೆಂದಿನವನೆ ನಾನು
ಏನೋ ಈಗ ನೋಡಲು ಆರೋ ಅಂಬಂಥ ವಿಧಿ
ಜಾಣ ಚನ್ನಿಗ ರಾಯ ಗೋಪಾಲ ವಿಠ್ಠಲ
ಪ್ರಾಣಾ ದೊಲ್ಲಭ ನಿನ್ನ ಕಾಣದೆ ನಿಲ್ಲಲಾರೆ ॥ 1 ॥

ಮಟ್ಟತಾಳ

ಆವ ನಿನ್ನ ಶಿರವು ಅಂತಿಯ ತೋರದು
ಆವ ನಿನ್ನ ನಯನ ಅಂತಿಯ ತೋರದು
ಆವ ನಿನ್ನ ಮುಖ ಅಂತಿಯ ತೋರದು
ಆವ ನಿನ್ನ ಅವಯವಂಗಳಿಗೆ ಅಂತ್ಯವಿಲ್ಲ
ಆವ ನಿನ್ನ ಕರಗಳಂತಿಯ ತೋರದು
ಆವ ನಿನ್ನ ಪಾದಂಗಳಿಗೆ ಅಂತೆಯಿಲ್ಲ
ದೇವ ನಿನ್ನ ಆವ ಅವಯವಕೆಲ್ಲ ಪೂರ್ಣ
ಆವ ದಿಕ್ಕು ನೋಡಲಿ ನಿನ್ನ ನೋಟವ್ಯಾಪ್ತಿ
ಧಾವತೆಯು ಇಲ್ಲ ಆವಲ್ಲಿ ನಿನಗೆ
ಕಾವು ಬಹಳ ಭಕ್ತರನ್ನ ಪಾಲಿಪಲ್ಲಿ
ದೇವ ಬಾರೋ ಗೋವಳರಾಯ ನಿನಗೆ
ಆವ ತಂದೆ ಕಾಣೊ ಆವ ತಾಯಿ ನಿನಗೆ
ಜೀವ ಜಡ ಭಿನ್ನ ಗೋಪಾಲ ವಿಠ್ಠಲ
ದೇವ ನಿನ್ನ ಚರಿಯ ಕೋವಿದರಿಗೆ ಪ್ರಿಯಾ ॥ 2 ॥

ರೂಪಕತಾಳ

ನಿನ್ನ ಕರುಣದಿಂದೆ ಎನ್ನ ಸೃಷ್ಟಿಸಿದದ್ದು
ನಿನ್ನ ಕರುಣದಿಂದೆ ಎನ್ನ ಪಾಲಿಸುವದು
ನಿನ್ನ ಕರುಣದಿಂದೆ ದೇಹ ವಿಯೋಗವು
ನಿನ್ನ ಕರುಣದಿಂದೆ ಎನ್ನ ಬಾಳಿವಿ ಬದುಕು
ನಿನ್ನ ಕರುಣದಿಂದೆ ಮಾನಪಮಾನವು

ನಿನ್ನ ಕರುಣದಿಂದೆ ಲಾಭಪಜಯಗಳು
ನಿನ್ನ ಕರುಣದಿಂದೆ ಸಾಧನ ಸಂಪತ್ತು
ನಿನ್ನ ಕರುಣದಿಂದೆ ಬಂಧನ ನಿವೃತ್ತಿ
ನಿನ್ನ ಕರುಣದಿಂದ ಆಗುವದೋ ರಂಗ
ಎನ್ನಿಂದ ನಿನಗಿನ್ನು ಲೇಶಾಪೇಕ್ಷೆಯು ಇಲ್ಲ
ನಿನ್ನ ಹಂಗಿನೋಳು ಮುಳುಗಿ ಆಡುವೆನಯ್ಯ
ಇನ್ನು ಇಲ್ಲಿಗೆ ಸರಿ ಆಯಿ ತೆಂಬುವೇನೇ
ಇನ್ನು ಮುನ್ನೆ ಇದೆ ಆಗಲಿ ಆಗಲಿ
ಚಿನ್ನುಮಯ ಮೂರುತಿ ಗೋಪಾಲ ವಿಠ್ಠಲ
ಜನುಮ ಜನುಮಕ್ಕೆ ನೀನೆ ಎನಗೆ ದಾತಾ ॥ 3 ॥

ಝುಂಪೆತಾಳ

ಎನಗೆ ಪಶುಜನುಮವು ಬಂದಾಗೆ ನೀನಿದ್ದು
ಎನಗೆ ಸ್ಥಾವರ ಜನುಮ ಬಂದಾಗೆ ನೀನಿದ್ದು
ಎನಗೆ ಶ್ವಾನ ಸೂಕರ ಜನ್ಮವು ಬಂದಾಗೆ ನೀನಿದ್ದು
ಎನಗೆ ಜಲಚರ ಜನುಮ ಬಂದಾಗೆ ನೀನಿದ್ದು
ಎನಗೀಗ ಅವಾವ ದೇಹದಲ್ಲನುಭೋಗ
ಅನುವಾಗಿ ನೀನಿದ್ದು ಅಲ್ಲಿ ಉಣಿಸಿ
ಎನಗೆ ಅನುಭೋಗಕ್ಕೆ ಆಗ ತಂದುಕೊಡದೆ
ದಣಿಸಿ ನೋಡಿದಿ ಅಲ್ಲವೇನೆ ಕೃಪಾಳು
ಎನಗೆ ನಿನ್ನ ಮಹಿಮೆ ಎಣಿಸಲಾಗೋದರವು
ದಣಿದೆ ದಣಿದೆ ನಾನಾ ಜನುಮಗಳಲ್ಲಿ ಬಂದು
ಎನಗೀಗ ಮಾನಿಸ ಜನುಮ ಲಾಭವಿನ್ನು
ಅನುವಾಗಿ ಇತ್ತದಕ್ಕನು ಕೂಲವಾಗಿನ್ನು
ಘನವಾದ ಸಾಧನವನ್ನು ಎನ್ನಿಂದಲಿ
ದಿನದಿನದಿ ಮಾಡಿಸಿ ನೂತನ ವಾಗಿನ್ನು
ಕ್ಷಣಕ್ಷಣಕ್ಕೆ ನಿನ್ನ ಸ್ಮರಣೆ ಎನಗೆಯಿತ್ತು
ಜನನಿಯ ಜಠರದಿ ಜನಿಸದಂತದಿ ಮಾಡು
ಘನದೇವ ಕೇಳು ಗೋಪಾಲ ವಿಠ್ಠಲ ರೇಯ
ಎನಗೆ ನಿನ್ನರ್ಚಿಸೋ ಗುಣ ಉಪಾಸನೆ ಈಯೋ ॥ 4 ॥

ತ್ರಿವಿಡಿತಾಳ

ಪ್ರಾಕೃತ ರಹಿತನೆ ಎಲೊ ದೇವ ನಿನಗೆ ಈ
ಪ್ರಾಕೃತ ಉದಕದಿ ಮಜ್ಜನವೆ
ಪ್ರಾಕೃತ ರಹಿತನೆ ಎಲೊ ದೇವ ನಿನಗೆ ಈ
ಪ್ರಾಕೃತ ಉಡಗಿಯ ವಸನಂಗಳೆ
ಪ್ರಾಕೃತ ರಹಿತನೆ ಎಲೊ ದೇವ ನಿನಗೆ ಈ
ಪ್ರಾಕೃತ ಜಡಗಳು ಆಭರಣವೇ
ಪ್ರಾಕೃತ ರಹಿತನೆ ಎಲೊ ದೇವ ನಿನಗೆ ಈ
ಪ್ರಾಕೃತ ಗಂಧ ತುಲಸಿ ಪುಷ್ಪವೇ
ಪ್ರಾಕೃತ ರಹಿತನೆ ಎಲೊ ದೇವ ನಿನಗೆ ಈ
ಪ್ರಾಕೃತ ಧೂಪ ದೀಪ ದಾರ್ತಿಯೆ
ಪ್ರಾಕೃತ ರಹಿತನೆ ಎಲೊ ದೇವ ನಿನಗೆ ಈ
ಪ್ರಾಕೃತದನ್ನವು ನೈವೇದ್ಯವೇ
ಪ್ರಾಕೃತ ಬದ್ಧನ ಮಾಡಿ ಎನ್ನಿಂದಲಿ
ಪ್ರಾಕೃತ ಪೂಜೆಯ ಕೈ ಕೊಂಬಿ
ಪ್ರಾಕೃತ ದೊಳು ನೀನಪ್ರಾಕೃತ ನಾಗಿದ್ದು
ಈ ಪರಿಯಲಿ ನಿತ್ಯ ಪೂಜೆ ಗೊಂಬೆ
ಪ್ರಕೃತ ರಹಿತನಾಗಿ ನಿನ್ನ ದಾಸರು
ಪ್ರಾಕೃತದೊಳಗಿನ್ನು ಇಪ್ಪುವರು
ಪ್ರಾಕೃತ ರಹಿತ ನೆಂದೀಪರಿ ಚಿಂತಪರ
ಪ್ರಾಕೃತ ಬದ್ಧದಿ ರಹಿತರ ಮಾಡುವಿ
ಅಪಾರ ಮಹಿಮನೆ ಗೋಪಾಲ ವಿಠ್ಠಲ
ಈಪರಿಯಲಿ ನಿನ್ನ ಚಿಂತಿಪರೊಡ ನಿಡಿಸೊ ॥ 5 ॥

ಅಟ್ಟತಾಳ

ಧನದ ಆಪೇಕ್ಷಕ್ಕೆ ನಿನ್ನ ಪೂಜೆಯು ಬೇಡ
ವನಿತೆ ಆಪೇಕ್ಷಿಸಿ ನಿನ್ನ ಪೂಜೆಯು ಬೇಡ
ಮನೆಯು ಆಪೇಕ್ಷಿಸಿ ನಿನ್ನ ಪೂಜೆಯು ಬೇಡ
ತನುವು ಆಪೇಕ್ಷಿಸಿ ನಿನ್ನ ಪೂಜೆಯು ಬೇಡ

ಘನ ಸುತರಿಗಾಗಿ ನಿನ್ನ ಪೂಜೆಯು ಬೇಡ
ಕನಸಿ ನೊಳಾದರು ಕಾಮ್ಯ ಫಲಕೆ ನಿನ್ನ
ನೆನಸದಂತೆ ಮಾಡು ನ್ಯಾಯದಲೆ ಇನ್ನು
ಎನಗೆ ಈ ದೇಹದಲ್ಲೇನೇನು ಅನುಭೋಗ
ಅನುವಾಗಿ ಇದ್ದದ್ದು ಉಣಿಸದೆ ಬಿಡಿ ಇನ್ನು
ಎನಗೇನು ಈ ದೇಹ ಹೇಗೆ ಬಂದಿತೆಂದು
ಕ್ಷಣವು ಆದರು ನಿನ್ನ ಚಿಂತಿಸಿ ಇದ್ದೇನೆ
ತನವು ಕೊಟ್ಟವಗೆ ತಾಪತ್ರಯದ ಚಿಂತೆ
ಎನಗೆ ಎನಗೇನು ಯೋಚನಿಲ್ಲ
ತನುಮನದೊಡೆಯನೆ ಗೋಪಾಲ ವಿಠ್ಠಲ
ಎನಗೆ ನಿಷ್ಕಾಮಕ ನಿನ್ನಾರಧನೆ ಈಯೋ ॥ 6 ॥

ಆದಿತಾಳ

ಶುಭವೆಂದು ಪಿಡಿಯೆ ಶುಭದೊಳಶುಭ ವುಂಟು
ಶುಭವೆಂದು ಬಿಡಲು ಅಶುಭ ದೊಳು ಶುಭವುಂಟು
ಶುಭವು ಅಶುಭವು ಎರಡರಿಂದು ಎನಗೆ
ವಿಭಾಗ ತಿಳಿಯದು ವಿವರಿಸಿ ನೋಡಲು
ಶುಭಕೆ ಕಾರಣ ನೀನೆ ಅಶುಭಕೆ ಕಾರಣ ನೆಂದು
ದ್ವಿಭಾಗವು ವಿವರಣೆ ನಭದವರೆ ಮಾಡಿಹರು
ಇಭರಾಜಪಾಲಕ ಗೋಪಾಲವಿಠ್ಠಲ
ಶುಭ ಅಶುಭವು ನಿನ್ನಾಧೀನ ಇಪ್ಪುವು ॥ 7 ॥

ಜತೆ

ಎನಗೆ ನೀ ಬೇಕೆಂಬೊ ಆಶೆಯು ಘನವಯ್ಯಾ
ನಿನಗೆ ಬೇಕಿತ್ತೆ ಪೊರಿ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 6** ರಾಗ : ಕಾಂಬೋಧಿ

ಹರಿಯೆ ಸರ್ವೋತ್ತಮ ಹರಿಯೆ ಪರದೈವ
ಪರಿಪೂರ್ಣ ಗುಣಭರಿತ ನಿರಾಶ್ರಯಾನಂತ
ಪರತತ್ವ ಪರಪೂಜ್ಯ ಪರಮ ಮಂಗಳ ಮೂರ್ತಿ

ಸಿರಿದೇವಿ ಪರಮೇಷ್ಠಿ ಹರರಿಂದ ವಂದಿತ
ಸ್ವರಮಣ ಶ್ರುತಿ ಪಾದ್ಯ ಜರಾಮರಣ ರಹಿತ
ಸುರರ ಪಾಲಕನೆ ನಿರ್ದೋಷಿ ಶಿಖಾಮಣಿ
ಕರಿರಾಜ ವರದನೆ ಕರುಣಾಕರ ದೇವ
ದುರುಳಮರ್ದನ ದೂರಾತಿ ದೂರನೆ
ಸುರಪತಿ ಸುರ ಮುನಿಗಳಿಂದ ಸೇವಿತ
ಗರುಡ ವಾಹನ ಚಲುವ ಸ್ಥಿರ ಭಕುತರೊಡೆಯ
ಸಿರಿ ದ್ರೌಪದಿ ಅಭಿಮಾನ ರಕ್ಷಕ ದೇವ
ಸ್ಮರಣಿ ಮಾತ್ರದಲ್ಲಿ ಅಜಮಿಳನ ರಕ್ಷಿಸಿದಂತೆ
ಪರಮ ದಯಾಳು ಗೋಪಾಲ ವಿಠ್ಠಲ ರೇಯ
ಸರಿ ಇಲ್ಲದ ದೈವ ಮೊರೆ ಹೊಕ್ಕೆ ಕಾಯೋ ॥ 1 ॥

ಮಟ್ಟತಾಳ

ಅನಂತ ಜನ್ಮದಿ ಅನಂತ ಪಾಪವ ಮಾಡಿ
ನಿನ್ನನು ಮರೆತೆನೊ ಸನ್ಮುನಿಗಳ ಪ್ರಿಯಾ
ಎನ್ನಂಥ ಪಾತಕಿಯ ಏನೆಂತು ಕರುಣಿಸಿಯೋ
ಬಿನ್ನಹಕ್ಕೆ ಬಾಯಿಲ್ಲ ನಿನ್ನ ಬೇಡಲೆನಗೆ
ಬೆನ್ನು ಬಿದ್ದವರನ್ನು ಮನ್ನಿಸಿ ಕಾಯುವಂಥ
ಘನ್ನ ಬಿರಿದುಂಟೆಂದಿನ್ನು ನಾಮೊರೆ ಹೊಕ್ಕೆ
ಚಿನ್ಮಮಯ ಮೂರುತಿ ಗೋಪಾಲ ವಿಠ್ಠಲ ರೇಯಾ
ಅನ್ಯರಿ ಗೊಪ್ಪಿಸದೆ ನಿನ್ನವರೊಳಿಸೋ ॥ 2 ॥

ತ್ರಿವಿಡಿತಾಳ

ಹಿಂದೆ ನಾ ಮಾಡಿದಂಥ ಕುಂದು ದೋಷಗಳಿಂದ
ಬಂದೆ ನಾ ನರಜನ್ಮ ಬಂಧನದೊಳಗಿನ್ನು
ಮುಂದಣ ಸಾಧನ ಗಳೊಂದು ನಾ ಕಾಣೆನಯ್ಯ
ಎಂದಿಗೆ ನಿನ್ನ ಅರವಿಂದಚರಣ ಬಳಿಗೆ ಪೊಂದಿಸಿಯೋ ಎನ್ನನು
ಕಂದರ್ಪ ಜನಕನೆ ನಿಂದಿರಿಸಿನ್ನು ನಿನ್ನ
ಚಂದದ ರೂಪವ ಆನಂದಾದಿ ಎನ್ನ ಮನ ಮಂದಿರ ದೊಳಗೆ
ಬಂಧಾ ನಾಗಲಿ ಸುಖ ಬಂದ ದಾಗಲಿ ಜನ

ನಿಂದೆ ಮಾಡಲಿ ಬಹು ವಂದಿಸುವರಾಗಲಿ
ಒಂದೇ ಮನವು ಧೃಡದಿಂದ ನಿನ್ನರ್ಚಿಪಂತೆ
ಭಿಂದೆ ಇಲ್ಲದ ಭಕ್ತಿ ಚಂದದಿ ಪಾಲಿಸಯ್ಯಾ
ಮಂದರಧರನೆ ಗೋಪಾಲವಿಠ್ಠಲರೇಯಾ
ವಂದಿಸಿದೆನು ಮನ ಬಂದದ್ದು ಮಾಡೋ ॥ 3 ॥

ಅಟ್ಟತಾಳ

ಪದ್ಧತಿ ತಿಳಿಸಿನ್ನು ಮಧ್ವಮತಾನುಸಾರ
ಶುದ್ಧ ಜ್ಞಾನವಕೊಟ್ಟಪದ್ಧಮತಗಳೆ ನಿ
ಷಿದ್ಧ ವೆನಿಸಿ ಪೊದ್ದಿಸದಂತಘ ವದ್ದು ಕಡೆಗೆ ನೂಕಿ
ಘದ್ದಿಸಿ ಎನ್ನನು ಉದ್ಧರಿಸು ಪಾಪ
ಖದ್ದಿ ನೊಳ್ಹಾಕದೆ ಮುದ್ರೆ ಪಚ್ಚಿಸಿ ನಿನ್ನ
ಉದ್ಯೋಗ ದೊಳಗಿಡು
ಪ್ರದ್ಯುಮ್ನಮೂರುತಿ ಗೋಪಾಲ ವಿಠ್ಠಲ ರೇಯಾ
ಬಿದ್ದೆ ಚರಣದ ಮೇಲೆ ಬದ್ಧಾಗಿ ಪಿಡಿಯೋ ॥ 4 ॥

ಆದಿತಾಳ

ಆರೋಗ್ಯ ಆಯಷ್ಯ ಐಶ್ವರ್ಯಗಳು ಮಾನ ಆಪೇಕ್ಷ
ಕೋರದಂತೆ ಮಾಡಯ್ಯಾ ಅನಾಥ ಬಂಧು
ಘೋರಿಸುತಿಪ್ಪ ಎನ್ನ ಆರು ಮಂದಿ ಖಳರ ದೂರಮಾಡಿ ಇನ್ನು
ತೋರಿಸು ನಿನ್ನ ಚರಣ ಸೇರಿಸು ನಿನ್ನ
ಪರಿಚಾರಕರೊಳಗಿನ್ನು ಅರೆ ಸಂಸಾರದ ಮರಿಯ ಕೆಳಗೆ
ಶ್ರೀರಮಣನೆ ಚಲ್ವ ಗೋಪಾಲವಿಠ್ಠಲಾ-
ಪಾರ ಗುಣನಿಧಿ ಸಾರಿದೆ ಕಾಯೋ ॥ 5 ॥

ಜತೆ

ಎಂದಿಗೆ ನಿನ್ನ ಪಾದ ಚಂದಾದಿ ಪೂಜಿಸಲಿ
ಕುಂದು ಇಲ್ಲದ ಭಕ್ತಿಲಿ ಬೇಗ ಗೋಪಾಲವಿಠ್ಠಲ ॥ 6 ॥

ಧ್ರುವತಾಳ

## ಸುಳಾದಿ 7

ರಾಗ : ಭೈರವಿ

ಕರೆದ ಮಾತಿಗೆ ನೀನು ಬರುವವನಲ್ಲ ಸಾರಿ
ಅರಿವಾಯಿತೆನ್ನ ಮನಕೆ ಅಪ್ರಮೇಯಾ
ತುರುವ ಸ್ವಭವ ನೀನು ತುರಿಸಿದರೆ ಲಭ್ಯಾ
ತುರುಸುವ ಬಗೆ ತಿಳಿಯ ಬೇಕಾಯಿತು
ಪುರುಷ ನಿನಗೆ ಸಮ ಅಧಿಕ ಒಬ್ಬನಿದ್ದರೆ
ವರಿಶಾಡ ಬಹುದು ನೀನವರ ಸಂಗಡ
ಪರಮ ಅಸ್ವಾತಂತ್ರ ಪರಿಪಾಲಿತ ನಿನ್ನಿಂದ
ವರಸುವೆನೆಷ್ಟೆನ್ನಿಂದ ವಾರಿಜಾಕ್ಷ
ಅರಸು ನೀ ಮೇಲೆ ನಿನ್ನ ಸ್ಪರಿಶ ಮಾಡುವದಕ್ಕೆ
ಭರವಸ ಕೊಡುವದು ಭಕ್ತ ಪ್ರಿಯಾ
ಪುರುಷನ ಕೂಡ ಸಲಿಗೆ ಕೊಟ್ಟರೆ ಅರಸಿ
ಸರಸ ವಾಡೋಳು ತನ್ನ ಸರಿ ಬಂದಂತೆ
ಅರಸರರಸ ಚಲುವ ಗೋಪಾಲ ವಿಠ್ಠಲ ನಾ ಉ
ಚ್ಚರಿಸುವೆ ನಿನ್ನ ಗುಣ ಕರ್ಮಗಳ ॥ 1 ॥

ಮಟ್ಟತಾಳ

ಉರಗನಂದದಿ ಗುಣಉಳ್ಳ ಪುರುಷ ನೀನು
ಹರಿಯೆ ನೀ ಮಾರ್ಜಾಲನಂದದಿ ಗುಣದವ
ಸರಿ ಬಿಡು ಮೂಷಕ ಗುಣವನುಳ್ಳವನೀನು
ಗರುಡನಂಥವ ನೀನು
ವರ ಕಪಿ ಗುಣದವ ನೀನು
ಕರಿಯಂಥವ ನೀನು ಕಪ್ಪೆಯಂಥವ ನೋಡು
ಪರಿಪೂರ್ಣ ನಿರ್ದೋಷ ಗೋಪಾಲ ವಿಠ್ಠಲ
ಸರಿಹೋದಂತಾಡುವೆ ಸಲಿಗೆ ಇಂದಲಿ ನಾ ॥ 2 ॥

ತ್ರಿವಿಡಿತಾಳ

ಮಡಿವಾಳನಂಥವ ಮೈಲಿಗೆ ಕಳೇವಲ್ಲಿ
ಬಡಿಗನಂಥವ ದೋಷ ಕಡಿದು ಕಡಿಗಿಡುವಲ್ಲಿ
ತಡಿಯದೆ ಕುಲಾಲ ಗುಣವನುಳ್ಳವ, ದೇಹ

ಬಿಡಲು ದೇಹ ಪುನಃ ಕೊಡುವಲ್ಲಿ ಮನೆಮಾಡಿ
ಪಿಡಿದು ಒಂದಾನಂತ ಮಾಳ್ಪಲ್ಲಿ ಅಗಸಾಲ್ಯಾ
ಪಿಡಿದು ಬಿಡದವಲ್ಲಿ ಉಷ್ಟ್ರನಂತೆ ಕಾವ ಕಾಣೊ
ಬಡವ ಬಲ್ಲಿದ ನೆನೆ ಬಿಡದೆ ಸರ್ವರೊಳಿದ್ದು
ತಡಿಯದೆ ಸರ್ವ ವ್ಯಾಪಾರ ಮಾಳ್ಪೆ
ಕಡು ದಯಾಸಾಗರ ಗೋಪಾಲವಿಠ್ಠಲ
ನುಡಿದೆ ನಾ ನಿನ್ನಲ್ಲಿ ಇದ್ದ ಗುಣಗಳೇವೆ ॥ 3 ॥

ಅಟ್ಟತಾಳ

ಆಳುಗಳಿಂದೊಂದು ಅಪರಾಧ ಬಂದರೆ
ತಾಳಿಕೊಂಡವನೇವೆ ಸ್ವಾಮಿ ಎನಗೆ ಕಾಣೊ
ಊಳಿಗವನಕೊಂಡು ಫಲ ಕೊಟ್ಟರಾಯಿತೆ
ಹೇಳಯ್ಯಾ ನಿನ್ನ ಸ್ವಾಮಿತ್ವ ಪೂರ್ಣತೆಯನು
ಊಳಿಗವನು ಮಾಡಿ ಬೆಲೆಯು ಕೇಳುವಂಥ
ಆಳಲ್ಲ ನಿನಗಿನ್ನು ಸ್ವಾಮಿ ನೀ ಆವಾಗನ್ನ
ಊಳಿಗವನು ಮಾಡಿ ಫಲವು ಬೇಡುವಂಥ
ಆಳು ನಾ ಅಹುದಲ್ಲೊ ಆಲೋಚನ್ಯಾತಕೆ
ವೇಳೆ ಸಮಯ ನೋಡಿ ಕೇಳಲಿಲ್ಲವೆಂದರೆ
ವೇಳೆ ಆವದು ನೋಡೊ ಭಕ್ತ ಬೇಡುವದಕ್ಕೆ
ಕೇಳೆನ್ನ ಸ್ವಭಾವ ನಿನ್ನ ಭಕ್ತರಿಗೊಂದು
ಆಳಾಪ ಬಂದರೆ ಹೇಳಿ ಕೊಂಬುವದುಂಟು
ಪಾಲ ಸಾಗರ ಶಾಯಿ ಗೋಪಾಲ ವಿಠ್ಠಲ
ಪಾಲಿಸಬೇಕಿದು ಎಷ್ಟರ ಮಾತಯ್ಯಾ ॥ 4 ॥

ಆದಿತಾಳ

ಎನ್ನದುಸಕಕ್ಕೆ ಆಗಿ ಇನ್ನೊಂದು ಕೊಡು ಎಂದು
ನಿನ್ನ ಬೇಡುವುದಿಲ್ಲ ಘನ್ನ ದಯಾನಿಧಿ
ನಿನ್ನ ಭಕುತ ಜನಕ್ಕಿನ್ನೊಂದು ದುರ್ಘಟ
ಬನ್ನ ಬಂದರೆ ನಾ ನಿನ್ನ ಬೇಡೋದೆ ಬಿಡೆ
ಇನ್ನು ಅಪರಾಧವನ್ನು ಮೊದಲು ಮಾಡಿ

ಎನ್ನ ನೀ ದಣಿಸಿದ ರಿನ್ನಂಜುವನಲ್ಲಾ
ಸಣ್ಣ ಅಪರಾಧಕೆ ಕಣ್ಣಿಗೆ ತೋರದೆ
ಮುನ್ನಡಗುವರೆ ಚಿನುಮಯ ದೇವ
ಪನ್ನಂಗ ಶಯನ ಗೋಪಾಲವಿಠ್ಠಲರೇಯಾ
ನಿನ್ನವರಾ ದಯವಿರೆ ಏನನ್ನು ಮಾಳ್ಪೆ ॥ 5 ॥

ಜತೆ

ಏನುಬಂದರು ನಿನ್ನ ನಾನು ಬಿಡುವನಲ್ಲಾ
ಮಾನ ನಿನ್ನದೊ ಜಾಣ ಗೋಪಾಲ ವಿಠ್ಠಲ ॥ 6 ॥

ಧ್ರುವತಾಳ

## ಸುಳಾದಿ 8

ರಾಗ : ರೇಗುಪ್ತಿ

ಪೋಯಿತೆನ್ನ ಜನುಮ ವ್ಯಥಾಯುವಾಗಿ ಇನ್ನು
ನ್ಯಾಯದ ಮಾರ್ಗವನು ಆಯ ವಳಿಯದೆ
ಬಾಯಿ ಮುಚ್ಚಿಕೊಂಡು ಬಹುಜನ್ಮದ ದುಷ್ಕೃತ
ಕಾಯದ ಸುಖಕ್ಕಾಗಿ ಕಂಡವರ ಹಾರೈಸಿ
ಛಾಯ ಗಾರಿಕೆ ತೋರಿ ಕ್ಷೇತ್ರ ವೃತ್ತಿ ಘಳಿಸಿ
ಮಾಯಾ ಪ್ರಪಂಚನಾಗಿ ಮದೋನ್ಮತ್ತದಿಂದಲಿನ್ನು
ಆಯುಷ್ಯ ಕಳೆದೆ ಅಜ್ಞಾನ ತನದಲ್ಲಿ
ನಾಯಿಬದುಕಿನಂತೆ ಆಯಿತೆನ್ನದು ನೋಡು
ತಾಯಿಯ ಪಂಕ್ತಿಯಲ್ಲಿ ಪಾಯಸೂಟವ ಬಿಟ್ಟು
ದಾಯಿಗರ ಮನೆ ಪೀಯೂಷ ಉಂಡಂತೆ
ನಾಯಕಾ ನಿರಲಿ ಸತಿ ಅನ್ಯಾಯಕ್ಕೆ ಬಿದ್ದು ಪರ
ನಾಯಕಗೆ ಬಲು ಸಾಯಸ ಬಟ್ಟಂತೆ
ನೋಯ ದಣಿದೆನಯ್ಯಾ ಸಹಾಯ ವಾಗುವರಿಲ್ಲ
ಕಾಯೋ ಲಕುಮಿ ರಮಣ ದಯದಿಂದಲಿ ಎನ್ನ
ಗಾಯತ್ರಿ ಪ್ರತಿಪಾದ್ಯ ಗೋಪಾಲ ವಿಠ್ಠಲ
ಮಾಯಾ ರಹಿತ ಸೂತ್ರಧಾರಕ ಜಯ ಜಯ ॥ 1 ॥

ಮಟ್ಟತಾಳ

ನಿನ್ನವ ನೆಂತಲೆ ಅನ್ಯರಿಗೆ ತೋರ್ವೆ
ನಿನ್ನ ಪ್ರೀತಿಯ ಧರ್ಮ ಎನ್ನೊಳೊಂದಿಲ್ಲ
ಅನ್ಯಕೆ ಮಾಡುವೆನೊ ಅರ್ಚನೆಗಳು ಎಲ್ಲ
ಪುಣ್ಯಾತುಮ ನಿನ್ನ ಪೂಜಿಸಲಿಲ್ಲಯ್ಯಾ
ಕಣ್ಣಿಗೆ ತೋರುವೆ ಹರಿಭಕ್ತ ನಂತೆ
ಕನ್ನ ಗಾರನಂತೆ ಕನ್ನವರಲಿ ದೋಷ
ವನ್ನು ನಾ ಎಣಿಸುವೆ ಬಣ್ಣಗೆಟ್ಟು ನಾ ಬಲು
ಇನ್ನು ಇದರ ಮೇಲೆ ನಿನ್ನವ ನೆಂತಹೆ
ಅನ್ಯಾಯ ನ್ಯಾಯ ಇನ್ನೇನಿನ್ನೇನು
ಘನ್ನದಯಾನಿಧೆ ಗೋಪಾಲ ವಿಠ್ಠಲ
ಎನ್ನ ಗುಣ ದೋಷ ಎಣಿಸದೆ ಕಾಯಯ್ಯಾ ॥ 2 ॥

ರೂಪಕ ತಾಳ

ಅನ್ಯವಿಷಯಕೆ ಬಟ್ಟಂತಿನ್ನು ಧಾವತಿಗಳು
ನಿನ್ನ ಪರ ಆದರೆ ಎನಗೆಲ್ಲೆವ ದೋಷ
ಹೊನ್ನು ಹೆಣ್ಣು ಮಿಕ್ಕ ಅನ್ಯ ವಾರ್ತೆಗಳಲ್ಲಿ
ಎನ್ನ ಮನವು ಎಳೆದು ಪುಣ್ಯವ ಪೋಗಾಡಿ
ಹುಣ್ಣು ಆಗೋದಕಿಂನ್ನು ನಿನ್ನವರ ಬಾಗಿ
ಲನ್ನು ಕಾದಿರುವಂತ ಕುನ್ನಿ ಎನಿಸು ಹರಿ
ಎನ್ನ ಮನೋವಾಕ್ಕಾಯಾ ದಿನ್ನು ಬಿಡದೆ ಮಾಳ್ಪ
ಚನ್ನ ಕರ್ಮಗಳೆಲ್ಲ ನಿನ್ನ ಪರವೆ ಮಾಡು
ಇನ್ನೇನು ನಿನ್ನ ನಾ ಘನ್ನ ಬೇಡುವುದಿಲ್ಲ
ಮನ್ನಿಸಿ ಎನ್ನ ಮನ ಆಧೀನವ ಮಾಡು
ಪನ್ನಗ ಶಯನ ಗೋಪಾಲ ವಿಠ್ಠಲ ರೇಯಾ
ನಿನ್ನ ಹೊರತು ಎನಗನ್ಯಥ ಗತಿಯಿಲ್ಲ ॥ 3 ॥

ಝುಂಪೆತಾಳ

ಗತಿಎಂಬುವದೆ ನಿನ್ನ ಸ್ಮರಣವೆ ಗತಿ ಅನ್ಯ
ಗತಿ ಎಂಬುವದು ನಿನ್ನ ವಿಸ್ಮರಣೆ

ಹಿತ ಎಂಬುವದು ನಿನ್ನ ಅರ್ಚನೆ ಹಿತವು ಅ
ಹಿತ ಎಂಬುವದು ನೀನೆ ತಾನೆಂಬೋದು
ಮತಿ ಎಂಬುವದು ನಿನ್ನ ಮನದಲ್ಲಿ ತಿಳಿವದು ಮಂದ
ಮತಿ ಎಂಬುವದು ನಿನ್ನನ್ನು ತಿಳಿಯದ್ದೆ
ಆತುಮ ಮೂರುತಿ ಅಂತರಾತುಮ ಮೂರುತಿಯಾಗಿ
ಸತತ ಮಾಡಿಸುವಿ ಸರ್ವ ಕರ್ಮವು
ಹಿತ ಕಾರ್ಯವೆಲ್ಲ ದೇವತಿಗಳದ್ವಾರ ಅ
ಹಿತ ಕಾರ್ಯ ಅಸುರರ ದ್ವಾರದಿಂದ
ಜಿತವಾಗಿ ಮಾಡಿಸಿ ಜೀವರಿಗೆ ಕರ್ಮಫಲ
ಮಿತಿ ತಪ್ಪದೆ ಉಣಿಸುವೆಯ್ಯಾ ಧೊರಿಯೆ
ಪತಿತ ಪಾವನ ರಂಗ ಗೋಪಾಲ ವಿಠ್ಠಲ
ಪತಿತನ್ನ ಪೊರೆಯೆಯ್ಯಾ ಹಿತದಿಂದಲಿ ॥ 4 ॥

ತ್ರಿವಿಡಿತಾಳ

ಅನಾದಿ ಕಾಲದಿಂದ ಆ ನಿನ್ನವ ನಾದೆಗೊ
ಆನಾವದು ಮಾಡಿದ ಅಧರ್ಮವೆ ಧರ್ಮ
ಆನಾದರು ಇನ್ನು ಅನಂತ ಪಾತಕ್ಕೊಂದು
ಕಾಣಿಸುತದೆ ದೇವ ಕಾರುಣ್ಯ ಸಾಗರ
ಏನು ಸ್ವಭಾವವು ಎನಗೆ ಕಾಣೆ ನೀನೆ ಬಲ್ಯೋ
ನೀನೆ ಗತಿ ಎಂಬೋ ಧೃಡವನು ದೊರಕುತಿದೆ
ನೀನಿರು ಸ್ವಾತಂತ್ರಾ ಆನೇನು ಬಲ್ಲೆನೊ
ಎನಿದರ ಮೇಲೆ ನಾ ನಿನ್ನವ ನಾಹೇ ಹೇಗೆ
ಜ್ಞಾನಿಗಳು ಕಂಡರೆ ಹೀನನ ಮೇಲೆದಯ
ವಾನು ಮಾಡುತಲಾರೆ ನ್ಯೂನಗಳೆನಿಸಾದೆ
ನಾನಾದರು ಅವರ ಧೇನಿಸಿ ತಿಳಿಯಲರಿಯೆ
ತಾನಾಗೇವೆ ದಯವನು ಮಾಡುವರು ರಂಗಯ್ಯ
ನೀನೆ ಕಾರಣವಯ್ಯಾ ವಿಧಿ ನಿಷೇದ ನೀಯಲಿ
ಆನೊಬ್ಬರರಿಯೆನು ಅನಿಮಿತ್ತ ಬಂಧು ದೇವಾ
ದೀನ ರಕ್ಷಕ ಚಲುವ ಗೋಪಾಲ ವಿಠ್ಠಲ
ಮಾನಾಭಿಮಾನ ದೊಡಿಯಾ ನಾನಿನ್ನ ಬಿಡೆನಯ್ಯಾ ॥ 5 ॥

ಅಟ್ಟತಾಲ

ಕೆಟ್ಟದೆಲ್ಲ ಎನ್ನ ಕಾರ್ಯಗಳೇನು
ಕೊಟ್ಟದ್ದಿಲ್ಲ ನಿನ್ನ ಕೈಗೆ ನಾನೇನು
ಎಷ್ಟು ಕ್ಲಪ್ತ ದೊಳಿಟ್ಟಷ್ಟೆ ಮಾಡಿಸುವಿನ್ನು
ಘಟ್ಟ್ಯಾಗಿ ಕ್ಲಪ್ತ ಮೀರಿ ಪಾಪ ಪುಣ್ಯ
ಅಟ್ಟಹಾಸವಾಗೆ ನಷ್ಟಮಾಡಿಸಿ ಇನ್ನು
ಇಷ್ಟ ಮಾತ್ರಕೆ ನಾಕೆಟ್ಟದ್ದೇನು ಹರಿ
ನಷ್ಟ ಇಷ್ಟ ಇನ್ನು ಆರ ಭರಗಳೆಲ್ಲ
ಸೃಷ್ಟ್ಯಾದ್ಯಷ್ಟ ಕರ್ತ ಕೃಷ್ಣ ನಿನ್ನ ದಯ್ಯಾ
ಇಷ್ಟ ದೈವ ನಮ್ಮ ಗೋಪಾಲ ವಿಠ್ಠಲ
ಬಿಟ್ಟೆ ನೆಂದರೆ ಬಿಡಿ ಎಷ್ಟು ಸುಮ್ಮನಿರೆ ॥ 6 ॥

ಆದಿತಾಳ

ಕಾಲ ಕಾಲಕೆ ನಿನ್ನ ಕಾರ್ಯಗಳನ್ನು ತಿಳಿಯೆ
ಪಾಲಿಸ ಬೇಕಯ್ಯ ಪರಮ ಪುರುಷ ಹರಿ
ಬಾಳಿವೆಯ ಮಾಡಿಸು ವೇಳ್ಯ ವೇಳ್ಯಕೆ ನಿನ್ನ
ಊಳಿಗ ದೊಳಗಿಟ್ಟು ಕಾಲವ ಕಳೆಸೋದು
ತಾಳಿವಿಕಿಯ ಕೊಡು ಕೋಪಾಟೋಪಗಳಲ್ಲಿ
ಆಳರಿತು ಪೊರೆ ಕಂಡ್ಯಾ ಗೋಪಾಲವಿಠ್ಠಲ ॥ 7 ॥

ಜತೆ

ನಾ ಅಪರಾದ್ಯೆಯ್ಯಾ ನೀ ಅಲ್ಲೆ ಪ್ರೇರಕಾಹೆ
ಅಹಲ್ಯಾ ಶಾಪವಿಮೋಚಾ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 9** ರಾಗ : ಶಂಕರಾಭರಣ

ಬಂದು ನಿಲ್ಲಯ್ಯಾ ಭವದ ಸಿಂಧುವಿಗೆ ಅಗಸ್ತ್ಯ
ನಂದದಿ ಸೆಳೆದು ಎನ್ನ ಮಂದಿರ ದೊಳಗಿನ್ನು
ಇಂದಿರೆ ಇಂದೊಪ್ಪುತ ಕಂದಾ ಕಂದ ಬೊಮ್ಮ ಮತ್ತು
ನಂದಿವಾಹನ ಸುರರಿಂದ ವಂದಿತ ನಾಗಿ

ಚಂದುಳ್ಳ ವಾಲಗ ಆನಂದದಿ ಕೊಳುತಲಿ
ಇಂದು ಬಾರಯ್ಯಾ ಬಲು ಸುಂದರ ವಿಗ್ರಹ
ಮಂದಮತಿ ನಾ ನಿನ್ನ ಮನದಣಿ ಬೇಡಿಕೊಂಬೆ
ಕಂದನ ಬಿನ್ನಪವ ತಂದಿಯೊ ತಾರೊ ಮನಕೆ
ವಂದರಿತವನಲ್ಲ ಒಂದೇ ದೇವನೆ ಕೇಳು
ಒಂದಿಸೊಬಗೆ ನಿನ್ನ ಒಂದಾದರೂ ಆನರಿಯೆ
ಕಂದು ಮನಜ ನಿನ್ನಾನಂದ ನೋಡೇನೆಂಬೊ
ಛಂದುಳ್ಳ ಬಹು ದಿವಸದಿಂದ ಲೆನ್ನ ಆಸೆಯ
ಮಂದರಧರ ಎನ್ನ ಮನದಭೀಷ್ಟೆ ಪೂರೈಸು
ಸಂದೇಹ ಮಾಡದಿರು ಸಾಧು ಜೀವರ ಪಾಲ
ವೃಂದಾವನದ ಗೋವಿಂದ ಸಿರಿ ಕೃಷ್ಣ
ಮಂದಾಕಿನಿಯ ಜನಕ ಗೋಪಾಲ ವಿಠ್ಠಲ
ಬಂದೆನ್ನ ರಕ್ಷಿಸಯ್ಯಾ ಭಕುತ ವತ್ಸಲ ದೇವ ॥ 1 ॥

ಮಟ್ಟತಾಳ

ಕೊಡುವದು ಹಿಡಿವದು ಬಿಡುವದು ಇಡುವದು
ನಡೆವದು ನುಡಿವದು ಅಡಗೋದು ಮಡಗೋದು
ಒಡಲೊಳು ಪೋಗುವದು ತಡೆವದು ಅಲ್ಲಲ್ಲಿ
ಸಡಗರದಲಿ ತಿಳಿಸಿ ಕಡೆ ಹಾಯಿಸು ಭವದ
ಕಡಲ ಎನ್ನನು ಬೇಗ ಮಡದಿಯರು ಮಕ್ಕಳು
ಒಡವೆಗಳಲಿ ಮನವು ಕಡಕ ವಿಲ್ಲದೆ ಎಳೆದು
ಬಡಬಾರದ ಭಂಗ ಬಡಿಸಿದ ಕಾಲಕ್ಕೂ
ಧೃಡ ನಿನ್ನ ಜ್ಞಾನ ಕೊಡು ಎನಗಲ್ಲೆಲ್ಲಿ
ಮೃಡಸಖನೆ ಚಲ್ವ ಗೋಪಾಲವಿಠ್ಠಲ ಎನ್ನ
ಹಿಡಿದಾಡಿಸೊ ಧೊರಿಯೆ ಬಿಡದಿರು ಎನ್ನ ಕರವ ॥ 2 ॥

ತ್ರಿವಿಡಿತಾಳ

ಆನಂದ ಕೊಡುವದು ನಿನ್ನಿಂದ ಮಾತ್ರದಿ
ಆನಂದ ಕೊಡುವದು ನಾನಂದ ಮಾತ್ರದಿ
ಆನಂದ ವೆಂಬ ಸಥೆಯು ಆನಾಡಲಿಲ್ಲ ವೆಂದು

ಆನಂದ ಮೂರುತಿ ಹರಿ ಆಡಿಸಿದ ನೆಂತೆಂದು
ಆನಂದ ನಾದಿ ಶ್ರೀಮದಾನಂದ ತೀರ್ಥರ
ಆನಂದ ಉಕ್ತಿಯ ಆನಂದ ದಲ್ಲಿದ್ದರೆ
ಆನಂದ ಕೊಡುವದು ಆನಂದ ಮೂರ್ತಿಯ
ಆನಂದ ವೆಂಬೋದು ನಿನ್ನ ನೋಳ್ಪುವದೆ
ಆನಂದ ವೆಂಬೋದಿನ್ನೊಂದು ಅರಿಯೆನು
ಆನಂದ ಗುಣಪೂರ್ಣ ಗೋಪಾಲವಿಠ್ಠಲ
ಈ ನಿಮಿಷವೆ ಸಾಕು ನಿನ್ನ ತಿಳಿವವ ಧನ್ಯ ॥ 3 ॥

ಅಟ್ಟತಾಳ

ದೋಷ ದೂರನೆ ನಿನ್ನ ಸ್ಮರಿಸುವರಿಗೆ ದೋಷದ
ರಾಶಿ ಇನ್ನಾ ಶ್ರೈಸಲಿ ಬೇಕೆ
ನಾಶ ಮಾಡೆನ್ನಘ ರಾಶಿಗಳೆಲ್ಲನು
ಮೋಸಗೊಳಿಸಬೇಡ ದಾಸರ ಪ್ರಿಯನೆ
ಹೇಸಿಕ್ಹುಟ್ಟಿಸು ದುರಾಸಿಗೆ ಮನವನು
ಆಸೆ ತೋರಿಸು ನಿನ್ನ ಪಾದ ಕಮಲಾನಂದ
ಈಷನ್ಮಾತ್ರವನ್ನು ದಾಸತ್ವ ಎಮ್ಮಲ್ಲಿ
ವಾಸವಾಗಿ ಇತ್ತೆ ಪೋಷಿಸು ಶ್ರೀಹರಿ
ಈಶ ನೀನೆಂಬೋದು ದಾಸ ನಾನೆಂಬಂಥ
ಈ ಸಮಯದಿ ಅಲ್ಲ ಅನಾದಿ ಕಾಲದಲಿಂದ
ಶ್ರೀಶ ಬಾ ಎನ್ನಯ್ಯಾ ಗೋಪಾಲವಿಠ್ಠಲ
ಮಾನಿಸಾದೆ ಎನ್ನ ಮನದವಳಗೆ ನಿಲ್ಲು ॥ 4 ॥

ಆದಿತಾಳ

ಒಂದು ದಿನದ ಗೆಳೆಯ ತಾನು
ಹೊಂದಿದವನು ಅಂದು ಆವಗೆ ದುಃಖ
ಚಂದದಿ ತರಿವನು ಕುಂದು ನಿಂದೆ ಆದರೆ
ನೊಂದು ಕೊಂಬೆನು ಮನದಿ
ಒಂದಾಗುವರು ತಮ್ಮ ನಂದಾಗಲಿ
ಇಂದಿರೇಶನೆ ಎನಗೆ ನಿನಗೆ ಗೆಳೆಯತನ

ಇಂದಾದದಲ್ಲ ಅನಾದಿ ಕಾಲದಲಿಂದ
ಹೊಂದಿಕೊಂಡಿದ್ದ ಮೇಲೆ ಬಂದು ಎನಗೆ ದೋಷ
ನಿಂದಿರದಂತೆ ಮಾಡ ಬೇಕಲ್ಲದೆ ನೀ ಎನ್ನ
ಬಂಧನ ದೊಳಘಾಕಿ ಬರಿದೆ ದಣಿಸುವರೆ
ತಂದಿಯ ಮೇಲೆ ಸ್ನೇಹ ಛಂದಾದುಂಟಾದ ದೆಮ್ಮ
ತಂದಿಯ ತಂದೆ ಕೇಳೊ ಬಂದೆ ನಾನದರೊಳು
ಹೊಂದಿರುವ ನಿಮ್ಮ ಕಂದನ ಮತವನು
ಮಂದಮತಿಯ ಮಾತು ಮಾರಮಣ ಮನ್ನಿಸು
ವೃಂದಾರಕ ಪಾಲ ಗೋಪಾಲವಿಠ್ಠಲ
ಬಂಧು ಎನಗೆ ಭವದಿಂದಾಟಿಸು ಜೀಯಾ ॥ 5 ॥

ಜತೆ

ಭಕುತಿಯ ನೀ ಎನಗೆ ಯುಕುತಿಯಿಂದಲಿ ನಿನ್ನ
ಉಕುತಿಲಿ ಪಾಡುವಂತೆ ಮಾಡು ಗೋಪಾಲವಿಠ್ಠಲ ॥ 6 ॥

ಧ್ರುವತಾಳ

## ಸುಳಾದಿ 10

ರಾಗ : ನೀಲಾಂಬರಿ

ಏಸೇಸು ಜನ್ಮಂಗಳು ಎನಗೆ ಬಂದು ಪೋದವು
ನಾಶ ವಾಗಲಿಲ್ಲ ಮನದ ಆಶೆ
ಬೇಸರ ವಾಗಲಿಲ್ಲ ವಿಷಯಂಗಳಿಂದ ಬುದ್ಧಿ
ಸಾಸಿರ ದೊಳಗೊಂದು ಪಾಲಾದರು
ನಾಶ ಗೈಸಿತು ಹೀಗೆ ನಾನಾ ಹಿಂದಿನ ಜನ್ಮ
ಈ ಶರೀರವು ಧರಿಸಿ ಇಲ್ಲೆ ಬಂದೆ
ಭೂಸುರರ ಜನ್ಮದಿ ಬಂದೆ ಬಹು ಸುಕೃತ
ರಾಶಿ ಪುಣ್ಯಗಳು ಕೆಡಲಾಗಿ
ವಾಸೆ ಮತ್ತೇನಿದಕೆ ಬಾಳಿದದಕೆ ವಿಷಯ
ರಾಶಿ ಫಳಿಸಿ ಉಂಡದ್ದೆ ಮಹಾಫಲವೇ
ದೇಶ ಕಾಲ ನೋಡಲು ಅನುಕೂಲ ವಾಗಿಹದು
ವಾಸುದೇವನೆ ನಿನ್ನ ಇಚ್ಛೆ ಒಂದೇ
ಏಸು ಮಾತು ನಾನು ಆಡಿದರೇನು ನಿನ್ನ
ದಾಸರ ದಾಸತನ ಉಂಟಾಗಿತ್ತೆ

ಈ ಸಮಯವೇ ನೋಡು ಎನ್ನ ಉದ್ಧರಿಸಲಿ
ದೋಷ ರಹಿತ ಜ್ಞಾನಾನಂದ ಪೂರ್ಣ
ಲೇಶವಾದರು ಎನಗೆ ನಿನ್ನ ತಿಳಿಯೊ ವಿಷಯದಲ್ಲಿ
ಸಂಶಯ ಎಂಬೋದುಂಟೇನು ಸರ್ವೇಶ್ವರಾ
ಸಂಶಯ ಮಿಶ್ರ ಜ್ಞಾನಿ ಆನಲ್ಲಹುದಲ್ಲವೊ
ವಿಶೇಷವಾಗಿ ನೀನು ಅರಿಯದಿದ್ದೇ
ನೀ ಸ್ವತಂತ್ರನು ನಿನಗೆ ಬೇಕು ಬೇಡೆಂಬರಿಲ್ಲ
ಈ ಸಥೆ ಮಾತು ನೀಕೊಟ್ಟದ್ದಲ್ಲೆ
ಈಷಣತ್ರಯದಲ್ಲಿ ಗೆಳೆವದೆನ್ನ ಮನ ಸರ್ವೇಶ
ನಿನ್ನ ಕಡೆ ಮಾಡ ಬಹುದೋ
ನಾಶರಹಿತ ಶ್ರೀಶ ಗೋಪಾಲವಿಠ್ಠಲ
ಶಾಶ್ವಿತವಾಗಿ ವಾಸವಾದ ಮೂರ್ತಿ ॥ 1 ॥

ಮಟ್ಟತಾಳ

ಕಾಣೆನೊ ಕಾಣೆನೊ ಕಡೆ ಗಟ್ಟಿಸುವರ
ಜ್ಞಾನ ಪೇಳುವರ ಕಾಣೆ ಋಣ ವರಿತು ಇನ್ನು
ಗೇಣು ಮುಂದಕೆ ಸಾಗಿ ಮೊಳ ಹಿಂದಾಗುವದು
ಕಾಣೆ ಪೋದರೆ ಎನ್ನ ಪ್ರಾಣ ಒಪ್ಪಿಸುವೆನೊ
ಹೀನ ಜಯಾದಿಗಳೇನು ತಿಳಿಯಲಿಲ್ಲ
ಶ್ವಾನ ಬುದ್ಧಿಯವನೊ ನಾನು ಕುಯೋಚಿಸುವೆ
ಜ್ಞಾನವಂತರ ಸಂಗ ಏನೆಂತಾಗುವದೋ
ಗೋಣು ಹಿಸುಕುವರ ಸಂಗ ಬಹಳ
ಶ್ರೀನಿವಾಸ ಶ್ರೀಶ ಗೋಪಾಲವಿಠ್ಠಲನಾ
ನಿನ್ನವರವನೋ ಏನು ಮಾಡಿಸಿದರೂ ॥ 2 ॥

ರೂಪಕತಾಳ

ಇಂದ್ರಿಯಗಳ ನಿತ್ತೆ ಅದಕೆ ವಿಷಯಂಗಳಿತ್ತೆ
ಒಂದರ ಸಾಧನಂಗಳು ಒಂದಕ್ಕಾಗುವೆ ಅಯ್ಯಾ
ಚಂದದಿ ನಿನ್ನ ಕಥೆಯ ಕೇಳ್ವ ಕರ್ಣ
ಮಂದಿಯ ವಾರ್ತೆ ಕೇಳಲಿ ಮರುಳಾದವೊ

ಸುಂದರ ನಿನ್ನ ಮೂರ್ತಿಯ ನೋಳ್ಪ ಅಕ್ಷಿಗಳು
ಸೌಂದರ್ಯ ಸ್ತ್ರೀಯರ ನೋಡ ತಿರುಗಿದವಯ್ಯಾ
ಇಂದಿರಾಪತಿ ಮುಡಿದ ಗಂಧ ನಿರ್ಮಾಲ್ಯ ಬಿಟ್ಟು
ಇಂದೀವರ ಮುಖಿಯರ ಮೊಗಕೆ ಗಂಧೇಂದ್ರಿ ವೆರಗಿತು
ಹೊಂದಿ ನಿನ್ನಾಲಿಂಗನ ಮಾಳ್ಪ ಸ್ಪರಿಶೇಂದ್ರಿಯ
ಮಂದ ಸ್ತ್ರೀಯರ ಮೈಯಾಲಿಂಗನಿಗೆಳೆವದು
ಅಂದಾದಿ ಸುಜನರರ್ಪಿಸಿದನ್ನಂಗಳ ಬಿಟ್ಟು
ಮಂದ ಜನರ ಮನೆಯ ರಸಂಗಳ ಬಯಸುವೆ
ಇಂದ್ರಿಯಂಗಳು ಎಲ್ಲ ಈ ಪರಿ ವೆಚ್ಚಾಗಿ
ಮುಂದೆನಗವನ್ನ ಗತಿಯೇನು ಮುಕುಂದನೆ
ಕಂದರ್ಪ ಜನಕ ಗೋಪಾಲವಿಠ್ಠಲರೇಯಾ
ಬಂಧು ಕರುಣ ಸಿಂದು ಗತಿ ನೀನೆ ಎಂದು ॥ 3 ॥

ಝುಂಪೆತಾಳ

ಮದುವೆ ಆಗುವದಕೆ ಮಾಡಿದ ಸಾಧನವು
ವಧೆಯ ನಂತರ ಉತ್ತರ ಕ್ರಿಯಕೆ ಆದಂತೆ
ಉದರ ಗೋಸುಗ ಮಾಡಿ ಇಟ್ಟ ಅನ್ನವ ನೊಯ್ದು
ಉದರದ ಮೇಲೆ ಇಡಲು ಕ್ಷುದೆ ಪೋಪದೇ
ಬಧಿರನ ಮುಂದೆ ಗಾಯನವ ಮಾಡಿದಂತೆ
ಬದುಕು ಎನ್ನದಯ್ಯಾ ಕೊನೆಗೆ ನೋಡಾ
ಒದಗಿ ಬಾಹೋ ಪಯಣದ ಗತಿ ತಪ್ಪದು
ಉದಯ ರಾತ್ರಿ ಮಧ್ಯೆ ಆವದರಿಯೇ
ಇದೆ ಸಮಯ ಮೀರಿದರೆ ಮುಂದ್ಯಾರು ಆನ್ಯಾರು
ನದಿಗಳ ಥೆರೆಯಂತೆ ಜನನ ಮರಣ
ವಿಧಿಕುಲವು ಸುಮ್ಮನೆ ಬಾಹೋದಿಲ್ಲವೊ
ವಿಧಿ ಜನಕನನ್ನು ತಿಳಿವದು ಇಲ್ಲವೆ
ಸುದರುಶನ ಪಾಂಚಜನ್ಯ ಚಕ್ರಪಾಣಿ
ಮಧುಸೂದನ ಮಹದಾದಿ ದೈವ
ಕದನ ಕರ್ಕಶ ಮಲ್ಲರ ವೈರಿ ಹೃಷಿಕೇಶ
ಅದುಭೂತ ಮಹಿಮನೆ ಅಲೌಕಿಕ

ಬುಧಜನ ಪ್ರೀಯ ಗೋಪಾಲವಿಠ್ಠಲ
ವಿಧಿ ನಿಷೇಧಕೆ ನೀನೆ ನಿಯಾಮಕ ॥ 4 ॥

ತ್ರಿವಿಡಿತಾಳ

ಚಿಂತಾಮಣಿಗಾದರು ಬೆಲೆಯು ಕಂಡವರುಂಟು
ಕಂಥಿಗೆ ಬೆಲೆಯುಂಟೆ ನಾನಾ ಛಿದ್ರ
ಕಂಥಿಯೊಳಗೆ ಮಣಿಯ ಕಟ್ಟಿದ ಕಾರಣ
ಸಂತ ಜನರು ಬಂದಿದೇ ನೋಳ್ಪರು
ಸಂಥಿಯ ಜನರೆಲ್ಲ ಕಂಥಿಯ ನೋಳ್ಪರು
ಸಂತರು ನೋಳ್ಪಂತೆ ನೋಡುವರು
ಕಂಥಿ ಬಿಡಿಸಿ ಮಣಿಯ ಕಡಿಗೆ ಮಾಡಿದರೆ
ಚಿಂತೆ ಯಾಕೆನ್ನ ಚಿಂತಾಮಣಿ ಚಿಂತಿಪದು
ಕಂಥೆ ಯಲ್ಲ್ಯೇಭಿಮಾನ ಎನಗಿದ್ದ ಕಾರಣ
ಸಂತೆ ಜನರು ಇಟ್ಟ ಬೆಲೆಗೆ ಬಳಲುವರಯ್ಯಾ
ಅಂತರ್ಮುಖರೇ ಅದರ ನಿಜ ಬಲ್ಲರಲ್ಲದೆ
ಚಿಂತಿತ ವಾಗುವದೆ ಸರ್ವರಿಗು
ಶಾಂತ ಮೂರುತಿ ಶ್ರೀಶ ಗೋಪಾಲವಿಠ್ಠಲ ನೀ
ನಿಂತಲ್ಲಿ ಸಕಲ ನಿಧಾನ ಉಂಟು ॥ 5 ॥

ಅಟ್ಟತಾಳ

ಚೇತನನ್ನು ನೀನು ಜಡ ಮಾಡುವಿ ಅ-
ಚೇತನ ಪಿಡಿದಿನ್ನು ಚೇತನ ಮಾಡುವಿ-
ಪಾತಕ ಪಾವನ ಎರಡು ನಿನ್ನಾಧೀನ
ಯಾತರವನು ಅಲ್ಲ ಎಲ್ಲ ನಿನ್ನಾಧೀನ
ಕೋತಿಯ ಮರಿ ತಾನು ಕಚ್ಚಿಕೊಂಡಿದ್ದಂತೆ
ಆತೆರವೆ ಅಯ್ಯಾ ನಿನ್ನ ಹಿಡಿತ ಬಲು
ಪ್ರೀತಿ ಬಡಿಸು ಬಲು ಯಾತನೆ ಬಿಡಿಸಿನ್ನು
ಖ್ಯಾತಿ ವಿಖ್ಯಾತಿಯೊ ನಿನ್ನದೆ ಸರ್ವೇಶ
ಸ್ವಾತಿ ಹನಿಗೆ ಕಪ್ಪಚಿಪ್ಪು ಬಯಸಿದಂತೆ
ಆತೆರದಿ ನಿನ್ನ ಕರುಣಾ ರಸದ ಬಿಂದು
ಯಾತರಿಂದಾಗಲಿ ಎರವದೆಂದೆನ್ನಲ್ಲಿ

ಆತುರನಾಗಿ ಕೈಸೋತು ನಿಲ್ಲಿಸಿ ಇಪ್ಪೆ
ಜ್ಯೋತಿರ್ಮಯ ಮೂರ್ತಿ ಗೋಪಾಲ ವಿಠ್ಠಲ ನೀ
ಪ್ರೀತನಾಗುವ ಸಾಧನವಾನ್ಯಾತರಿಂದಲಿ ತೋರೋ ॥ 6 ॥

ಆದಿತಾಳ

ಕೋರುವವನಾಗಿನ್ನು ಕಾಣಲಿಲ್ಲ
ಕರವು ತುರುವು ಆಗಿ ಕಾಣಲಿಲ್ಲ
ಮರದಿದ್ದ ಮದಡೇರಿ ಕಾಣಲಿಲ್ಲ
ಎರಡು ಪಕ್ಷದಿ ಹಾರಿ ಕಾಣಲಿಲ್ಲ
ಮರವಾಗಿ ಮನೆಯಾಗಿ ಕಾಣಲಿಲ್ಲ
ಎರಳ್ಯಾಗಿ ಕಪಿಯಾಗಿ ಕಾಣಲಿಲ್ಲ
ನೊರಜಾಗಿ ನೆಗಳಾಗಿ ಕಾಣಲಿಲ್ಲ
ಪುರನಿರ್ಮಿಸಿ ನಿನ್ನ ಕಾಣಲಿಲ್ಲ
ಗಿರಿ ಗುಹಗಳ ತಾಕಿ ಕಾಣಲಿಲ್ಲ
ಪರಿ ಪರಿ ವ್ರತ ಉಪವಾಸಂಗಳ ಮಾಡಿ
ಬರಿದೆ ದಂಡಿಸಿತನು ಕಾಣಲಿಲ್ಲ
ಬರಿದೆ ಪೋದವು ನಾನಾ ಜನ್ಮಂಗಳು
ಮರಳು ಅಹಂಕಾರದಿ ಮಾಯಕ್ಕೆ ಸಿಲ್ಕಿನ್ನು
ಅರಿದವ ನೀನಲ್ಲ ನೀನಾರೋ ಆನ್ಯಾರೋ
ಮರುಳಂಗೆ ಶೈವ ಚರಣೆಗೆರಗಿ ಇನ್ನು
ತಿರಿಗಿ ಶ್ರೀಚರಣಕ್ಕೆರಗಿ ನಡದೆನಲ್ಲ
ತರುಳನ ಅಪರಾಧ ತಾಳಿದೆ ನಿನಗಿನ್ನು
ಸರಿಉಂಟೆ ಸರಿಉಂಟೆ ಕರುಣಾನಿಧೆ
ಎರಡು ವಿಂಶತಿ ವತ್ಸರ ವಾಯಿತು ಈ
ಹರಣ ಧರಿಸಿ ಕರುಣಾಕರನೆ
ಇರುವ ಬಗೆಗೆ ಎಚ್ಚರಿಸಿದದಕೆ ಎನ್ನ
ಬರಿದೆ ಕಾಲವು ಪೋಗ ಗೊಡಲಾಗದು
ಗುರುದೇವತಾ ಪ್ರೀತಿ ಆಗಿ ಸಕಲ ಕರ್ಮಾ
ಚರಣೆಯು ಮಾಡಿಸೊ ಹರೆ ಹರೆ
ಪರಮ ದಯಾನಿಧೆ ಗೋಪಾಲವಿಠ್ಠಲ
ಇರಳು ಹಗಲು ನಿನ್ನ ಸ್ಮರಣೀಯ ನೀಡೋ ॥ 7 ॥

ಜತೆ

ಸಕಲಕ್ಕೂ ನಿನ್ನ ಬೇಡುವದೇನು ವಿಷಯದಾ
ಸಕುತಿಯ ಬಿಡಿಸೊ ಗೋಪಾಲ ವಿಠ್ಠಲ ರೇಯಾ ॥ 8 ॥

ಧ್ರುವತಾಳ **ಸುಳಾದಿ 11** ರಾಗ : ಪಂತುರಾವಳಿ

ಸಾಕಾರ ಹರಿಗೆ ನಿರಾಕಾರ ನೆಂಬಿ ನೀನು
ಯಾಕೋ ಕುವಾದಿ ಗರುವಿಕೆ ತನವು ಏನೊ
ಏಕನಾಗಿ ಸುರರಾ ಸುರರು ಕೊಂಡಾಡಿ ಕೊಂಡು ಇನ್ನು
ಆ ಕಲಶದಮೃತ ನೀ ಕೊಡಿ ತಾ ಕೊಡೆಂಬೊ
ಆ ಕಾಲದಲಿನ್ನು ಸ್ತ್ರೀಯಾಕಾರ ವಾಗೆ ಹರಿ
ಆಕಾರಕ್ಕಸುರರು ಮೋಹಕರಾಗಲಿಲ್ಲವೆ
ಸಾಕಲ್ಯ ಗುಣನಿಗೆ ನಾಲ್ಕೆರಡು ಗುಣವೆಂಬ
ಯಾಕೆ ನಿನ್ನದು ಇಂಥ ಪೋಕತನವು ಬಿಡಿ
ಲೋಕದೊಳಿದ್ದಂಥ ನಾನಾಕು ಪದಾರ್ಥದಿ
ಆಕಾರ ಹರಿಗುಣ ನೀ ಕೇಳೋ ಮೂರ್ಖ ಜೀವ
ಸಾಕಲ್ಯ ನಿರ್ದೋಷಗೆ ನೀ ಕಲ್ಪಿಸಿ ವಿದೋಷ
ನೀ ಕಲಿ ರಾವಣನ ಕೊಂದ ಈ ಕಲ್ಪಣ ದೋಷ
ತಾ ಕಳೆವನೆಂದು ರಾಮ ಬೇಕಾಗಿ ಲಿಂಗವನ್ನು
ಆಕಾರ ಮಾಡಿದ ನೆಂಬಿ ಈ ಕುಟಿಲ ತನಗಳ್ಯಾಕೋ ನಿನಗೆ ಇನ್ನು
ಬೇಕಾಗಿಲ್ಲೆ ನಿನಗೆ ಲೋಕ ಪಾಲಕನ ಕೂಡ ಈಕಠಿಣುತ್ರಗಳು
ಈ ಕಲಿಯುಗವೆಲ್ಲ (ಅಪ್ರಾಕೃತದಲ್ಲಿ) ಆ ಪ್ರಳಯಕಾಲದಲ್ಲಿ
ತಾ ಕಳೆದೆಲ್ಲರನ್ನು ಏಕ ಮೇವ ನಾಗಿಪ್ಪ
ಸಾಕಲ್ಯ ಸುಖನಿಗೆ ತಾ ಕಳಕೊಂಡು ಸೀತೆ
ಆಕಾರ ಕಾಣನೆಂದು ಶೋಕಿಸಿದನೆಂತೆಂಬೋ
ಈ ಕಪಟ ತನವು ಸಾಕು ಮಾಡಲಾರಿಯಾ
ಸೋಕಿದ ಮಾತ್ರ ಶಿಲಿ ಆಕಾರಾದಳು ಅಹಲ್ಯಾ
ಪ್ರಾಕೃತಾ ನೆಂಬಿ ನೀ ಅಪ್ರಾಕೃತ ಹರಿಯನ್ನು
ಜೋಕೇಲಿ ನೀನು ಬದುಕಲಾರಿಯಾ ಹೇಗೆ
ಆ ಖಳನು ಕಂದನ ತಾ ಕೊಲ್ಲುತಿರಲಾಗಿ

ಏ ಕಾಯೋ ಹರಿಎನ್ನೆ ತಾ ತಿಳಿದಾಕ್ಷಣದಿ
ಹೂ ಕರಿಸಿ ಕಂಭದಿಂದ ತಾ ಪ್ರಕಟಿಸಿತು ನಾದಾ
ನೀ ಕಾಣಲಿಲ್ಲ ಚಾರ್ವಾಕ ಅಯೋಗ್ಯ ಭ್ರಷ್ಟ
ಸಾಕಲ್ಯ ಬಲಾಢ್ಯನ್ನ ಆ ಕಂಸಗಂಜಿ ಇನ್ನು
ಗೋಕುಲ ಪೊಕ್ಕಾ ನೆಂಬಿ ಈ ಕಪಟತನ ವೇನೋ
ಆಕಾರವನು ಹರಿಯ ನೀ ಕರಿಸಲಾಗಿನ್ನು
ತಾ ಕರದಿ ಶಸ್ತ್ರಿಲ್ಲದೆ ಆ ಕಿರೀಟಿಗೆ ಇನ್ನು
ಸಾಕಾರವಾಗಿ ಹರಿ ಆಕಳಗಳ ಆಳಿದಾ
ಪಾಕ ಶಾಸನನು ಗರ್ವಿಕೀಯ ತನದಲ್ಲಿ
ಆಕಳ ಕಾಯುವನೆಂದಾನೇಕ ವೃಷ್ಟಿ ಗರಿಯೆ
ತಾ ಕಾಣುತ್ತಾ ಬೆರಳಾ ನಖಾದಿಂದ ಗಿರಿಯಾ ಆಕಾಶಕೆ ಮೀಟಿದ್ದು
ಸಾಕಿದ ಬಾಲಕಾರಾ ಸಾಕಲ್ಯ ಜ್ಞಾನ ಭರಿತಾ ಗೋಪಾಲ ವಿಠ್ಠಲ ಅನಾ
ದಿ ಕಾಲ ದೈವ ಕಾಣೊ ಶೋಕ ರಹಿತ ರಂಗ ॥ 1 ॥

ಮಟ್ಟತಾಳ

ಹರಿ ಸರ್ವೋತ್ತಮ ಸಿರಿ ಆತನ ರಾಣಿ
ಪರಮೇಷ್ಠಿ ಮಗನು ಹರ ಮೊಮ್ಮಗ ಹರಿಗೆ
ಉರಗ ಮಂಚವು ಇನ್ನು ಗರುಡ ಏರೋ ರಥವು
ಪುರುಹೂತ ಸುರರೆಲ್ಲ ಪರಿವಾರವು ಹರಿಗೆ
ಮರಳಿ ಮೂರುದಿನ ಮರಿಯದಿದ್ದರೆ ನೀರು
ನರಕ ನಾರುವ ಮನುಜ ಹರಿ ನೀನಾಗುವ್ಯಾ
ಬರಬಂದರೆ ನೀನು ಬರಿದೆ ಮೂರುದಿನ
ದೊರಿಯ ದಿದ್ದರೆ ಅನ್ನ ವರಲಿ ಸಾಯುವಂಥ
ಮರುಳು ಮಾನವ ನೀನು ಹರಿಗೆ ನೀ ಸರಿಯಂತೊ
ಅರಿತು ನೀನು ಬದುಕಿ ನರಕವ ಬೀಳಬೇಡ
ಹರಿ ದ್ರೋಹಿಗಳ ಕಂಡು ಧರಿಸನು ಯಮ ತಾನು
ದುರಿತ ಸಂಹಾರಕ ಗೋಪಾಲ ವಿಠ್ಠಲನ್ನ
ಧೊರೆ ಎಂದು ತಿಳಿದು ಧರಿಯೆ ಮೇಲಿರು ಇನ್ನು ॥ 2 ॥

ತ್ರಿವಿಡಿತಾಳ

ಮರುಳ ಮಾನವ ಕೇಳೊ ಸರಿಯಾದರೆ ನೀ ಇನ್ನು
ಹರಿ ಚರಿತೆ ನಿನ್ನಲ್ಲಿ ಇರ ತೋರಿಯಾ ನೀನೊಂದು
ಕರಿಯು ನಕ್ರಗೆ ಸಿಲುಕಿ ಮೊರೆ ಇಡಲಾಗಿನ್ನು
ಹರಿ ವೇಗನೆ ಪೋಗಿನ್ನು ಶರಿಯ ಬಿಡಿಸಿದನು
ಸರ್ಪನೆ ನೀನೊಂದು ನೆರೆ ಮನೆ ಝುಗಳವ
ಹರಿದು ಬರಲಾಪಿಯಾ ಮರುಳು ಮನುಜನೆ ನೀ
ಹರಿ ಕಾಳಿಂಗನ ಏರಿ ಭರದಿಂದ ಕುಣಿದನು
ತಿರುಗಿ ನೀನು ಒಂದು ಉರಗನ್ನು ಪಿಡಿದಿಯಾ
ಹರಿ ಪೊಕ್ಕಳಿಂದಲಿ ಹಿರಣ್ಯ ಗರ್ಭನ ಪೆತ್ತಾ
ನರನೆ ನೀನು ಒಂದು ಇರಿವಿಯಾ ಪೆತ್ತಿಯಾ
ಹರಿಯ ರಾಣಿಯು ಸಿರಿಯು ಧರಿಯಲ್ಲ ಪೊರೆವಳು
ತಿರುಗಿ ತಿರುಗಿ ನೀನು ಕುರುಡನಾಗಿ ಕುಳ್ಳಿರೆ
ಮರಳಿ ನಿನ್ನರಸಿನ್ನು ತಿರುಕೆ ಬೇಡುವಳಲ್ಲೋ
ಶರಧಿ ಮಥನದಲ್ಲಿ ಗರಳ ಹೊರಡಲಾಗಿ
ಹರಿಯ ಮಗನು ವಾಯು ಭರದಿಂದ ಮೆದ್ದನು ಕಾಣೊ
ಮರಳೆ ನಿನ್ನ ಮಗನು ಸರ್ಪನೆ ವೃಶ್ಚಿಕ ಸೋಕೆ
ಹೊರಳಿ ಹೊರಳಿ ದಿಂಡುರುಳಿ ಅಳುವನಲ್ಲೊ
ಹರಿಯ ಮಂಚವು ಇನ್ನು ಧರಿಯಲ್ಲ ಹೊತ್ತಿತು
ಮರುಳೆ ನೀನೊಂದು ಸತ್ತ ಕರುವಿನ ಹೊತ್ತಿಯಾ
ಉರಿಗೆ ಅಂಜುವ ಮನುಜಾ ಹರಿ ನೀನಾಗಲಿ ಬಲ್ಲ್ಯಾ
ಮರುಳೆ ಕಣ್ಣಿಗೆ ನಿದ್ರೆ ಬರುವದು ಅರಿ ನೀನು
ಹರಿ ನಾನೆಂಬೋಂಥ ಪರಿ ಆವದು ತೋರೊ
ಥರವಲ್ಲ ನಿನಗಿದು ಕುರಿ ಕತ್ತೆ ಹಿಂಗಾಲೆ (ಕುರಿ ಹಿಂಗಾದೆ)
ಪರಮ ದಯಾಳು ಗೋಪಾಲವಿಠ್ಠಲರೇಯಾ
ಸ್ವರಮಣ ಶೃತಿಪಾದ್ಯ ಜರಾಮರಣ ರಹಿತ ॥ 3 ॥

ಅಟ್ಟತಾಳ

ಹರಿ ದ್ರೋಹಿಗಳು ಜರಾಸಂಧ ಹಿರಣ್ಯಾಕ್ಷ
ದುರಿಯೋಧನರೆಲ್ಲ ತೆರ ರೇನಾದರು ನೋಡು

ಹರಿಯ ಕೂಡ ಕರಿಯು ಮರಳಿ ವಕ್ಕರಿಸಲು
ಇರುವೋದೆ ಅದು ಇನ್ನು ಧರಿಯ ಮೇಲೆ ತಾನೀಗ
ಬರಿದೆ ನೀನು ವ್ಯರ್ಥ ನಿರಯವ ಹೊಗ ಬೇಡಾ
ಹರಿಯನ್ನೇ ಭಜಿಸಿದವರ ಭಾಗ್ಯವ ನೋಡು
ಹರಿಸರ್ವೋತ್ತಮ ನೆಂದು ತರುಳ ಪ್ರಲ್ಹಾದಂಗೆ
ಸರ್ರನೆ ಹಿಗ್ಗುತ ತವುರ ಮನೆಯಾಗಿ ಪೊರೆದಾ
ಹರಿಭಕ್ತರಾದಂಥ ಕರಿರಾಜ ಧೃವರಾಯ
ವರ ವಿಭೀಷಣ ಭೃಗು ಸುರಮುನಿ ನಾರದ
ಪರಿ ಪರಿಯಲ್ಲಿ ಇನ್ನು ಹರಿಯನ್ನೆ ಕೊಂಡಾಡಿ
ಸಿರಿ ಸಂಪತ್ತುಗಳುಳ್ಳ ಧೊರೆ ಆದರು ನೋಡೊ
ಹರಿಗೆ ಭೃತ್ಯನೆಂದು ಸ್ಮರಿಸಿದ ಮನುಜಂಗೆ
ಪರಗತಿ ಸಾಧನ ದೊರ ಕೊಂಬುವದು ಕಾಣೊ
ಹರಿಯು ನಾನು ಎಲ್ಲ ಸರಿ ಎಂದ ನರನಿನ್ನು
ನರಕ ತಪ್ಪದು ಎಂದು ಶೃತಿ ಸಾರುತಲಿವೆ
ಕರುಣಾಕರ ರಂಗ ಗೋಪಾಲ ವಿಠ್ಠಲನ್ನ
ಸ್ಮರಣಿ ಮಾತ್ರದಲಿಂದ ದುರಿತ ದೂರಾಹಾದೊ ॥ 4 ॥

ಆದಿತಾಳ

ಬಾಳ ಪರಿ ತಿಳಿ ಹೇಳಿದರನ್ನ ನಿನ್ನ
ಖೂಳ ಮತವ ಬಿಡಿ ಬಾಳಲಾರಿಯೊ ನೀನು
ತಾಳರು ನಿನ್ನ ಯಮನಾಳು ಕಂಡರೆ ಇನ್ನು
ಸೀಳೋರು ಜಿಂಹ್ವೆಯ ಕೀಳೋರು ಕಣ್ಣನು
ಹೋಳು ಮಾಡೋರು ತಲೆ ಆಳಾಗದಂತೆ ನಿನ್ನ
ಹೂಳೋರು ಕ್ರಿಮಿ ಕೊಂಡದೊಳು ನಿನ್ನೊಯಿದು
ಕೇಳದೆ ಎನ್ನ ಮಾತು ಏಳಲ ಮಾಡಿದರೆ
ಹಾಳಾಗಿ ಹೋಗು ನಿನ್ನ ಕಾಲ ಮುಂದಾಗಿ ಬೇಗ
ಸೂಳೆ ಶೃಂಗಾರ ದೇಹ ವೇಳೆ ಮೀರಿದ ಮೇಲೆ
ಕಾಲ ಅರಘಳಿಗೆ ಇಳಿಯೊಳಿರದಿನ್ನು
ಘಾಳಿಯಂತಲಿ ತಿಂದು ಆಳೋಧೊರಿಗೆ ಸಮ
ನಾಳು ಎಂಬೋದು ಹೀಯಾಳುತನವು ಏನೋ

ಗೋಳು ತಪ್ಪದು ನರಕ ಬೀಳೋದು ನೀ ಸತ್ಯ
ಘಾಳಿ ದೇಹವ ನಂಬಿ ಖೂಳಿ ಕೆಡಲಿ ಬೇಡ
ಕಾಳಿ ಮರ್ದನ ರಂಗ ಗೋಪಾಲವಿಠ್ಠಲಂಗೆ
ಊಳಿಗನಾಗಿನ್ನು ಬಾಳೆಲೊ ಮನುಜ ॥ 5 ॥

ಜತೆ

ಹರಿ ಸರ್ವೋತ್ತಮ ಮರುತರೆ ಗುರುವೆನ್ನು
ಸ್ವರೂಪ ಸುಖವ ಕೊಡುವ ಗೋಪಾಲವಿಠ್ಠಲ ॥ 6 ॥

ಧ್ರುವತಾಳ **ಸುಳಾದಿ 12** ರಾಗ : ಕಾಂಬೋಧಿ

ವೈರಾಗ್ಯ ಮಾರ್ಗ ಕೇಳು ದಾರಿದ್ರ ಮಾರ್ಗ ಕೇಳು
ಶ್ರೀರಾಮನ ಪಾದ ಆರಾಧಿಸುವದಕ್ಕೆ
ನಾರಿಯು ಧಾರುಣಿಯು ಧನವ ಬಿಟ್ಟರಾಯಿತೆ
ವೈರಾಗ್ಯವಲ್ಲ ಕಂಡ್ಯಾ ಧೀರರಿಗೆ
ಶಾರೀರಕೆ ಭಸುಮಪಾರಾವಾಗಿ ಧರಿಸಿ
ಚೀರೆ ವಸ್ತ್ರವನುಟ್ಟು ತಿರುಗಿದರೆ
ಆರಾದರೂ ಅವನ ಅವಧೂತನೆಂತೆಂದು
ಸಾರಿಸಾರಿಗೆ ಇನ್ನು ಕರೆವರೇನಯ್ಯಾ
ವೈರಾಗ್ಯ ವೆಂಬುವಂಥ ವಾರುತಿ ವಂದಲ್ಲದೆ
ನಾರಾಯಣಗೆ ಇದು ಪ್ರಿಯವಲ್ಲ
ನಾರಿ ಸುತರುಗಳ ಶಾರೀರ ಸಂಬಂಧಿ
ಗಾರು ಎಂತೆಂದು ಅರಿದಿರಲಿ ಬೇಕು
ನೀರು ಒಳಗೆ ಇನ್ನು ಕಮಲ ವಿದ್ದಂತೆ
ಕಾರಣನಾಗಿ ಕಾರ್ಯ ವಿಲ್ಲದಲಿರಬೇಕು
ಮಾರ ಜನಕ ನಮ್ಮ ಗೋಪಾಲ ವಿಠ್ಠಲನು
ತೋರಿ ಕೊಟ್ಟ ವೈರಾಗ್ಯವನೆ ತೋರುವೆ ॥ 1 ॥

ಮಟ್ಟತಾಳ

ಸ್ವಾಯೋಗ್ಯತೆಯೊಳಗೆ ಆಯತ ವಾದದ್ದು
ನೋಯದಲೆ ಉಣುತಲೆ ಈವದೆ ವೈರಾಗ್ಯ

ಸ್ನೇಹದಿ ಹರಿ ಕೊಟ್ಟ ಕರ್ತೃತ್ವವು ತನಗೆ
ನೀ ಇಲ್ಲದೆನ್ನಿಂದಾಗದು ಎನುತಲಿ
ತಾ ಇಪ್ಪುವದೆ ನ್ಯಾಯದ ವೈರಾಗ್ಯ
ಆಯಸವು ಬಡದೆ ಪರರ ಶ್ರೇಯಸ್ಸು ನೋಡಿ
ಶ್ರೀಯರಸ ನಿತ್ತನೆಂಬದೆ ವೈರಾಗ್ಯ
ಮಾಯಾರಹಿತ ದೇವ ಗೋಪಾಲ ವಿಠ್ಠಲನ್ನ
ಪ್ರೀಯದಿ ನೆಚ್ಚಿ ಅನ್ಯಕ್ಕೆರಗದ್ದೆ ವೈರಾಗ್ಯ ‖ 2 ‖

ತ್ರಿವಿಡಿತಾಳ

ಧನವ ಪರಿತ್ಯಾಗವನು ಮಾಡಿದಡಾಯಿತೆ
ಘನವಾದ ವೈರಾಗ್ಯ ವಲ್ಲ ನೋಡಿ
ಧನವ ಬಿಟ್ಟಿರವೆ ದನಗಳು ಅನುದಿನ
ಘನವೇನು ಇವಕೆ ಅವಗೆ ನೋಡಲು
ಜನರ ಬಿಟ್ಟೇಕಾಂತವನು ಕುಳಿತ ಡಾಯಿತೆ
ಘನವಾದ ವೈರಾಗ್ಯ ವಲ್ಲ ನೋಡಿ
ಜನರ ಬಿಟ್ಟಿರದೇನು ಅನುಗಾಲ ಗೂಗಿಯು
ಘನವೆಂದು ಕರೆವರೆ ಜ್ಞಾನಿಗಳು
ತನುಮನದ ಭಿಮಾನವನ್ನು ಬಿಟ್ಟರಾಯಿತೆ
ಘನವಾದ ವೈರಾಗ್ಯ ವಲ್ಲ ನೋಡಿ
ತನುಮನದಭಿಮಾನವನು ಬಿಟ್ಟು ಕುನ್ನಿ ತಾ
ಮನೆ ಮನೆ ತಿರುಗದೆ ಅನುಗಾಲವೋ
ಘನ ಮಹಿಮ ಚಲುವ ಗೋಪಾಲ ವಿಠ್ಠಲನ್ನ
ನೆನೆದು ಸಕಲ ಸುಖದಿ ನಾ ವುಣವದೆ ವೈರಾಗ್ಯ ‖ 3 ‖

ಅಟ್ಟತಾಳ

ರೋಗ ಭೋಗಂಗಳು ಆಗಲಿ ಈ ದೇಹಕ್ಕೆ
ಯಾಗಂಗಳು ಮಾಡಿ ಹರಿಗೆ ಅರ್ಪಿಸಿ ಪರಿ
ತ್ಯಾಗವೆ ಮಾಡದೆ ಸುಖ ದುಃಖವು ಸಮ
ಭಾಗವೆರಡು ಹರಿಯಿಂದ ಆದುದು ಎಂದು
ಭೋಗಿಸುತಿಪ್ಪುದೆ ವೈರಾಗ್ಯ ವೈರಾಗ್ಯ

ಕಾಗಿಯಂತೆ ಮೈಯ ಕರ್ರಗೆ ಮಾಡಿನ್ನು
ರೋಗ ಬಂದೆಮ್ಮೆಯಂತೆ ನಾಮವ ಬರ ಕೊಂಡು
ಭೋಗದ ವಸ್ತುವು ಪರಿತ್ಯಾಗವು ಮಾಡಿನ್ನು
ಆಗುವ ಕಾರ್ಯವು ಆಗುತಲಿರೆ ಅಂತ್ರ (ಅಂತರಂಗ)
ಹಾಗೆ ಜನರು ಕಾಂಬ ಹಾಗೇವೆ ಬಾಹಿರ ವೈ
ರಾಗ್ಯವನು ಮಾಡೆ ವೈರಾಗ್ಯ ವಲ್ಲವು
ನಾಗ ಶಯನ ಗೋಪಾಲ ವಿಠ್ಠಲ ಸಮ್ಮ
ತಾಗೆ ಉಣಿಸೋದುಂಡು ಈಹದೆ ವೈರಾಗ್ಯ ॥ 4 ॥

ಆದಿತಾಳ

ಧನವ ಕಟ್ಟಿದ ಚೀಲ ಧಾನ್ಯ ತುಂಬಿದ ಗೋಣಿ
ಪುನಗು ಬೆಕ್ಕಿನಂತೆ ಪುಣ್ಯಾತ್ಮರಘದಂತೆ
ನುಣ್ಣಗೆದ್ದ ಗೋಡಿಗೆ ಹರಳು ಹಚ್ಚಿದಂತೆ
ಉಣುವ ಜಿಂಹೆಗೆ ಕೈ ಅನುಕೂಲ ವಾದಂತೆ
ಮನಸಿಗೆ ಹರುಷವು ಮಾಧವ ಮಾಡಿದ್ದು
ತನುವಿಗೆ ಸುಖವೆಂದು ತಿಳಿದು ಕೆಡದಲೇವೆ
ಗುಣಿಸುತ್ತ ಅಲ್ಲಲ್ಲಿ ಗುಣಗಳು ಹರಿಯ
ನೆನಿಸಿ ನೆನಿಸಿ ಅನುಭೋಗಿಸಿ ಆದದ್ದು
ದಿನಗಳ ಕಳೆವದೆ ಘನ ವೈರಾಗ್ಯವೊ
ಸನಕಾದಿಗಳೊಡಿಯಾ ಗೋಪಾಲ ವಿಠ್ಠಲನು
ಇನಿತು ಪರಿಯಾಗಿದ್ದು ಪೊರೆವನು ॥ 5 ॥

ಜತೆ

ಅರಿಯದ ವೈರಾಗ್ಯ ಹರಹಿ ಕೊಂಬದಕ್ಕಿಂತ
ಅರಿತು ಮೊರೆಯಹೋಗಿರೋ ಗೋಪಾಲ ವಿಠ್ಠಲನ್ನ ॥ 6 ॥

ಧ್ರುವತಾಳ **ಸುಳಾದಿ 13** ರಾಗ : ಕಾಂಬೋಧಿ

ಮಡಿಮಾಡಲಿಬೇಕು ಒಳ್ಳೆ ನಡತೆ ಕಲಿಯಬೇಕು
ದೆಡಹಿ ಮುಗ್ಗುತ ನೀರ ಮಡುವಿನಲ್ಲಿಗೆ ಪೋಗಿ
ಬುಡುಗುಳ್ಳಿಯಂತೆ ಮಿಂದು ಗುಡು ಗುಡು ಗುಟ್ಟುತಲಿ

ನುಡಿವೆ ಮಂತ್ರಗಳು ಕಡುವೇಗ ಪಟ್ಟಿನಾಮ
ಬಡದು ಮುದ್ರಿಯು ಪಚ್ಚಿ
ಜಡದೇಹ ತೊಳೆದು ನಾ ಮಡಿವಂತನೆನಿಸುವೆ
ಬಡಿವಾರ ತನದಲ್ಲಿ ಒಡಲೊಳು ಕಾಮಕ್ರೋಧ
ಅಡಿಗಡಿಗೆ ಮಲಮೂತ್ರ ಜಡಿತ ರಕ್ತಮಾಂಸ
ಕಡುಘೋರ ಇಂದ್ರಿಯಂಗಳು ಕೊಡದೊಳು ಮದ್ಯತುಂಬಿ
ಮಡಕಿಗೆ ಮಾಲೆ ಹಾಕಿ ಜಡಿತವಾಗಿ ಪರಿಮಳ ದ್ರವ್ಯವುಪೂಸಿ
ನಡುಬೀದಿಯೊಳಗಿಟ್ಟು ಬೆಡಗು ತೋರಿಸಿದಂತೆ
ಮಡಿಮಾಡಿದರದು ಮಡಿ ಎನಿಸುವದೆ ಕಂಡ
ಕಡೆಯಲ್ಲಿ ವ್ಯಾಪ್ತ ಗೋಪಾಲವಿಠ್ಠಲನೆಂದು
ಧೃಡವಾಗಿ ತಿಳಿದೊಂದು ನುಡಿ ಮಾತ್ರ ನುಡಿದವ
ಮಡಿವಂತ ಮಡಿವಂತನೊ ॥ 1 ॥

ಮಟ್ಟತಾಳ

ಮಡಿವಿನೊಳಗಿದ್ದ ಕರಿರಾಜನ ನೋಡು
ಧೃಡಛಲ ಭಕುತ ಪ್ರಲ್ಹಾದನ ನೋಡು
ಅಡವಿಯೊಳಗೆ ನಡೆದ ಧೃವರಾಯನ ನೋಡು
ಪೊಡವಿಯ ಮೇಲೆ ದ್ರೌಪತಿಯ ದೃಷ್ಟಾಂತ ನೋಡು
ಕಡುಪಾತಕಿಯಾದ ಅಜಮಿಳನ ನೋಡು
ನಡು ರಣದೊಳಗೆ ನುಡಿದ ನರನ ನೋಡು
ಮೃಡನ ಭಾಗ್ಯವ ನೋಡು ಜಡೆ ನಾರದನ ನೋಡು
ಎಡೆಯ ಕೊಂಡೋಡಿದ ಹನುಮಂತನ ನೋಡು
ಕಡೆ ಮೊದಲಿಲ್ಲದ ಮುನಿಗಳನ ನೋಡು
ಕಡಲ ಶಯನ ರಂಗ ಗೋಪಾಲ ವಿಠ್ಠಲನ್ನ
ನುಡಿದವರಲ್ಲದೆ ಮಡಿ ಮಾಡಿದವರಾರೊ ॥ 2 ॥

ತ್ರಿವಿಡಿತಾಳ

ಗುರುಮುಖ ವಿರಬೇಕು ಹರಿದೈವ ವೆನಬೇಕು
ಅರಿಗಳ ಗೆಲಬೇಕು ವರಜ್ಞಾನ ವಿರಬೇಕು
ಪರಧನ ಪರಸತಿ ಉರಿಯಂತೆ ನೋಡಬೇಕು

ಹರಿಕಥಾಶ್ರವಣವು ನಿರುತ ಕೇಳಲಿಬೇಕು
ಹಿರಿಯರ ಚರಣಕ್ಕೆ ಎರಗ ಬೇಕಾವಾಗ
ಪರ ಉಪಕಾರವು ಇರಬೇಕು ಪ್ರತಿಕ್ಷಣ
ಹರಿ ಸಚ್ಚಾರಾಚರ ಪ್ರೇರಕ ನೆಂದರಿಯಬೇಕು
ಪರಮೇಷ್ಠಿ ಶಿವ ಸುರರು ಹರಿ ಭೃತ್ಯರೆನಬೇಕು
ಹರಿಗೆ ಜೀವಗೆ ಬೇಧವೆಂದು ತಿಳಿಯಬೇಕು
ಗುರು ಮಧ್ವ ಮತವೆ ಸಿದ್ಧಾಂತ ವೆಂದೆನಬೇಕು
ಪರಮಾಣು ಸ್ಥೂಲದಿ ಹರಿವ್ಯಾಪ್ತ ನೆನಬೇಕು
ಪರರು ತನ್ನವರು ಸಮರೆಂದನೆನಲಿ ಬೇಕು
ಹಿರಿದು ಹಿಗ್ಗದೆ ತಾ ಅಸ್ವತಂತ್ರ ನೆನಬೇಕು
ಹರಿ ಸರ್ವ ಬಹಿರ ಅಂತರ ವ್ಯಾಪ್ತ ನೆನಬೇಕು ಈ
ಪರಿ ತಿಳಿದದ್ದೆ ಮಡಿ ಅವನೆ ಮುಕ್ತಿಯೋಗ್ಯ
ಹರಿಯು ಪ್ರೇರಿಸಿದರೆ ಆವದಾಗದು ಒಂದು
ಸಿರಿಯ ರಮಣ ಗೋಪಾಲವಿಠ್ಠಲ ನಿನ್ನ
ಕರುಣಕ್ಕೆ ಪಾತ್ರ ನಾದವನೆ ಇದನರಿವಾ ॥ 3 ॥

ಅಟ್ಟತಾಳ

ನಿತ್ಯ ಸಂಸಾರಿಗೆ ಅತ್ಯಂತ ದೂರವು
ಮತ್ತೆ ದೈತ್ಯರಿಗೆ ಸ್ವಪ್ನದಲ್ಲಿ ನಾಸ್ತಿ
ಸತ್ವ ಜೀವರಿಗೆ ಹರಿ ಕರುಣವಮಾಡಿ
ತತ್ವಾಭಿಮಾನಿ ದೇವತೆಗಳಿಗೆ ಪೇಳಿ
ಉತ್ತಮವಾದ ಕರ್ಮಗಳನೆ ಮಾಡಿಸಿ
ಮತ್ತವರಲಿ ತಾ ನಿಂತು ಮಾಡಿಸಿದಘ
ಕಿತ್ತಿ ಒಗೆದು ದೋಷ ಕಲಿಯಾಧೀನವ ಮಾಡಿ
ಸತ್ಯಲೋಕಾಧಿಪನ ಕಲ್ಪಾಂತರದಲ್ಲಿ
ಸತ್ವ ಜೀವರು ವಿರಜೆಯಲಿ ಬೊಮ್ಮನ ಸಹ
ಮುಕ್ತಿ ನೈದುವರು ಶಕ್ತ್ಯಾನುಸಾರ ವಿವಿಧ
ಮುಕ್ತಿದಾಯಕ ಗೋಪಾಲವಿಠ್ಠಲ ನಿನ್ನ
ಚಿತ್ತ ಬಂದಂತೆ ವಿಚಿತ್ರ ಚರಿತನೆ ॥ 4 ॥

ಆದಿತಾಳ

ಎತ್ತ ಪೋದರೆ ಏನು ಎಲ್ಲಿ ನಿಂತರೆ ಏನು
ಚಿತ್ತ ಬಂದಂತೆ ಚಿಗಿದಾಡಿದರೇನು
ಚಿತ್ತದಲ್ಲಿ ಹರಿಯ ಕಾಂಬುವ ಭಕುತರಿಗೆ
ಚಿತ್ತಬಂದಂತೆ ಬಂದಂತೆ ಸಂಚಾರವಯ್ಯಾ
ಮತ್ತೆ ಇತರ ಜನರವರಿಗೆ ಸರಿಯೆ
ಮತ್ತೆ ವ್ಯಾಘ್ರವ ನೋಡಿ ನರಮೈಸುಟ್ಟ ಕೊಂಡಂತೆ ನಿನ್ನ
ಚಿತ್ತಕ್ಕೆ ಬಂದವರಿಗೆ ಆರ ಗಣನೆ ಏನೋ
ಉತ್ತಮೋತ್ತಮ ನಮ್ಮ ಗೋಪಾಲ ವಿಠ್ಠಲನ್ನ
ಚಿತ್ತಾನುಸಾರ ನಡೆವನೆ ಧನ್ಯನೋ ॥ 5 ॥

ಜತೆ

ಆವಾವ ಕರ್ಮಗಳು ದೇವಗರ್ಪಿತವೆಂದ
ಜೀವರೇ ಧನ್ಯರೋ ಗೋಪಾಲ ವಿಠ್ಠಲ ॥ 6 ॥

ಧ್ರುವತಾಳ **ಸುಳಾದಿ 14** ರಾಗ : ರೇಗುಪ್ತಿ

ಎನಗಿಂದುತ್ತಮರಿಲ್ಲ ವೆಂಬೋದೊಂದು ದೋಷ
ಎನಗಿಂದನೀಚ ದೊಡ್ಡವನೆಂಬೋದೊಂದು ದೋಷ
ತನಗಿಂದಧಿಕನ್ನ ಸಮಾನವೆಂಬೋದು ದೋಷ
ತನ್ನಿಂದ ಭಿನ್ನ ವಸ್ತು ತನ್ನದೆಂಬೋದು ದೋಷ
ತನಗೆ ತಾನರಿಯ ಅನ್ಯ ಬಲ್ಲೆನೆಂಬೋದು ದೋಷ
ತನಗೆ ತಾ ತುತಿಸಿಕೊಂಡು ಧನ್ಯನೆಂಬೋದು ದೋಷ
ತನಗೆ ಶಕುತಿ ಇದ್ದು ಕರ್ಮ ಬಿಟ್ಟು ಕೂಡುವದೆ ದೋಷ
ತನಗಿಲ್ಲದ ಕರ್ತೃತ್ವ ತಾನು ಎಂಬೋದು ದೋಷ
ಇನಿತು ದೋಷಂಗಳೆಲ್ಲ ಎಣಿಸಿದರಾಯಿತು ಇನ್ನು
ತನಗೆ ಈಶಗೆ ಐಕ್ಯ ಪೇಳುವದಕ್ಕಿಂತ ದೋಷ
ಸನಕಾದಿಗಳ ಒಢಿಯ ಗೋಪಾಲ ವಿಠ್ಠಲನ್ನ
ನೆನೆಸಲಿದ್ದವಗೆ ದೊಡ್ಡ ದೋಷ ॥ 1 ॥

ಮಟ್ಟತಾಳ

ಬೊಮ್ಮಾಂಡ ವ್ಯಾಪ್ತನ್ನ ಬಯಲು ಎಂಬೋದು ದೋಷ
ಬೊಮ್ಮನ ಸೃಜ್ಯನ ಪುಟ್ಟಿದ ನೆಂಬೋದು ದೋಷ
ಬೊಮ್ಮಾಂಡ ಸಂಹಾರಗೆ ಲಯ ಪೇಳ್ವದೆ ದೋಷ
ಬೊಮ್ಮನ ಪಿತನಲ್ಲದೆ ಇನ್ನೊಂದೆಂಬೋದೆ ದೋಷ
ಸುಮ್ಮನಸರ ಪ್ರಿಯ ಗೋಪಾಲವಿಠ್ಠಲಂಗೆ
ಸಮ ಉಂಟೆಂಬವಗೆ ಸರಿಯಿಲ್ಲದ ದೋಷ ॥ 2 ॥

ರೂಪಕತಾಳ

ಮಾಡಬೇಕು ಮಂದೆಲ್ಲ ಸಾರುತಿರಲು
ಮಾಡದೆ ಇದ್ದದು ಮುಖ್ಯವಾದ ದೋಷ
ಬೇಡಬೇಕೆಂದು ಜಗವೆಲ್ಲ ಪೇಳುತಿರಲು
ಬೇಡದಲಿಪ್ಪದು ಅಗತ್ಯವಾದ ದೋಷ
ನೋಡಬೇಕೆಂದು ಲೋಕವೆಲ್ಲ ಪೇಳುತಿರಲು
ನೋಡದಂತಿಪ್ಪೋದು ನೋವಾಗುವದೆ ದೋಷ
ಕೂಡಿ ಆಡಿ ತನ್ನಲ್ಲಿ ಫಲವನರಿಯದೆ
ನಾಡದೇವತಿಗಳಿಗೆ ಹಾರೈಸುವದೆ ದೋಷ
ರೂಢಿಗೊಡಿಯ ನಮ್ಮ ಗೋಪಾಲವಿಠ್ಠಲನ್ನ
ನೋಡಿ ಪೂಜಿಸದವಗೆ ನಿತ್ಯದೋಷ ॥ 3 ॥

ಝಂಪೆತಾಳ

ಆವಾವನು ಈ ಜಗಕೆ ದೇವನಂದರಿಯದೆ
ಆವನಿಂದ ಈ ಜಗಕೆ ಸೃಷ್ಠಿ ಎಂದರಿಯದೆ
ಆವನಿಂದ ಈ ಜಗವು ಪಾಲಣೆಯೆಂದರಿಯದೆ
ಆವನಿಂದೀ ಜಗವು ಲಯವು ಎಂದರಿಯದೆ
ದೇವರಿಗೆ ಜೀವರಿಗೆ ವಿಲಕ್ಷಣರಿಯದ
ಆವಾವನು ಕರ್ಮ ಅನಂತ ಮಾಡಿದರು
ಅವನಿಗೆ ಅನಂತ ದೋಷವಾಗಿ ತೋರುವದು
ಆವ ಕರ್ಮವು ಕಡೆಯ ಗೆಲಿಸಲರಿಯವು
ಜೀವಜಡ ಭಿನ್ನ ಗೋಪಾಲ ವಿಠ್ಠಲರೇಯ
ಆವನಿಗೆ ತಾ ಒಲಿವ ಅವನೇ ಅರಿವಾ ॥ 4 ॥

ತ್ರಿವಿಡಿತಾಳ

ಅನ್ಯದೈವರಿಯದೆ ಅನ್ಯಕ್ಕೆ ಎರಗದೆ
ತನ್ನನ್ನೆ ನೆರೆನಂಬಿ ಚಿಂತಿಪರ
ತನ್ನವ ನೆಂತೆಂದು ತನ್ನ ತಿಳಿಸಿ ಕೊಟ್ಟು
ಘನ್ನ ಪದವಿಗೇರಿಸಿನ್ನು ತಾ ಸಲಹುವ
ಅನ್ಯ ಆಶೆಯುವುಳ್ಳ ಜೀವರೆಲ್ಲರಿಗೆ
ಅನ್ಯನಂತವರಿಗೆ ತೋರುತಿಪ್ಪ
ತನ್ನವ ಅನ್ಯನೆಂಬ ವೈಷಮ್ಯ ನೈರ್ಘಣ್ಯ
ಇನ್ನಿಲ್ಲ ಇನ್ನಿಲ್ಲ ಈಶಗಿನ್ನು
ಭಿನ್ನ ಜೀವರ ಗತಿಅರಿತು ಪಾಲಿಸುವನು
ಇನ್ನೊಬ್ಬರಿಗೆ ಪೂರ್ಣ ಲಭ್ಯನಲ್ಲ
ಘನ್ನ ಮಹಾಮಹಿಮ ಗೋಪಾಲ ವಿಠ್ಠಲ
ತನ್ನ ತಿಳಿವರನು ತನ್ನವನೆಂತೆಂಬ ॥ 5 ॥

ಅಟ್ಟತಾಳ

ಇವನಂತ ವಸ್ತುವು ಇಂದ್ರರೊಳಗೆ ಇಲ್ಲ
ಇವನಂತ ವಸ್ತುವು ರುದ್ರಾದಿಯೊಳಗೆ ಇಲ್ಲ
ಇವನಂತ ವಸ್ತುವು ಬೊಮ್ಮಾದಿಯೊಳಗಿಲ್ಲ
ಇವನ ಸತಿಯಳಾಗಿ ಸಿರಿದೇವಿ ವಾಲೈಸೆ
ಅವರ ಪಾಡೇನಜಭವಾದಿಗಳಿವನ
ನವವಿಧ ಭಕುತಿಂದ ಸೇವಿಸುತಿಪ್ಪರು
ಭವನಾಶ ಭಯಹಾರಿ ಗೋಪಾಲವಿಠ್ಠಲ
ಭುವನೆರಡೇಳಕ್ಕೆ ಒಡಿಯಕಾಣೋ ॥ 6 ॥

ಆದಿತಾಳ

ಒಳಗುಂಟು ಹೊರಗಿಲ್ಲ ಒಳಗಿಲ್ಲ ಹೊರಗುಂಟು
ತಿಳಿಯದಿಪ್ಪನು ನಾನಾ ಸ್ಥಳದಿ ವ್ಯಾಪುತನಾಗಿ
ಬೆಳಕು ಕತ್ತಲು ಇನ್ನು ಸ್ಥಳ ಎರಡೆನ್ನದೆ
ಬಲು ಸುಂದರಾಂಗ ನಂಥೊಳೆಯುತ ಲಿಪ್ಪನು
ಸುಲಭ ಭಕುತರಿಗೆ ಗೋಪಾಲ ವಿಠ್ಠಲರೇಯ
ನೆಲೆಯಾಗುವನು ತನ್ನ ತಿಳಿದರ್ಚಿಪುವಗೆ ॥ 7 ॥

ಜತೆ

ಹಿರಿದು ಕಾರ್ಯಕೆ ಇವನೆ ಕಿರಿದು ಕಾರ್ಯಕೆ ಇವನೆಂ
ದರಿದು ಭಜಿಸಿರೊ ಗೋಪಾಲ ವಿಠ್ಠಲ ಒಲಿವ ॥ 8 ॥

ಧ್ರುವತಾಳ **ಸುಳಾದಿ 15** ರಾಗ : ಭೈರವಿ

ಹರಿಯ ಭಕುತನಾಗು ಹರುಷದಿಂದಲಿ ಇನ್ನು
ಹರಿಯನ್ನೆ ತಿಳಿಯೊ ಸರ್ವಂತರದಿ
ಧರಣಿ ಆಕಾಶ ಸಲಿಲ ಗಿರಿ ಅಗ್ನಿ ವಾಯು ಮಿಕ್ಕ
ತರಣಿಯಲಿನ್ನು ಬಿಡದೆ ಹರಿಯು ಇಪ್ಪಾ
ಸ್ಥಿರವಾಗಿ ಅವರವರ ಗುಣ ಕರ್ಮಾದಿಗಳೆಲ್ಲ
ಹರಿಯೆ ವೈಕುತಿ ಮಾಡಿ ಕೊಡುತಲಿಪ್ಪ
ಹರಿನಡೆದಂತೆ ನಡೆವದು ಈ ಜಗವೆಂದು
ಅರಿಯೊ ಮುಖ್ಯವಾಗಿ ಮನದೀಶಗೆ
ಸಿರಿ ಅಜಭವಾದ್ಯರು ಹರಿಗೆ ಪರಿವಾರವೆಂದು
ತರತಮ್ಯ ಮುಖ್ಯ ಮೂರುತಿಗಳ ಗುಣಿಸು
ಎರಡು ದಾರಿಯ ಮಾರ್ಗವನ್ನು ಯೋಚಿಸುತ್ತ
ಸ್ಥಿರ ಅಸ್ಥಿರ ಆವದೆಂದು ನೋಡು
ಸುರಯಾನ ಪಿತುರಯಾನ ಪರಿಪರಿ ಮಾರ್ಗಉಂಟು
ಅರಿಯೋ ನಿನಗೆ ಮುಖ್ಯ ಸುರ ಮಾರ್ಗವು
ಬರಿದೆ ಕರ್ಮಠ ಜನರು ಎರಗೋರು ಪಿತರಯಾನ
ಸ್ಥಿರವಲ್ಲ ಅದರಿಂದ ದೊರೆತ ಫಲವು
ಪರಮ ಜ್ಞಾನಿಗಳು ಪಥವ ಯ್ದೈದುವಂಥ ವಿ
ವರವ ಪೇಳಲೇನು ಹರಿಯ ಪ್ರೇರಣೆಯಂತೆ
ಪರಮ ದಯಾಳು ಗೋಪಾಲ ವಿಠ್ಠಲನ್ನ
ಕರುಣ ಸಂಪಾದಿಸುವ ಭಕ್ತರಿಗೆ ॥ 1 ॥

ಮಟ್ಟತಾಳ

ಏಕ ಪತ್ನೀವ್ರತವು ಜೋಕೆ ಇಂದಲಿ ಮಾಡು
ಕಾಕು ಆಗದಿರು ಕಂಡವರಿಗೆಲ್ಲ
ವ್ಯಾಕುಲವನು ಬಿಡು ವ್ಯಾಜ್ಯರಹಿತನಾಗು

ಸ್ವೀಕರಿಸು ಇನ್ನು ಸಿದ್ಧವಾದುದ್ದನ್ನು
ಬೇಕು ಎಂದೆನಿಸಿಕೊ ಭಕ್ತ ಜನರಿಗೆ
ನೀಕರಿಸು ನೀಚ ವಿಷಯಗಳೆಲ್ಲ
ಪಾಕಶಾಸನ ವಿನುತ ಗೋಪಾಲವಿಠ್ಠಲ
ಸಾಕುವನು ನಿನ್ನ ಸರ್ವಸ್ಥಳದಲಿದ್ದು ॥ 2 ॥

ರೂಪಕತಾಳ

ಗುಪ್ತದರ್ಚನೆ ಮಾಡು ವ್ಯಾಪ್ತನಾದ ಹರಿಯ
ಆಪ್ತರೊಳು ಕೂಡಿ ಆಲೋಚಿಸಿ
ಶಪ್ತವ ಮಾಡು ಒಬ್ಬರ ಸಂಗವಲ್ಲೆಂದು
ತಪ್ತ ಶೀತಕ್ಕಿನ್ನು ಸಮನು ಆಗು
ಕ್ಲಿಪ್ತ ಬಿಡದು ಎಂದು ಸುಖ ದುಃಖಗಳನ್ನುಂಡು
ತೃಪ್ತಿ ಬಡಿಸು ನಿನ್ನ ಮನದಿ ಹರಿಯ
ಸಪ್ತತ್ರಯ ಕುಲ ನಿನ್ನದುದ್ಧಾರ ವಾಗೋದು
ಆಪ್ತವಾದ ತತ್ವ ಅರಿದುಕೊ ನೀ
ಸುಪ್ತಿ ಜಾಗ್ರತಿ ಸ್ವಪ್ನಾವಸ್ತಿ ಕರ್ಮ
ನಿರ್ಲಿಪ್ತ ಮಾರ್ಗ ಪಿಡಿದು ಹರಿಗರ್ಪಿಸು
ಸಪ್ತದ್ವಯಭುವನೇಶ ಗೋಪಾಲ ವಿಠ್ಠಲ
ಕ್ಲುಪ್ತರೊಳು ನಿನ್ನ ಕೂಡಿಸದಲೆ ಪೊರೆವಾ ॥ 3 ॥

ಝಂಪೆತಾಳ

ದರಿದ್ರ ನೆನಿಸಿಕೊ ಭಿನ್ನ ವಿಷಯ ಉಂಬಲ್ಲಿ
ಸಿರಿವಂತ ನೆನಿಸಿಕೋ ನಿನ್ನ ಸುಖ ನೀನುಂಡು
ಹೊರಗಿನ ವಿಷಯಗಳ ಕಂಡು ಮೋಸಹೋಗದೆ
ಎರಡು ನಿನಗೆ ಮುಖ್ಯ ವಿಷಯ ಶ್ರೀಹರಿಯೆಂದು
ದೊರೆವದಕೆಮಗೆ ಈ ಸಾಧನದುಪಾಯ
ಗುರುದ್ವಾರ ಪ್ರಸಾದವನ್ನು ಘಳಿಸು
ಎರಡು ಗುಣ ನಿನ್ನಗಿಂದಧಿಕರ ಮೊದಲು ಮಾಡಿ
ಪರಮೇಷ್ಠಿ ಪರಿಯಂತ್ರ ತರತಮ್ಯಾನುಸಾರ
ಅರಿದು ಅವರವರ ಪ್ರಸಾದ ಘಳಿಸೆ
ದೊರೆವದು ನಿನಗೆ ಇದರಿಂದ ಸುಫಲವು

ಪರಮದಯಾಳು ಸಿರಿ ಗೋಪಾಲವಿಠ್ಠಲನ್ನ
ಚರಣ ಸಾಧಿಸುವರ್ಗೆ ಇದೆ ಇದೆ ಮಾರ್ಗ ॥ 4 ॥

ತ್ರಿವಿಡಿತಾಳ

ಇಂದ್ರಿಗಳೆಂಬವು ನಿನ್ನ ಸುಖವು ಬಡಿಸ
ಬಂದಿಲ್ಲ ನೋಡು ನೀ ಗೋಳಕ ಚಿಂತಿಸೆ
ಅಂದ ಬಡಲಿ ಬೇಡ ಅಭಿಮಾನ ಮದದಿಂದ
ಕುಂದು ಮಾಡೋದು ನಿನ್ನಾನಂದ ವ್ಯಕ್ತಿಗೆ ಇನ್ನು
ಬಂದ ಬಂದಂತೆ ವಿಷಯಗಳಿಗೆಳೆ ದೊಯಿದು
ತಂದಿಪ್ಪವು ಪುನಃ ಜನನ ಮರಣಗಳು
ದ್ವಂದ್ವ ಜೀವರುಗಳು ಅಭಿಮಾನಿಗಳು ಆಗಿ
ಒಂದೊಂದು ಇಂದ್ರಿಯ ಲಿಪ್ಪುವರು
ಚಂದದಿ ತ್ರಿವಿಧ ಜೀವರ ಗತಿ ಅರಿತು ಮು
ಕುಂದ ಕರ್ಮಗಳ ಮಾಡಿಸಿ ಫಲವನ್ನು
ತಂದೀವ ತತ್ವಾಭಿಮಾನಿಗಳಲ್ಲಿದ್ದು
ಇಂದಿರಾಪತಿ ನಿರ್ದೋಷನಾಗಿ
ಸಂದೇಹ ವಿಲ್ಲದೆ ಸರ್ವಉತ್ತುಮಹರಿ
ಎಂದು ನಿನ್ನ ಮನದಿ ನಿಂದಿರಿಸು
ಇಂದ್ರಿ ನಿಯಾಮಕ ದೈವ ಗೋಪಾಲವಿಠ್ಠಲ
ಬಂಧಕ ತರಿದು ಭಕುತ ನೆಂದೆನಿಸುವ ॥ 5 ॥

ಅಟ್ಟತಾಳ

ಯಾಚೆನೆಯನು ಮಾಡು ಊಚರಲ್ಲಿ ಪೋಗಿ
ಯೋಚಿಸಿ ಹರಿಯಲ್ಲಿ ಆಚಾರ ಮಾರ್ಗದಿ
ನೀಚಗತಿಗೆ ಕೈಯ ಚಾಚಿ ಕುಗ್ಗದೆ ಕಾ
ಲೋಚಿತವೆನ್ನದೆ ಸೂಚೆನೆ ಇಂದಲಿ
ನಾಚಿಕೆಯನು ಬಿಟ್ಟು ನಾಚದೆ ಅವರಲ್ಲಿ
ಆಚರಣೆಯು ಮಾಡು ವಾಚಾಮನ ಕಾಯಾ
ನೀಚಾಸಂಗವೆಂಬ ಶೌಚ ಶುದ್ಧಿಯನ್ನು
ಊಚಸಂಗ ಉದಕ ಆಚಮನವು ಮಾಡು

ಶ್ರೀ ಚಕ್ರಧರನ ನೀ ವಿಚಾರಿಸುವ ತತ್ವ
ಯಾಚೆನೆಯನ್ನು ಮಾಡು ಭೂಚಕ್ರ ದೊಳಗೆಲ್ಲ
ಕೀಚಕಾರಿಗೀಶ ಗೋಪಾಲವಿಠ್ಠಲನ್ನ
ಯೋಚನೆ ಮಾಡನ್ಯಾ ಲೋಚನೆಯ ಬಿಟ್ಟು ॥ 6 ॥

ಆದಿತಾಳ

ಧನದ ಒಳಗೆ ಧನ ಹುಡುಕು
ಗುಣಗಳೊಳಗೆ ಗುಣಿಯ ಹುಡುಕು
ವಿನಯದೊಳಗೆ ವಿನಯ ಹುಡುಕು
ದಣಿವಿನೊಳಗೆ ಧಣಿಯ ಹುಡುಕು
ಎಣಿಸಿ ನಾನಾ ಗುಣ ಶಕುತಿಯು ಮನಸಿನಲಿ
ನೆನೆದು ನೆನೆದು ತನುವಿನಾಶೆ ತೊರೆದು ದುಷ್ಟ
ಗುಣ ಅಂಕುರ ವಣಗಿಸಿನ್ನು
ವನಜನಾಭನೆಂಬ ಸುಖ ಗುಣಾಂಬುಧಿಯ ಸ್ಮರಿಸಿ
ಗುಣತ್ರಯದ ಕರ್ಮ ಬೀಜವು ದಹನವಮಾಡು ಜ್ಞಾನದಿಂದ
ಘನಮಹಿಮ ಚಲುವ ಗೋಪಾಲವಿಠ್ಠಲನು ತನ್ನ
ನೆನೆದ ಹಾಗೆ ಎಲ್ಲ ನಿನ್ನ ಅನುಭವಕ್ಕೆ ಕಾಣಿಸುವ ॥ 7 ॥

ಜತೆ

ಭಕುತ ಭಕುತನಾಗು ಶಕ್ತನಾನಲ್ಲವೆನ್ನು
ಮುಕ್ತಿದಾಯಕ ಗೋಪಾಲವಿಠ್ಠಲ ವೊಲಿವಾ ॥ 8 ॥

## ಸುಳಾದಿ 16

ಧ್ರುವತಾಳ ರಾಗ : ಮಾರವಿ

(ಅಂಕಿತ ಪೂರ್ವದಲ್ಲಿ)

ಎಲ್ಲಿ ನೋಡಲು ನೀನಲ್ಲದ ಸ್ಥಳವಿಲ್ಲ
ಎಲ್ಲರಂತರ್ಯಾಮಿ ಎಲ್ಲ ಪೂರ್ಣನು ನೀನೇ
ಹುಲ್ಲು ಕಾಷ್ಟ ಅಚೇತನಗಳಲ್ಲಿ ನೀ
ನಿಲ್ಲದಿಲ್ಲವೆಂದು ಎಲ್ಲ ಸಾರುತಲಿದೆ
ಸಲ್ಲದ ಮನುಜ ನಿನಗೆ ತನಗೆ ಭೇದ
ವಿಲ್ಲವೆಂಬುವಾಗ ನೇ ನಂಬಿ ಹರಿಯ ಲು
ತ್ಪಲಾ ಕಮಲ ನೀರೊಳಗಿದ್ದು ಲೇಪನ

ವಿಲ್ಲದೆ ಸಾಮ್ಯ ಪೇಳುವುದಯ್ಯಾ ನಿಮಗೆ
ಎಲ್ಲಾರಲ್ಲಿ ನೀನು ಎಲ್ಲಾ ಆನಂದವಿತ್ತು
ಎಲ್ಲಾಕ್ಕೆ ಭೇದ ಎಲ್ಲಾ ನಿರ್ಲೇಪ
ಚಿಲ್ಲರ ದೈವದ ಗಂಡ ವೆಂಕಟ ಕೃಷ್ಣ
ನಿನ್ನಬಲ್ಲವಬಲ್ಲ, ಬಲ್ಲಾರು ಪೂರ್ಣವರಿಯ ॥ 1 ॥

ಮಟ್ಟತಾಳ

ವಿಶ್ವತೋ ಮುಖ ನೀನೆ ವಿಶ್ವತೋ ಚಕ್ಷುನೀನೆ
ವಿಶ್ವತೋ ಬಾಹು ನೀನೆ ವಿಶ್ವಕರ್ಮನು ನೀನೆ
ವಿಶ್ವತೋ ಶ್ರವಣನೆ ವಿಶ್ವಾಧಾರನೆ
ವಿಶ್ವ ವ್ಯಾಪಕ ಸರ್ವ ವಿಶ್ವಮಯನೆ
ವಿಶ್ವ ಕರ್ತೃತ್ವ ಮಹೇಶ್ವರಗುಂಟೆಂಬ ಆ
ವಿಶ್ವಾಸ ಘಾತರೆ ಗೇನೆಂಬೇನು ಹರಿಯೆ
ವಿಶ್ವ ನಾಮಕ ಶಿರಿ ವೆಂಕಟ ಕೃಷ್ಣ
ವಿಶ್ವಾಸ ಕೊಡೊ ನಿನ್ನ ವಿಶ್ವಚರಣದಲಿ ॥ 2 ॥

ತ್ರಿವಿಡಿತಾಳ

ಅಂಗುಟ ಮಾತುರ ಪರಮಾಣು ಮೂರುತಿ ನೀನೆ
ರಂಗಾ ಆತುಮ ಅಂತರಾತ್ಮ ಮೂರುತಿ ನೀನೆ
ಲಿಂಗದೇಹ ಭಂಗವಾಗುವದಕ್ಕೆ ಸಾಧು
ಸಂಗಾದಿಂದಲ್ಲಿ ಸಾಧನಾಂತರದಲ್ಲಿ
ಶೃಂಗಾರದಿಂದಲಿ ಒಂದೇ ಜನ್ಮವುನಿಲ್ಲೆ
ಕಂಗಳಿಗೆ ಕಾಣಿಸಿಕೊಂಬ ಬಿಂಬ ಮೂರುತಿ ನೀನೆ
ಹಿಂಗದೆ ಮುಕ್ತಿಯೋಗ್ಯ ಜೀವಂಗಳು ಕರ್ಮ ಫ
ಲಂಗಳನು-ಭವಿಪ ವಾಸನಾ ಮೂರುತಿ ನೀನೆ
ಲಿಂಗ ದೇಹವು ನಿತ್ಯ ಸಂಸಾರಿಗಳಿಗೆ
ಭಂಗವಿಲ್ಲದೆ ಸ್ವರ್ಗ ನರಕ ನೀಯುವವ ನೀನೆ ಉ
ತ್ತುಂಗ ಮಹಿಮನೆ ತಾಮಸ ಜನರಿಗೆ ದುಷ್ಕ-
ರ್ಮಂಗಳ ಮಾಡಿಸಿ ತಮಸ ನೀಯುವವ ನೀನೆ
ಗಂಗಾದಿ ತೀರ್ಥದಲ್ಲಿದ್ದು ಸುಜನರ ದೋ
ಷಂಗಳ ಕಳೆವ ಮಂಗಳಾತ್ಮಕ ನೀನೆ ತು

ರಂಗವದನ ಸಿರಿ ವೆಂಕಟ ಕೃಷ್ಣ ವಿ-
ಹಂಗವಾಹನ ನೀನೆ ಭುಜಂಗಶಯನನೆ ॥ 3 ॥

ಅಟ್ಟತಾಳ

"ಅಥಃ ಪುರುಷೋಹ ವೈ ನಾರಾಯಣೋ ಕಾಮಯಂತಾ"
ಸಿರಿಯಲ್ಲಿ ನೀನೆ ಪರಮೇಷ್ಠಿಯಲ್ಲಿ ನೀನೆ
ಮಾರುತ ವಾಣಿ ಭಾರತಿಯರಲ್ಲಿ ನೀನೆ
ಉರಗನಲ್ಲಿ ನೀನೆ ಗರುಡನಲ್ಲಿ ನೀನೆ
ಹರನಲ್ಲಿ ನೀನೆ ಸೌಪರಣಿಯಲ್ಲಿ ನೀನೆ
ಗಿರಿಪತಿಯ ಸುತಳಲ್ಲಿ ಪೂರ್ಣ ನೀನೆ
ಸುರಪತಿ ಕಾಮಾದಿ ಸುರರಲ್ಲಿ ನೀನೆ
ನಾರದ ತುಂಬುರ ಗಂಧರ್ವರಲ್ಲಿ ನೀನೆ
ಸುರ ಸಿದ್ಧ ಸಾಧ್ಯ ಕಿನ್ನರರಲ್ಲಿ ನೀನೆ
ಶರಧಿಯಲ್ಲಿ ನೀನೆ ಗಿರಿಗುಹ್ಯಗಳಲ್ಲಿ
ಕರೆದರೆ ಓ ಎಂಬ ಪ್ರತಿ ಶಬ್ದ ನೀನೆ
ಪರಶುರಾಮನಾಗಿ ಪಾವಕನಲ್ಲಿ ನೀನೆ ಬಾ-
ಹಿರಾಂತರ ದಶ ದಿಕ್ಕುಗಳಲ್ಲಿ
ಪರಿಪೂರ್ಣ ವಾಗಿದ್ದ ಪರಮಾತ್ಮನು ನೀನೆ
ನೊರಜು ಗಜ ಸಿಂಹ ಶಾರ್ದೂಲ ಮೊದಲಾದ
ಸರುವ ಜೀವರಲ್ಲಿ ಪರಿಪೂರ್ಣ ನೀನೆ
ಮುರು ಮಧು ಮಾಗಧ ಮೊದಲಾದ ಖಳರಲ್ಲಿ
ಕುರುಮಾನೆಂದು ದುಷ್ಕೃತ ಪ್ರೇರಕ ನೀನೆ
ಧುರವಿಕ್ರಮನಾಮನೆ ವೆಂಕಟಕೃಷ್ಣ
ದುರಾ ದೂರನೆ ಅತಿದೂರ ತರನೆ ॥ 4 ॥

ಆದಿತಾಳ

ನಿಗಮ ತಂದವ ನೀನೆ ನಗಧರ ನೀನೆ
ಜಗವನು ತಂದ ಅಸುರಾಂತಕ ನೀನೆ
ಮೃಗರೂಪ ನರರೂಪ ತಾಳಿದ ನರಸಿಂಹ ನೀನೆ
ಮಗುವಾಗಿ ಗಗನ ಮೀರಿದ ತ್ರಿವಿಕ್ರಮ ನೀನೆ
ಮಗನಾಗಿ ಮಾತೆ ಘಾತಿಸಿದ ಭಾರ್ಗವ ನೀನೆ

ಜಗವ ನರಿಯೆ ರಾವಣಾಂತಕ ನೀನೆ
ನಗುತ ಪೂಥಣಿ ಅಸಫ್ಹೀರಿ ಶಗಟನೊದ್ದ
ಹಗೆ ಕಂಸನ ಕೊಂದ ಕೃಷ್ಣ ನೀನೆ
ಮೃಗಧರ ಗೊಲಿದು ಬತ್ತಲೆ ನಿಂದು ತ್ರಿಪುರವ
ಬಗಿದು ಮೆರೆವ ಬೌದ್ಧಾವತಾರನು ನೀನೆ
ಸೊಗಸಾಗಿ ಹಯನೇರಿದ ಕಲಿಕಿ ನೀನೆ
ಮಿಗೆ ಅನಂತಾನಂತ ಅವತಾರನೆ
ಜಗ ಜನ್ಮಾದಿ ಕಾರಣನೆ ವೆಂಕಟಕೃಷ್ಣ
ನಿಗಮ ಗೋಚರ ಅಘಶೂನ್ಯ ಪಾವನನೆ ॥ 5 ॥

ಜತೆ

ಸರ್ವಾಧಾರನೆ ಸರ್ವ ನಿರ್ಲೇಪನೆ
ಸರ್ವದರ್ಶನ ನಾಮ ವೆಂಕಟಕೃಷ್ಣ ॥ 6 ॥
(ಅಂಕಿತ ಪಡೆಯುವ ಮೊದಲು ಶ್ರೀಗೋಪಾಲದಾಸರು ಮಾಡಿದ ಸುಳಾದಿ)

ಧ್ರುವತಾಳ **ಸುಳಾದಿ 17** ರಾಗ : ಭೈರವಿ

ಅನಂತ ಜೀವ ಮುಕ್ತಿಯೋಗ್ಯರ ವೊಳಗೆಲ್ಲ
ಆನೊಬ್ಬ ನೀಚ ಚೇತನನು ಕಾಣೊ
ನೀನೆ ಬಲ್ಲೆಯ್ಯಾ ಸ್ವಾಮಿ ಎನ್ನ ಸ್ವರೂಪವನು
ನಾನಾ ಯೋನಿಗಳಲ್ಲಿ ಹಾಕುವನೆ
ಶ್ವಾನಾ ಮುಂತಾದ ಜೀವರೆಲ್ಲರು ತಮ್ಮಗತಿ
ಅನೇಕ ಯೋನಿಗಳು ಐದಿ ಐದಿ ಮಾನವ
ಯೋನಿಯು ಮಂತಾದ್ದೆಲ್ಲೆಲ್ಲಿ ಬಂದು
ನಾನಾಪರಿ ಸಾಧನಗಳು ಮಾಡಿ ಕಾಣಿಸಿಕೊಂಡು
ನಿನ್ನ ಆತ್ಮಾನಂದ ಸುಖವನು ಭುಂಜಿಸುವರು ಅಂತ್ಯದಲ್ಲಿ
ಜ್ಞಾನ ಭಕ್ತಿ ಎಂಬೋದು ಎಲ್ಲ ಜೀವರಿಗೆ ಬೇಕು
ನ್ಯೂನ ಅಧಿಕ ತಾರತಮ್ಯವಾಗಿ
ನೀನೆ ಗತಿಯೊ ಸ್ವಾಮಿ ಇನ್ನು ಬರಲಿಲ್ಲವೆಂದು
ತಾನು ಇಹುವ ಜೀವ ಸಾಮಾನ್ಯನೆ
ಏನು ಎನಗೆನ್ನ ನಿನ್ನ ಮೂರ್ತಿ ಎಂದರೆ
ತಾನು ಪುಟ್ಟುವದಯ್ಯಾ ಮಮತೆ ಮನಸಾ

ಪ್ರಾಣಿ ಒಬ್ಬ ಯಃಕಶ್ಚಿತ ತಿಳಿವದಕ್ಕೆ ನಿನ್ನ
ನಾನಾ ಭಕುತರ ಕರುಣ ಅವಗೆ ಬೇಕು
ಏನು ಫಳಿಸಿದರನ್ನ ಫಳಿಸುವ ಹರಿ ನಿನ್ನ
ಜ್ಞಾನ ದೊರುಕುವದಿನ್ನು ಬಹು ದುರ್ಘಟಾ
ಜಾಣ ಚನ್ನಿಗರಾಯ ಗೋಪಾಲವಿಠ್ಠಲ ನಿನ್ನ
ಕಾಣುವದಕ್ಕೆ ಜ್ಞಾನ ಚೇತನ ಬೇಕೊ ॥ 1 ॥

ಮಟ್ಟತಾಳ

ಶೃತಿ ಓದಲಿಬೇಕು ಸ್ಮೃತಿ ತಿಳಿಯಲಿಬೇಕು
ಇತರಾರ್ಥಗಳೆಲ್ಲ ನಿರಾಕರಿಸಲಿಬೇಕು
ಮತ ಅಭಿಮಾನ ಬೇಕು ಜಪ ತಪವು ಬೇಕು
ಪ್ರತಿ ಪ್ರತಿ ಕ್ಷಣದಲ್ಲಿ ಹರಿಯ ಸ್ಮರಣೆ ಬೇಕು
ಪೃಥ್ವಿ ಉದಕ ವಾಯು ಅಗ್ನಿ ಆಕಾಶವು
ಇತರ ದಶೇಂದ್ರಿಯ ತನ್ಮಾತ್ರಗಳೈದು
ಜಿತಮನ ಅಹಂಕಾರ ಮಹತತ್ವವಿನ್ನು
ಚತುರ ವಿಂಶತಿ ತತ್ವ ತದಾಭಿಮಾನಿಗಳು
ಸತತ ಹರಿಯು ತಾನು ಸರ್ವ ದ್ವಾರದಿ ತನಗೆ
ಗತಿಗೆ ನಿಯಾಮಕನೆಂಬೋ ಸ್ಮೃತಿ ಬೇಕು
ಪತಿತ ಪಾವನ ಗೋಪಾಲ ವಿಠ್ಠಲ ಲಕ್ಷ್ಮೀ
ಪತಿ ಸರ್ವ ಸ್ಥಳದಿ ವ್ಯಾಪ್ತನೆಂದರಿಯ ಬೇಕು ॥ 2 ॥

ರೂಪಕತಾಳ

ಮಾಡಬೇಕು ನಾನು ಮಾಡಿಲ್ಲವೆನಬೇಕು
ಆಡಬೇಕು ನಾನು ಆಡಿಲ್ಲ ವೆನಬೇಕು
ನೀಡಬೇಕು ನಾ ನೀಡಿಲ್ಲ ವೆನಬೇಕು
ನೋಡಬೇಕು ಕರ್ಮ ಮಾಡಿಸುವದು ತನಗೆ
ಬೇಡಿಕೊಂಬದಕಿನ್ನು ವಿಹಿತಾ ವಿಹಿತಗಳಿಗೆ
ಕೇಡು ಲಾಭಗಳಿಗೆ ಹಿಗ್ಗಿ ಕುಗ್ಗದಲೆ
ಓಡಿದರೆ ಬಹುಮಂದಿ ವಿಷಯಕ್ಕೆ ನಾ
ಓಡಿದೆ ನೆಂತೆಂಬೊ ನೋಡು ಶೃತಿಇರಲು

ಮಾಡಬೇಕಾದರೆ ಒಂದು ಕರ್ಮ ಎಲ್ಲ
ಕೂಡಿದರೆ ಆಗುವದೆಂದು ಅರಿದುಕೋ
ಪಾಡಿದವರ ಪ್ರಾಣ ಗೋಪಾಲ ವಿಠ್ಠಲನ್ನ
ಮಾಡಿಪ್ಪ ಕರ್ಮ ಮುಖ್ಯವೆಂದರಿತು ಬಾಳೊ ॥ 3 ॥

ಝಂಪೆತಾಳ

ಒಬ್ಬನ ಕರ್ಮ ಅನಂತ ಜನರ ಕರ್ಮ
ಒಬ್ಬನ ದೋಷಕ್ಕನಂತ ಜನರ ಸಹಾಯ
ಒಬ್ಬರ ಪುಣ್ಯಕ್ಕನಂತ ಜನರ ಸಹಾಯ
ಒಬ್ಬನ ಸೃಷ್ಟಿಗನಂತ ಜನರ ಸೃಷ್ಟಿ
ಒಬ್ಬನ ಬಂಧಾಲಯ ಎಲ್ಲರಿಗೂ ಬಂಧಾಲಯ
ಒಬ್ಬೊಬ್ಬರ ಗತಿ ಇನ್ನು ಬೇರೆ ಉಂಟು ಇನ್ನು
ಒಬ್ಬರ ಕರ್ಮಗಳಿಗೆ ಕಡೆ ಮೊದಲಿಲ್ಲ
ಅಬ್ಜ ಸಂಭವ–ಪಿತ ಗೋಪಾಲ ವಿಠ್ಠಲ
ಅಬ್ಬರ ಮೂರ್ತಿ ಹೀಗೆ ಅರಿದವರಿಗೆ ಸಾರ್ಥಿ ॥ 4 ॥

ತ್ರಿವಿಡಿತಾಳ

ಜ್ಞಾನ ಉಳ್ಳವನಾಗಿ ಮಾಡಿದ ಪಾಪಕ್ಕೆ
ಜ್ಞಾನ ರಹಿತನಾಗಿ ಮಾಡಿದ ಪಾಪಕ್ಕೆ
ಏನು ಇದಕ್ಕೆ ಪ್ರಾಯಶ್ಚಿತ್ತ ವೆಂದರೆ
ಶ್ರೀನಿವಾಸನ ಸ್ಮರಣೆ ಮುಖ್ಯವಯ್ಯಾ
ನಾನೆಲ್ಲಿ ಕಾಣೆನೋ ಹರಿಯ ಸ್ಮರಣೆಯಿಂದ
ತಾನಾಗೋ ಸುಖಕ್ಕೆ ಇನ್ನೊಂದು ಕರ್ಮ
ಅನಂತಾನಂತ ಮಾಡಿದ ಕಾಲಕ್ಕೂ
ಪ್ರಾಣಿಗಳಿಗೆ ಸುಖ ದೊರೆಯದಿನ್ನು
ಏನಾದರೂ ಏನು ಸಕಲಕ್ಕೂ ಹರಿ ಮುಖ್ಯ
ತಾನು ತಾರಕನಾಗ ಬೇಕು ಮುಖ್ಯ
ದೀನ ಜನ ಬಂಧು ಗೋಪಾಲವಿಠ್ಠಲ
ಜ್ಞಾನಿಗಳಲ್ಲಿ ನಿತ್ಯ ವಾಸ ವಾಗಿಪ್ಪ ಬಿಡದೆ ॥ 5 ॥

ಅಟ್ಟತಾಳ

ಭಯ ಭಕುತಿ ಕರ್ಮ ಅನಂತ ಮಾಡಲು
ಸವೆಯದ ಪದವಿಯು ದೊರಿಯದು ದೊರಿಯದು
ಜಯವು ಕೊಡದು ಅದು ತ್ರಯಲೋಕ ದೊಳಗಿನ್ನು
ಲಯವಾದ ಜ್ಞಾನ ಭಕುತಿ ಪುಟ್ಟಿಸದು ಅದು
ಪ್ರಿಯವಲ್ಲ ಆಕರ್ಮ ಮಾಡೆ ಹರಿಗೆ ಏನು
ಭಯವುಳ್ಳ ಸ್ಥಳದಲ್ಲಿ ಸುಯೋಗ್ಯನ ಮಾಳ್ಪ
ಭಯ ನಿವಾರಣ ಸ್ವಾಮಿ ಗೋಪಾಲ ವಿಠ್ಠಲ
ಭಯ ರಹಿತ ಮಾಳ್ಪಾ ಭಯ ಬಿಟ್ಟರ್ಚಿಸಲು ‖ 6 ‖

ಆದಿತಾಳ

ನಿತ್ಯ ನೈಮಿತ್ಯಕ ಮತ್ತೆ ತೀರ್ಥಯಾತ್ರೆ
ಹೊತ್ತು ಅರಿತು ಅಗ್ನಿ ಹೋತ್ರ ಅತಿಥಿಯ
ಹೆತ್ತ ತಾಯಿ ತಂದೆ ಪೂಜೆಯು ನಾನಾ
ಶೃತ್ಯರ್ಥಗಳಲ್ಲಿ ಹೇಳಿದ ಕರ್ಮವು
ನಿತ್ಯ ಮಾಡದೆ ಹೋದರೆ ಭಯವಿಂತೆಂದು
ನಿತ್ಯ ಮಾಡಿದರೇನು ಇಷ್ಟವೆ ದೊರೆಯದು
ಭಕ್ತಿ ಪೂರ್ವಕವಾಗಿ ಭಯ ರಹಿತನಾಗಿ
ಮತ್ತವರ ಕರ್ಮವ ಮಾಡಲು
ಹತ್ತಿ ಕೊಡುವ ಒಂದಾನಂತವಾಗಿ
ತುತ್ತು ಮಾಡಿದಂತೆ ಸಾಧನವೆಲ್ಲ
ಭಕ್ತವತ್ಸಲ ಸ್ವಾಮಿ ಗೋಪಾಲವಿಠ್ಠಲ
ಎತ್ತಲಾದರು ಏನು ಭಕ್ತಿಗೆ ಸಿಲುಕುವ ‖ 7 ‖

ಜತೆ

ಜ್ಞಾನ ಭಕ್ತಿ ವಿರಕ್ತಿಯೇ ಸಾಧನ
ಮೇಣು ಇಲ್ಲದೆ ಇಲ್ಲ ಗೋಪಾಲವಿಠ್ಠಲ ‖ 8 ‖

ಧ್ರುವತಾಳ

## ಸುಳಾದಿ 18

ಅನ್ಯಾತರವನ್ನೈಯ್ಯಾ ಅಲ್ಪ ಅತ್ಯಂತ ನಿರುತ
ಕಾಣೆನಾ ಒಂದಾದರು ನಿನ್ನ ಹೊರತು ದೇವಾ
ರೇಣು ಮಾತ್ರವಾದರು ನಿನ್ನ ಹೊರತು
ಜ್ಞಾನ ಅಜ್ಞಾನ ನಮಗೆ ಆಗುವದೆ
ನಾನೇ ಮಾತ್ರವು ಅಲ್ಲ ಸಿರಿ ಅಜ ಭವಾದಿಗಳು
ನೀ ನಡೆಸದಿರುವದು ನಿಶ್ಚೇಷ್ಟದಿ
ಅನಾದಿ ಕರ್ಮ ಬಂಧನಾಗಿ ಇಪ್ಪುವ ನಾನು
ಏನು ಬಲ್ಲೆನೊ ನಿನ್ನ ಮಹಿಮೆಯ
ಕಾಣೆ ನಾ ಒಂದಾದರೂ ನಿನ್ನ ಸ್ವಾತಂತ್ರ ವಿನಹಾ ಮನದಿ
ನಾನೆ ಸ್ವಾತಂತ್ರನೆಂದು ಹಿಗ್ಗಿ ಹಿಗ್ಗಿ
ನಾನಾ ಯೋನಿಗಳಲ್ಲಿ ಜನಿಸಿ ಜನಿಸಿ ಬಂದು
ಏನು ಬಟ್ಟ ಭವಣೆ ನೀನರಿಯೇ
ಋಣ ವರಿಯದಪ್ಪಂದೆ ಒಳಗಿದ್ದು
ನಾನಾ ಚೇಷ್ಟೆಗಳೆಲ್ಲ ನೀನೆ ಮಾಡಿ
ಪ್ರಾಣಿಗಳಿಗೆ ಸುಖ ದುಃಖ ಉಣಿಸಿ ಒಡನೆ ಇದ್ದು
ನೀನು ನಿರ್ಲಿಪ್ತನಾಗಿ ನಿತ್ಯವಾಗಿ
ಜಾಣ ಚನ್ನಿಗರಾಯ ಗೋಪಾಲ ವಿಠ್ಠಲ
ಕಾಣದೆ ನಿನ್ನ ನಾ ಬಲು ದಣಿದೆ ॥ 1 ॥

ಮಟ್ಟತಾಳ

ದಾರಿದ್ರವೇ ಸಿರಿಯು ಸಿರಿಯೇ ದಾರಿದ್ರವು
ಆರೋಗ್ಯವೇ ರೋಗ ರೋಗವೇ ಆರೋಗ್ಯ
ಬಾರದ್ದೆ ಬಂದದ್ದು ಬಂದದ್ದೆ ಬಾರದ್ದು
ಸೇರದ್ದೆ ಸೇರಿದ್ದು ಸೇರಿದ್ದೆ ಸೇರದ್ದು
ತೋರದ್ದೆ ತೋರಿದ್ದು ತೋರಿದ್ದೆ ತೋರದ್ದು
ಕಾರಣ ಕಾರಣ ವಾರಣ ಎಲ್ಲವು
ನಾರಾಯಣನು ವಲಿದ ನರನಿಗೆ
ಈರೀತಿ ಮಾಡಿ ಅನುಭವಕೆ ಇನ್ನು

ತೋರಿ ಗೊಡುತಲಿ ಕ್ಷಣಕ್ಷಣಕೆ ಬಿಡದೆ
ಈ ರೀತಿ ತಿಳಿಸಿದ್ದು ಒಳ ಹೊರಗೆ
ಭಾರಕರ್ತನಾಗಿ ಬಹು ವ್ಯಾಪ್ತ ಸ್ವಾಮಿ
ಆರು ಇದರ ವಿವರ ಅರುವರೋ ಎನಗೆ
ಶ್ರೀ ರಮಣ ಚಲುವ ಗೋಪಾಲ ವಿಠ್ಠಲ
ತಾರದವನೆ ಕೆಟ್ಟ ಅನುಭವಕೆ ನಿನ್ನ ॥ 2 ॥

ರೂಪಕ ತಾಳ

ಕಂಡದ್ದೆ ಕಾಣದ್ದು ಕಾಣದ್ದೆ ಕಂಡದ್ದು
ಉಂಡದ್ದೆ ಉಣ್ಣನೆ ಉಣ್ಣನು ಉಂಡದ್ದು ಮರುಳೆ
ದಂಡಣವೆ ಸುಖವು ಸುಖವೇ ದಂಡಣವು
ಕೆಂಡ ಸೀತವು ಸಮವು ಆಗುವದಲ್ಲದೆ
ಪುಂಡರೀಕಾಕ್ಷನ ಕಂಡ ಮೇಲಕ್ಕೆ ನಿನ್ನ
ಮಂಡಿಯವು ಬಾರದು ಮತ್ತೆ ಮನುಜಗೆ
ಪಾಂಡವ ಪ್ರಿಯ ಗೋಪಾಲ ವಿಠ್ಠಲ ರೇಯಾ
ಕಂಡದ್ದಲ್ಲದೆ ಪಾರ್ಥಗೊಲಿದ ಮಹಾ ಮಹಿಮ ॥ 3 ॥

ಝಂಪೆ ತಾಳ

ಆರನುದ್ಧರಿಸುವೇನೆಂದು ಮನದಿ ಮಾಳ್ಪಿ
ತೋರಿ ಕೊಡುವುವೆ ಸಕಲ ಸಾಧನಗಳವಗೆ
ಬಾರದಿದ್ದರೆ ಮನಕೆ ಅವಗೆ ಚನ್ನಾಗಿ ನಿಜ
ಪ್ರೇರಿಸುವಿ ವಿಧಿಯು ವಿಹಿತಾಚರಣಗಳಿನ್ನು
ಬಾರಿ ಬಾರಿಗೆ ಸ್ಮೃತಿಯು ತಂದಿತ್ತು
ದೂರನೆ ಮಾಳ್ಪಿ ದುರಿತಗಳ ಅಪಾರ ಇದ್ದರನ್ನ
ಕ್ರೂರನರರಿಂದ ಒಂದು ಧರ್ಮವಾದರು ಇನ್ನು
ಪ್ರೇರಿಸಿ ಕೆಡಿಸಿ ಕೊಡುವಿ ಇನ್ನವರಿಗೆ
ಮಾರನಯ್ಯ ಚಲುವ ಗೋಪಾಲ ವಿಠ್ಠಲ
ಬಾರೋ ನಿನಗಿನ್ನು ಈಡಾರೋ ಪ್ರಭುವೆ ॥ 4 ॥

ತ್ರಿವಿಡಿತಾಳ

ಯೋಚನ್ಯಾತಕ್ಕೆ ದೇವಾ ಎನ್ನ ಪೊರೆವದಕ್ಕೆ
ಸೂಚನಾ ತೋರಿ ಸುಮ್ಮನಾಗಲಿ ಬೇಡ
ನೀಚ ನಾನು ನಿತ್ಯದಲ್ಲಿ ನಿನ್ನ ಮರತು
ಯೋಚನೆ ಮಾಡುವೆ ಕಂಡವರ
ಚ್ಯಾಚಿ ಚ್ಯಾಚಿ ಕರಗಳು ಬೇಸತ್ತವು
ವಾಚಾ ತುತಿಸಿ ವದನವೆಲ್ಲ ಕೆಟ್ಟಿತಯ್ಯಾ
ನಾಚಿಕೆ ಇಲ್ಲ ಇನ್ನೆ ಈ ಮನಸಿಗಿನ್ನು
ಮೋಚಕ ಮಾರ್ಗವು ಪಿಡಿಯದಿನ್ನು
ಮೋಚಕ ಮಾರ್ಗವ ವಿಚಿತ್ರ ಮಹಿಮೆ ನೀ
ಯೋಚಿಸು ಎನಗಾಗಿ ಊಚಗತಿಯ ಸಾಧನದ ಮಾರ್ಗಕ್ಕೆ
ನೀಚ ವಿಷಯಗಳಿಗೆ ನೀ ಎನ್ನ ಶಳದರೆ
ಯಾಚಕ ಎನ್ನಿಂದ ಲೇನಾಹದೋ
ಖೇಚರವಾಸಿ ನೀ ನೀಚ ಸಾವಾಸಿನಾ
ಆಚಾರವೇನೋ ನೀ ಅರಿಯದಿದ್ದ
ಶ್ರೀ ಚಕ್ರಪಾಣಿ ಗೋಪಾಲ ವಿಠ್ಠಲ ಕೇಳೊ
ನೀಚ ಎಂದರೆ ಎನ್ನ ಪೊರೆವರಾರ್‍ಯೋ ॥ 5 ॥

ಅಟ್ಟತಾಳ

ನೀ ನೊಲಿಯಲು ಅಜಭವಾದಿಗಳು ಪೋಲಿವರು
ನೀನೊಲಿಯಲು ಅಮರರು ಎಲ್ಲ ಕರೆವರು
ನೀನೊಲಿಯಲು ಅವನಿಯರೆಲ್ಲ ವೊಲಿವರು
ನೀನೊಲಿಯಲು ಒಂದು ಬಾರದ್ದು ಎನಗಿಲ್ಲ
ದಿನವೆ ಒಂದು ಯುಗ ನಿನ್ನ ಕಾಣದ
ಘನ ಯುಗ ಒಂದಿನ ನಿನ್ನ ಕಾಣುವನಿಗೆ
ಕನಸೇ ಜಾಗ್ರವು ಮತ್ತೆ ಜಾಗ್ರವೇ ಕನಸಿನ್ನು
ಧನವೇ ನಿಧನವಯ್ಯಾ ಮನವೆರದವಗೆ
ನೆನೆದರೆ ಆಗೋದು ಸಕಲ ಸುಖವೆಲ್ಲ
ಇನಿತು ಇನಿತು ಎಂದು ವಿವರ ಪೇಳಲಿಸಲ್ಲ
ಧನ ವಸನವು ಪಶು ವನುತೆ ಸುತರು ಮತ್ತೆ

ತನು ಆರೋಗ್ಯ ತಂದೆ ಜನನಿ ಸಹಿತಿನ್ನು
ಇನಿತು ಸುಖವು ಎಲ್ಲ ಏಕ–ವಾಗಿದ್ದವಗೆ
ಇನಿತು ಸುಖವು ಉಂಟು
ಇನಿತು ಸದೃಶ್ಯ ಸ್ವಲ್ಪ ನೆನೆವ ಸುಖದಭೋಗ
ಅನುಭೋಗ್ಯನೆ ಬಲ್ಲ ಮನುಜನೇನು ಬಲ್ಲ ಮಂದಬುದ್ಧಿಯವ
ಘನದಯಾನಿಧೆ ಗೋಪಾಲ ವಿಠ್ಠಲ
ನಿನಗೆ ನೀ ಕರುಣಿಸಿ ನಿನ್ನವರವ ನೆನ್ನೊ ॥ 6 ॥

ಆದಿತಾಳ

ಸಾಧನವೆ ಸಾಧ್ಯ ಸಾಧ್ಯ ಸಾಧನವು
ಕ್ರೋಧವೆ ಭಕುತಿಯು ಭಕ್ತಿಯು ಕ್ರೋಧವು
ಆದಿಯು ಅಂತ್ಯವು ಅಂತ್ಯವೇ ಆದಿಯು
ಭೇದವೇ ಅಭೇದವು ಅಭೇದವೆ ಭೇದವು
ನಾದದೊಳಗೆ ರೂಪ ರೂಪದೊಳಗೆ ನಾದ
ಸ್ವಾದದೊಳಗ ಸ್ವಾದ ಸ್ವಾದದರೊಳಗೆ ಸ್ವಾದ
ಮಾಧುರ್ಯದೊಳಗೆಲ್ಲ ಮಾಧುರ್ಯ ವಸ್ತುವು
ಆದಿ ಮೂರುತಿ ದೇವ ನಿನ್ನನು ಭೋಗಿಸೆ
ಬಾಧೆ ಆವದು ತೋರ ರೊಂದಾದರವಗೆ
ಆದರಿಸುತ ಅಲ್ಲಿ ಇದ್ದ ಬಳಿಕ ಸ್ವಾಮಿ
ಕ್ರೋಧ ರಹಿತ ರಾಮ ಗೋಪಾಲ ವಿಠ್ಠಲ
ಹಾದಿ ತೋರಿಸು ಪಥಯಾವದು ಸಾಧನ ॥ 7 ॥

ಜತೆ

ದಿನದಿನಕೆ ಅಭಿವೃದ್ಧೀ ಆಗಿ ನಿನ್ನಲಿ ಎನಗೆ
ಘನಜ್ಞಾನ ಭಕುತಿ ಕೊಡು ಗೋಪಾಲ ವಿಠ್ಠಲ ॥ 8 ॥

## ಸುಳಾದಿ 19

ಧ್ರುವತಾಳ

ಕಚ್ಚಲೆನಗೆ ಕಾಮ ಕ್ರೋಧಗಳೆಂಬ ಕುನ್ನಿಗಳು
ಪೆಚ್ಚಿತಯ್ಯ ಮೋಹ ಮದವೆಂಬೊ ಮತ್ಸರವು
ಅಚ್ಚ ವಿಷಯಗಳೆಂಬೊ ಕಿಚ್ಚಿನೊಳಗೆ ಕೆಡಹಿ

ಹುಚ್ಚು ಗೊಳಿಸುವದಯ್ಯಾ ಎಚ್ಚರಿಸದಲಿನ್ನು
ನಿಚ್ಚಳ ದಾರಿಯನು ಮುಚ್ಚಿಸಿ ಕಾಣದಂತೆ
ಮೆಚ್ಚು ಆಯಿತು ಮನವು ಕುತ್ಸಿತ ಭೋಗದಲ್ಲಿ
ಅಚ್ಚುತ ನಿನ್ನ ಪಾದ ಅರ್ಚಕರಾದವರು
ಬೆಚ್ಚಿಸದ ಡಾಯಿತೆ ಉಚಿತವೆ ನಿನಗೆ
ನೆಚ್ಚಿದವನ ಪರರ ಇಚ್ಛೈಸಿದರೆ ಎನ್ನ
ವಾಂಛ್ಯ ನಿನ್ನದೊ ಅಲ್ಲೆ ವತ್ಸಾಸುರ ಮರ್ದನ
ಕಚ್ಚಿನೆ–ಗಡಿಗೆಮ್ಮ ಹುಚ್ಚು ಮೋರೆಯ ಮರಿಗಿ
ಗಚ್ಚಿನ ಪೋತರಾಜ ರಚ್ಚ ಕಟ್ಟೀಯ ಯಲ್ಲಿ
ಬಿಚ್ಚಾಳೆ ಪಲ್ಲಿ ಶಡವಿ ಬನದ ಶಂಕರಿ ಯಃ
ಕಶ್ಚಿತ ದೇವತೆಗಳ ಇಚ್ಛೈಸಲಿಲ್ಲವೈಯ್ಯಾ
ಮಚ್ಛ ಕೂರ್ಮ ವರಹ ನಿಚ್ಚಳ ನಾರಸಿಂಹ
ಮೆಚ್ಚಿ ಭಕ್ತರ ಬಾಗಿಲ ಕಾಯ್ದ ತ್ರಿವಿಕ್ರಮ
ಹೆಚ್ಚಿನ ಪರಶು ಪಿಡಿದು ಭಾರ್ಗವ ದೇವೋತ್ತಮ
ಸಚ್ಚಿದಾನಂದ ರಾಮ ಕೃಷ್ಣ ಬೌದ್ಧಕಲ್ಕಿಯೆ
ಮಚ್ಛಾವತಾರ ಮೂಲರೂಪ ಐಕ್ಯನಾದ
ಸುಚ್ಚರಿತ್ರ ಚರಿತ್ರ ಜ್ಞಾನಾನಂದ ಗುಣ ಪೂರ್ಣ
ಇಚ್ಛೆಮಾತ್ರದಿ ಜಗವ ಸೃಷ್ಟಿ ಸ್ಥಿತಿಲಯವಮಾಳ್ಪೆ
ಕಶ್ಯಪ ಸುತನಾದ ಭಕ್ತವತ್ಸಲ ದೇವಾ
ಮೆಚ್ಚಿದೆ ನಿಮ್ಮ ಪಾದ ಗೋಪಾಲ ವಿಠ್ಠಲ
ನುಚ್ಚುಮಾಡಯ್ಯಾ ಕಾಮ ಕ್ರೋಧಂಗಳೆಂಬೋವು ಬೇಗ ॥ 1 ॥

ಮಟ್ಟತಾಳ

ಅನಂತ ಸಾಧನೆಯೊಳು ಆನೊಂದು ನಾನರಿಯೆ
ಅನಂತ ದೋಷಗಳು ಮುನ್ನ ಮುನ್ನ ಮಾಡಿದಲ್ಲದೆ
ಇನ್ನು ಅದೇ ಹಾದಿಗೆ ಎನ್ನನು ಶಳದೊಯಿದು
ಹುಣ್ಣು ಹುಣ್ಣನು ಮಾಡಿ ಎನ್ನ ಕೊಲಿಸಿದರೆ
ಇನ್ನಾರಿಗೆ ಪೇಳುವೆ ಘನ್ನ ದಯಾನಿಧೆ ಎನ್ನಯತ್ನವೇನು
ನಿನ್ನ ದಯಾರಸಕೆ ಚಿನ್ನನ ಬಾಯಿತೆರೆದು
ಚನ್ನಾಗಿ ಮಾತೆ ಮಣ್ಣು ಬೆಣ್ಣೆ ಸಮವನ್ನುಮಾಡಿ ಉಣಿಸೆ

ಇನ್ನು ಅರಿಯದವಳಾವನ್ನು ಒಂದೇರೂಪ
ಮುನ್ನಲೇನು ಆಗೋ ಪುಣ್ಯ ಪಾಪಂಗಳು
ನಿನ್ನ ಆಧೀನವು ಎನ್ನ ಫಲಾಫಲವು ನಿನ್ನ ಸಂಕಲ್ಪಕ್ಕೆ
ಇನ್ನು ನಾಶ ವೀಗಿಲ್ಲ ನಿನ್ನ ಇಚ್ಛೆ ಬಂದಂತೆ ಮಾಡೋ ರಂಗ
ಚಿನ್ಮಯ ಮೂರುತಿ ಗೋಪಾಲ ವಿಠ್ಠಲ
ಎನ್ನ ಮನೋ ಕಾರ್ಯವನ್ನೆ ನೀನೆ ಬಲ್ಲಿ ॥ 2 ॥

ತ್ರಿವಿಡಿತಾಳ

ದೇವ ನಿನ್ನಲ್ಲಿ ದ್ವೇಷ ಮಾಡುವನಿಗೆ
ಆವ ಕಾಲಕ್ಕೆ ದುಃಖ ಭೋಗವೆ ಸಾಕ್ಷಿ
ಕೋವಿದರು ನಿನ್ನಲ್ಲಿ ಸ್ನೇಹ ಮಾಡುವರಿಗೊ
ಆವಾದರು ಸುಖವ ತೋರುವದಯ್ಯಾ
ನೀವೊಲಿದವರಿಗೆ ಆವಾಗ ಸ್ಮರಣೀಗೆ
ದೇವ ಇನ್ನು ಬಾಹುವದೆ ಸಾಕ್ಷಿಯು
ಆವ ದೇಶದಲ್ಲಿ ಆವದಿಕ್ಕಿನಲ್ಲಿ ಆವಾವ ಜನರಲ್ಲಿ
ಆವ ಕಾರ್ಯಗಳಲ್ಲಿ ಯಾವತ್ರಲ್ಲಿ ನೀ ವ್ಯಾಪಕನಾಗಿನ್ನು
ಆವಾವ ಬಗೆ ಕಾರ್ಯವ ಮಾಡಿಸುವಂಥ
ಭಾವನೆ ಒಂದೇ ತಿಳಿಸುವದು
ನಾ ಒಂದೊಲ್ಲೆನೋ ನಿನ್ನ ಸೇವೆ ಮಾತ್ರದಿನ್ನೀಯೊ
ಜೀವರಿಗೆ ಕರ್ಮವ ಅನುಭವ ವುಂಟು
ದೇವಾ ನೀ ನಿರ್ಲಿಪ್ತ ಆವಲ್ಲಿದ್ದರನ್ನ
ಆವಾವರಲ್ಲಿ ನೀ ಈವ ವ್ಯಾಪ್ತವು ಇನ್ನು
ದೇವ ನಿನ್ನ ಗುಣಗಳೇವೆ ಮಣಿಗಳು
ಭಾವ ಶುದ್ಧರೀ ಜ್ಞಾನವೆಂಬೊ ತಂತಿಯಲಿ
ಆವಾಗ ಪೋಣಿಸುತಿರುವಂತೆ ಮಾಡೆನ್ನ
ನಾವೊಲ್ಲೆ ಇನ್ನೊಂದು ಈ ಉಪಾಯಕ್ಕಿನ್ನು
ಕೋವಿದರ ಮನೆ ದ್ವಾರವು ಕಾವಂತೆ
ಆ ಊಳಿಗನ್ನ ಮಾಡಿ ಆವಲ್ಯಾದರು ಇಡಿಸು
ದೇವಾದಿ ದೇವರೊಡಿಯ ಗೋಪಾಲ ವಿಠ್ಠಲ
ಕಾವುವಾತನೆ ನೀನು ಆವಲ್ಲಿದ್ದರೆನ್ನ ॥ 3 ॥

ಅಟ್ಟತಾಳ

ಅರಿಯದೆ ನಾ ಇನ್ನು ನರರ ಬೇಡಿದರೆ
ನರರಲ್ಲಿ ನೀ ಇನ್ನು ಪರಿಪೂರ್ಣನಲ್ಲವೆ
ಅರಿಯದೆ ಅನ್ಯದೇವರ ಭಜಿಸಿದರೆ
ಹರಿಯೇ ನೀ ಅಲ್ಲಿನ್ನ ಇರುವದು ಮಿಥ್ಯವೆ
ಇರವು ನೊಣ ಎಂಭತ್ತು ನಾಲ್ಕುಲಕ್ಷ
ಪರಿ ಜೀವರಲ್ಲಿ ಪರಿಪೂರ್ಣಮಯ ನೀನು
ಬರಿದೆ ನಮ್ಮನೇನು ಮರಳು ಗೊಳಿಸಬೇಡ
ಅರಿದು ನೋಡಲು ಸರ್ವಂತರದಲ್ಲಿ ನೀನೆ
ಮರಳೆ ಆವಾವ ಜನಂಗಳಲಿ ಇನ್ನು
ಪರಿಪರಿ ಜೀವ ರಾರಾಧಿಸಿದದೆಲ್ಲ
ಅರಿದು ಮನದೊಳು ಹರಿಯೆ ನಿನಗಿನ್ನು
ಕರವ ಮುಗಿದು ನಿಂದು ಭರದಿ ಅರ್ಪಿಸುವೆನೊ
ಕರುಣಾಕರ ರಂಗ ಗೋಪಾಲವಿಠ್ಠಲ
ಶರಣು ಹೊಕ್ಕೆನು ಕಾಯೊ ಬಿರಿದುಳ್ಳದೈವವೆ ॥ 4 ॥

ಆದಿತಾಳ

ಕ್ಷೀರ ಉಕ್ಕಿದರೆ ನೀರು ಎರೆವರಯ್ಯಾ
ನೀರು ಉಕ್ಕಲು ಹರಗೋಲು ಹಾಕುವರಿನ್ನು
ಈರೇಳು ಧರಿಯೆಲ್ಲ ಮೇರೆ ತಪ್ಪಿ ಬರಲು
ಸೇರಿಸುವರಾರೊ ಧಡಿಗೆ ಮಾರಜನಕ ನೀನೆ
ಭಾರಿ ಭಾರಿಗಿನ್ನು ಭಕ್ತರಿಗೆ ಬಂದ ದೋಷ
ಹಾರಿಸುವದರೆನ್ನು ಕಾರಣ ಕರ್ತ ನೀನೆ
ಆರು ನಿನ್ನಂತೆ ಮತ್ತಾರು ಪೊರೆವರಿಲ್ಲಿ
ಕಾರುಣ್ಯ ಮೂರುತಿ ಕರಿರಾಜವರದ ರಂಗ
ಮಾರುತ ವಂದ್ಯ ಪಾದ ಗೋಪಾಲ ವಿಠ್ಠಲ
ಅರಿಷಡ್ವರ್ಗಗಳ ದೂರಮಾಡಯ್ಯ ಬೇಗ ॥ 5 ॥

ಜತೆ

ಪರಿಮಿತಿ ಇಲ್ಲದ ದುರಿತ ದೋಷ ವನಕೆ
ಪರುಶು ನಿನ್ನ ನಾಮ ಗೋಪಾಲವಿಠ್ಠಲ ॥ 6 ॥

ಧ್ರುವತಾಳ

## ಸುಳಾದಿ 20

ಚಿನುಮಯ ಮೂರುತಿ ಚಿತ್ರ ವಿಚಿತ್ರನೆ
ಘನಮಹಿಮ ಗಂಭೀರ ಕೀರ್ತಿ ದೋಷ ದೂರ
ಅನಿಮಿತ್ತ ಬಂಧು ದ್ರೌಪದಿ ಮಾನದೊಡಿಯಾ
ಗುಣಗಣ ಭರಿತ ಸೃಷ್ಟ್ಯಾ ದೃಷ್ಟ ಕರ್ತನೆ
ಸನಕಾದಿ ಗಳೊಡೆಯ ಜ್ಞಾನಾನಂದ ಪೂರ್ಣ
ದಿನಕರ ಶತತೇಜ ದೀನ ಜನರ ಪಾಲ
ದನುಜ ಮರ್ದನ ರಂಗ ಧರ್ಮಜನುತ ಪಾಲ
ತನುಮನ ದೊಡೆಯ ಏ ತಾತ ಭಕ್ತವತ್ಸಲ
ಅಣೋರಣೀಯಾನ್ ಎಂಬೋ ಶ್ರುತಿಪಾದ್ಯ ಅಪ್ರಾಕೃತ
ಜನನ ಮರಣ ರಹಿತ ಜಾನಕಿ ರಮಣನೆ
ಕೊನೆ ಗಾಣರು ನಿನ್ನ ಗುಣ ಎಣಿಸಿ ಅಜಭವರು
ಇನಿತು ವರ್ಣಿಸೆ ನಿನ್ನ ಎನಗಳವಲ್ಲವು
ನಿನಗೆ ನೀ ಕರುಣಿಸಿ ನಿನ್ನ ಭಕ್ತರನ್ನ
ಘನತೆ ಮಾಡುವಿ ಎಣೆಯಾರು ನಿನಗಿನ್ನು
ದಿನಕರ ಶಶಿಗಳು ನಿನ್ನ ಅಜ್ಞೆ ಇಂದ
ದಿನವ ಚರಿಸುತಲಿ ನಿನ್ನ ಸೇವಿಸುವರೋ
ನಿನಗೆ ಸಮವಸ್ತು ಇಲ್ಲ ಗೋಪಾಲ ವಿಠ್ಠಲ
ನಿನಗೊಬ್ಬರು ಸಮರಿಲ್ಲ ಸರ್ವೋತ್ತಮ ॥ 1 ॥

ಮಟ್ಟತಾಳ

ಭಕ್ತವತ್ಸಲ ನೀನೆಂಬೋವದಕ್ಕಿನ್ನು
ಭಕ್ತರು ಕರಿಯೆ ಬಂದೊದಗೋದೆ ಸತ್ಯ
ಸಕಲ ದೋಷದೂರ ನೀನೆಂಬುವದಕ್ಕಿನ್ನು
ಸಕಲ ದೋಷ ಅಜಮಿಳನ ಕಾಯ್ದದೆ ಸತ್ಯ
ಸಕಲ ಜ್ಞಾನ ಭರಿತ ನೀನೆಂಬುವದಕ್ಕೆ
ಭಕ್ತ ವಾಲ್ಮಿಕನ್ನ ಉಕುತಿ ನಿತ್ತದೆ ಸತ್ಯ
ಸಕಲ ಸಮರ್ಥನು ನೀನೆಂಬುವದಕ್ಕೆ
ಭಕ್ತ ಕುಬ್ಜಿಯನ್ನೆ ಚಕಿತ ಮಾಡಿದ್ದೆ ಸತ್ಯ

ಸಕಲ ಸುಖಪೂರ್ಣ ನೀನೆಂಬುವದಕ್ಕೆ
ಸಕಲ ಪದಾರ್ಥದಿ ಸಾರ ತೋರೋದೆ ಸತ್ಯ
ಲಕುಮಿರಮಣ ನಮ್ಮ ಗೋಪಾಲ ವಿಠ್ಠಲ
ಭಕ್ತರಿಚ್ಛೆಯಗಾರ ಭಕ್ತರ ಮಾನದೊಡಿಯಾ ॥ 2 ॥

ತ್ರಿವಿಡಿತಾಳ

ಇನ್ನಾವ ಜನ್ಮದ ಎನ್ನ ಸಾಧನಿಯೊ
ಇನ್ನಾವ ಜನ್ಮದ ಸಜ್ಜನ ಸಂಗತಿಯೊ
ಇನ್ನಾವ ಜನ್ಮದ ಶ್ರವಣ ಮನನದ ಫಲವೊ
ಇನ್ನಾವ ಜನುಮದ ದಾನ ಧರ್ಮದ ಫಲವೊ
ಇನ್ನು ನಿನ್ನನು ಏನು ಅರಿಯದಲಿದ್ದೆನ್ನ
ಘನ್ನ ಮಾಡಿನ್ನ ಅರಿದು ನಿನ್ನ ಪಾದಸುಖವನ್ನು ಸೇವಿಸುವ
ಚನ್ನ ದಾಸರ ಮನೆ ಕುನ್ನಿ ಎನಿಸಿ ಎನ್ನ
ನಿನ್ನ ಅಂಕಿತ ವಿತ್ತೆ ನಿನ್ನ ಕರುಣ ರಸಕ್ಕಿನ್ನು ಸರಿ ಉಂಟೆ
ಎನ್ನಪ್ಪ ಎನ್ನಯ್ಯ ಎನ್ನ ಸಾಕುವ ಧೊರಿಯೆ
ನಿನ್ನ ಪಾದದ ಮೇಲೆ ಎನ್ನ ಶರೀರವನ್ನು ನಿವಾಳಿಸೆ
ಇನ್ನು ಬಿಡುವೆನಯ್ಯಾ ನಿನ್ನಂತೆ ಸಾಕುವರಿನ್ನೊಬ್ಬರಿಲ್ಲವೊ
ನಿನ್ನ ತೊತ್ತಿಗೆ ತೊತ್ತು ತೋಂಡ ನಾನಾಗುವೆ
ಇನ್ನು ಅಜನು ನಿನ್ನ ನಾಮದ ಬಲದಮೇಲೆ ನಿನ್ನ ತೊತ್ತು ಕೊಂಬಿ
ಅನ್ಯರನಲ್ಲಾಳು ಅನ್ನ ಭಕ್ಷವುಳ್ಳ ಮನೆ ಇಂದ ಯಬ್ಬಿಟ್ಟ
ಕಣ್ಣಿಯ ಕಟ್ಟೋರ ಮನೆಯ ಹೊಗಿಸ ಬ್ಯಾಡ
ನಿನ್ನ ಪಾದವ ನಂಬೆ ಅನ್ಯರಿಗಿತ್ತರೆ
ನಿನ್ನಾದೆ ಬಿರಿದಿನ್ನು ಎನ್ನ ದೇನಾಯಿತು
ಪುಣ್ಯೋತ್ತಮ ನಮ್ಮ ಗೋಪಾಲ ವಿಠ್ಠಲ ರೇಯ
ಬೆನ್ನು ಬಿದ್ದೆನೊ ಬಲು ಬಣ್ಣಗೆಟ್ಟ ತೊತ್ತು ॥ 3 ॥

ಅಟ್ಟತಾಳ

ಭೂತ ಹತ್ತಿದವಾ ಯಾತ್ಯಾತ ರೊಳಗಿನ್ನು
ನೀತ ವರಿಯದಲೆ ತಾ ತಿರುಗಿದಂತೆ
ನಾತ ಹತ್ತಿದ ಶ್ವಾನ ಜೋತು ಮುಖವು ಇರೆ

ಪಥ ಬೀಡೆನ್ನಮಾತು ಕೇಳುವದೆ
ವಾತ ಜಾತನ ಪಿತ ಪ್ರೀತಿ ನಿನ್ನಲ್ಲಿ ಶಾಶ್ವತವಾದವ ನಿನ್ನ
ಆ ತೆರದಿ ಬಿಡುವನೆ ಕೌತುಕವಲ್ಲ ಮನೋವಾಕ್ಕಾಯದಿ ಮಾಡಿಪ್ಪ
ದಾತಾರದಾತ ಎನ್ನಾತುಮ ಮೂರುತಿ
ಈ ತೆರದಿ ನೀ ಪ್ರೇರಕನಾಗಿ ಅನ್ಯಥಕ್ಕೆರಗಿಸುವದು
ನೀತವಲ್ಲವೊ ದೇವ ಬಾತಿಗೆ ಬಾರದಿನ್ಯಾತಕ್ಕೆ ಜನ್ಮವು
ತಾ ತೆಗೆದಕೋದನ್ನ ಈ ದೇಹ ನಿನ್ನಲ್ಲಿ
ಪ್ರೀತಿ ಒಂದಿದ್ದರಾಯಿತೆ ಸಾಕು ಶಾ
ಶ್ವಿತ ದೈವವೆ ಗೋಪಾಲ ವಿಠ್ಠಲ
ಸೋತೆನೊ ವಿಷಯದ ಯಾತನೆ ಬಿಡಿಸೊ ॥ 4 ॥

ಆದಿತಾಳ

ನಿನ್ನಲ್ಲಿ ಭಕುತಿಯ ಇನ್ನು ನಿಯ್ಯದಲೇವೆ
ಅನಂತ ಭಾಗ್ಯವು ನಿತ್ತರೆ ನಾನೊಲ್ಲೆನೊ
ನಿನ್ನಲ್ಲಿ ಭಕುತಿಯೆ ಚನ್ನಾಗಿ ಇತ್ತಿನ್ನು
ಅನ್ಯರಿಲ್ಲದ ಅರಣ್ಯದೊಳಿಡು ಲೇಸು
ಮನ್ನಣೆ ಮಾಡಿಸು ನಿನ್ನ ಬಲ್ಲವರಿಂದ
ಮನ್ನಣೆ ಆನೊಲ್ಲೆ ನಿನ್ನರಿಯದವರಿಂದ
ಹೊನ್ನು ಹೆಣ್ಣು ಮಣ್ಣು ಸಮವು ಮಾಡಿದಂಥ
ಪುಣ್ಯಾತ್ಮರ ಮನೆಯ ಕುನ್ನಿ ಎಂದೆನಿಸು
ಪನ್ನಗ ಶಯನ ಗೋಪಾಲ ವಿಠ್ಠಲರೇಯ
ನಿನ್ನ ನಾ ಬಿಡೆನಯ್ಯಾ ಅನಂತ ಕಾಲದಲ್ಲಿ ॥ 5 ॥

ಜತೆ

ಅನಂತ ಜನ್ಮಕ್ಕೆ ಅನಂತ ಮಾತಿಗೂ
ಅನಂತ ನೀನೆಗತಿ ಗೋಪಾಲ ವಿಠ್ಠಲ ॥ 6 ॥

## ಸುಳಾದಿ 21

ಧ್ರುವತಾಳ

ಶಿರಿದೇವಿ ಅರಸನೆ ಶ್ರೀಕೃಷ್ಣ ನಮೊ ನಮೊ
ಸರಸಿಜಾಸನಪಿತ ನಿನಗೆ ನಮೊ
ಹರನಂತರ್ಗತ ಮೂರ್ತಿ ಸಂಕರ್ಷಣನೆ ನಮೊ

ಪುರುಹೂತ ಪಾಲಕ ಉಪೇಂದ್ರ ನಮೊ ನಮೊ
ತರಣಿಯಂತರ್ಗತ ಶ್ರೀನಾರಾಯಣನೆ ನಮೊ
ವರ ಶಶಿ ಅಂತರ್ಗತ ದಧಿ ವಾಮನ ನೊಮೊ
ಸಿರಿ ಬಾಗೀರಥಿ ಪೆತ್ತ ವಾಸುದೇವನೆ ನಮೊ
ಸುರರ ಭೂಸುರರೊಡಿಯ ಶ್ರೀಹರಿ ನಮೊ ನಮೊ
ಕರುಣಾಕರ ರಂಗ ಗೋಪಾಲ ವಿಠ್ಠಲ ನಿನ್ನ
ಪರಿವಾರ ಮೂರ್ತಿಗಳಿಗೆ ನಮೊ ನಮೊ ನಮೊ ಎಂಬೆ ॥ 1 ॥

ಮಟ್ಟತಾಳ

ಜನನಿ ಎಂದು ಒಮ್ಮೆ ಕರೆವೆನಯ್ಯಾ ನಿನ್ನ
ಜನಕನೆಂದು ಒಮ್ಮೆ ಕರೆವೆನಯ್ಯಾ
ನಿನ್ನ ಭ್ರಾತನೆಂದು ಒಮ್ಮೆ ಕರೆವೆನಯ್ಯಾ
ನಿನ್ನ ಸೋದರನೆಂದು ಒಮ್ಮೆ ಕರೆವೆನಯ್ಯಾ
ನಿನ್ನ ಬಂಧುನೆಂದು ಒಮ್ಮೆ ಕರೆವೆನಯ್ಯಾ
ನಿನ್ನ ದಾತನೆಂದು ಒಮ್ಮೆ ಕರೆವೆನಯ್ಯಾ
ಎನ್ನ ಇಷ್ಟ ದೈವ ಗೋಪಾಲ ವಿಠ್ಠಲ
ನಿನ್ನನ್ನು ಎನ್ನ ಅವಯವಗಳಿಗೆ ನೆನೆವೆ ॥ 2 ॥

ರೂಪಕತಾಳ

ನಿನ್ನನ್ನೇವೆ ಎನ್ನ ಶಿರಸು ಎಂದು ಕರೆವೆ
ನಿನ್ನನ್ನೇವೆ ಎನ್ನ ನಯನವೆಂದು ಕರೆವೆ
ನಿನ್ನನ್ನೇವೆ ಎನ್ನ ಕರ್ನವೆಂದು ಕರೆವೆ
ನಿನ್ನನ್ನೇವೆ ಎನ್ನ ನಾಶಿಕವೆಂದು ಕರೆವೆ
ನಿನ್ನನ್ನೇವೆ ಎನ್ನ ವದನಾವೆಂದು ಕರೆವೆ
ನಿನ್ನನ್ನೇವೆ ಎನ್ನ ಜಿಹ್ವಾ ಎಂದು ಕರೆವೆ
ನಿನ್ನನ್ನೇವೆ ಎನ್ನ ಭುಜವು ಎಂದು ಕರೆವೆ
ನಿನ್ನನ್ನೇವೆ ಎನ್ನ ಬಾಹು ಎಂದು ಕರೆವೆ
ನಿನ್ನನ್ನೇವೆ ಎನ್ನ ಕರಗಳೆಂದು ಕರೆವೆ
ನಿನ್ನನ್ನೇವೆ ಎನ್ನ ಹೃದಯವೆಂದು ಕರೆವೆ
ನಿನ್ನನ್ನೇವೆ ಎನ್ನ ಊರು ಜಾನು ಎಂದು ಕರೆವೆ

ನಿನ್ನನ್ನೇವೆ ಎನ್ನ ಪಾದ ವೆಂದೆ ಕರೆವೆ
ನಿನ್ನನ್ನೇವೆ ಎನ್ನ ಸರ್ವ ವ್ಯಾಪಕನೆಂದು
ಬಣ್ಣಿಸಿ ಬಗೆ ಬಗೆಯಲಿ ನಾ ತಿಳಿಯುವೆ
ಚಿನ್ಮಯ ಮೂರುತಿ ಗೋಪಾಲ ವಿಠ್ಠಲ
ನಿನ್ನನ್ನು ಎನ್ನವಯ ವಂಗಳಲ್ಲಿ ನೆನೆವೆ
ನಿನ್ನವರ ಸಹಿತಾಗಿ ಎನ್ನಲ್ಲಿ ಪರಿಪೂರ್ಣ ॥ 3 ॥

ಝಂಪೆತಾಳ

ಸಪ್ತಾವರಣ ಕಾಯಾ ಪ್ರಾಕಾರ ಮನೆಯಲ್ಲಿ
ಸಪ್ತಮ ದ್ವಾರಂಗಳಲ್ಲಿ ನೀನು
ಸಪ್ತಮ ರೂಪದಿ ತನ್ನಿಯಾಮಕನಾಗಿ
ವ್ಯಾಪ್ತಿಸಿ ಅಲ್ಲಿ ಗುಪ್ತನಾಗಿ
ತಪ್ತ ಕಾಂಚನದಂತೆ ಪೊಳೆವುತ್ತ ಸಿರಿಸಹಿತ
ಗುಪ್ತ ತಾ ಗುಣ ಬಂಧನಂತೆ ನೀನು
ಶಪ್ತ ಮಾಡಿ ಸೃಷ್ಠಿ ಸ್ಥಿತಿ ಲಯಗಳನ್ನು ನೀನು
ಕ್ಲಿಪ್ತ ಮೀರದ ಲೇವೆ ಮಾಡಿಸುವಿ
ಸುಪ್ತ ಜಾಗ್ರತ ಸ್ವಪ್ನಾವಸ್ಥ ಕಾಲಂಗಳಲ್ಲಿ
ಆಪ್ತನಾಗಿ ಆದರಿಸಿದ ಎನ್ನ
ಅಪ್ತೆರಡು ಭುವನ ದೊಡಿಯ ಗೋಪಾಲವಿಠ್ಠಲ
ಕುಪಿತ ದೊಳಗೇ ಎನ್ನ ಕೂಡಿಸದೆ ಪೊರೆಯೊ ॥ 4 ॥

ತ್ರವಿಡಿತಾಳ

ನಿನ್ನ ಮತ್ಸ್ಯ ರೂಪ ಎನ್ನರಿಷ್ಠವ ಕಳೀವಿ
ನಿನ್ನ ಕೂರ್ಮ ರೂಪ ಎನ್ನ ಭಾರ ವೊಹಿಸುವಿ
ನಿನ್ನ ವರಹ ರೂಪ ಎನಗೆ ವರವಾಗಲಿ
ನಿನ್ನ ನರಮೃಗ ರೂಪ ಎನ್ನ ಅರಿಗಳ ಶೀಳಲಿ
ನಿನ್ನ ವಾಮನ ರೂಪ ಎನ್ನ ಸೇವೆ ಗೊಳಲಿ
ನಿನ್ನ ಭಾರ್ಗವ ರೂಪ ಎನ್ನ ಅಷ್ಟಮದ ಕಡಿಯಲಿ
ನಿನ್ನ ರಾಮ ರೂಪ ಎನ್ನ ಸ್ಮರಣೆ ಗೊದಗಲಿ
ನಿನ್ನ ಕೃಷ್ಣ ರೂಪ ಎನ್ನಭೀಷ್ಟ ನೀಯಲಿ

ನಿನ್ನ ಬೌದ್ಧ ರೂಪ ಎನ್ನ ವಿಷಯ ಬಿಡಿಸಲಿ
ನಿನ್ನ ಕಲ್ಕಿ ರೂಪವು ಎನ್ನ ಮನ ನಿಲ್ಲಿಸಲಿ
ನಿನ್ನನಂತ ರೂಪವು ಎನ್ನ ನುದ್ಧರಿಸಲಿ
ಚಿನ್ಮಯಮೂರುತಿ ಗೋಪಾಲ ವಿಠ್ಠಲ
ನಿನ್ನ ತಳಿವ ಧನ್ಯ ಇನ್ನುಮಾಡಿದ್ದು ಪುಣ್ಯ ॥ 5 ॥

ಮಟ್ಟತಾಳ

ಕಣ್ಣು ಮಾಡುವ ಕಾರ್ಯ ಕರ್ಣ ಮಾಡುವವೋ ನಿನ್ನ
ಕರ್ಣ ಮಾಡುವ ಕಾರ್ಯ ಕಣ್ಣು ಮಾಡುವವಯ್ಯ
ಬೆನ್ನು ಮಾಡುವ ಕಾರ್ಯ ವದನ ಮಾಡುವದು
ನಿನ್ನ ವದನ ಮಾಡುವ ಕಾರ್ಯ ಬೆನ್ನು ಮಾಡುವದು
ನಿನ್ನ ಚರಣ ಮಾಡುವ ಕಾರ್ಯ ಕರವು ಮಾಡುವದು
ನಿನ್ನ ಕರವು ಮಾಡಿದ ಕಾರ್ಯ ಚರಣ ಮಾಡುವದಿನ್ನು
ನಿನ್ನ ಅವಯವಂಗಳು ಎಲ್ಲಿ ನೋಡಲು ಅಕ್ಷಿ
ನಿನ್ನ ಅವಯವಂಗಳು ರೂಪ ಅನಂತಾನಂತವಾಗಿ ತೋರುವವು
ಇನ್ನು ಮೊದಲು ಕೊನೆ ಬಣ್ಣಿಸಿ ನೋಡಲು
ಎನ್ನಿಂದ ಲೊಶವೆ ಚಿನ್ಮಯ ಚಿದ್ರೂಪ
ಅನಂತ ಮಹಿಮ ಗೋಪಾಲ ವಿಠ್ಠಲರೇಯಾ
ನಿನ್ನ ನೋಡುವರೊಳಗೆ ಎನ್ನನು ಇಡಿಸೋ ॥ 6 ॥

ಆದಿತಾಳ

ಅನಂತ ಜನರು ನಿನ್ನ ನೋಡಲು
ನ್ಯೂನವಾಗದು ನಿನ್ನ ಕಾಂತಿಗೆ
ಅನಂತ ಜನರು ನಿನ್ನ ಪಾಡಲು
ನ್ಯೂನವಾಗದು ನಿನ್ನ ನಾಮಕ್ಕೆ
ಅನಂತ ಜನರು ನಿನ್ನ ಬೇಡಲು
ನ್ಯೂನವಾಗದು ನಿನ್ನ ವೇಷಕ್ಕೆ
ಅನಂತ ಜನರು ನಿನ್ನ ಸೇವಿಸೆ
ನ್ಯೂನವಾಗದು ನಿನ್ನ ಸೇವಿಯು
ಅನಂತ ಜನ್ಮಕ್ಕೆ ವರ ವಿತ್ತರೆ

ನ್ಯೂನವಾಗದು ನಿನ್ನ ಬಲಕೆ
ಅನಂತ ನೆಂದು ಕರೆದವರಿಗೆ
ಅನಂತವಾಗಿ ತೋರುತ ಲಿಪ್ಪ
ಅನಂತ ಜನಕೆ ಅನಂತ ಕರ್ಮ
ಅನಂತ ಜನಕೆ ಅನಂತ ಫಲವು
ಅನಂತ ಗುಣನಿಧಿ ಗೋಪಾಲವಿಠ್ಠಲ
ಅನಂತ ಕಾಲಕ್ಕೆ ನೀನೇ ಗತಿಯೋ ॥ 7 ॥

ಜತೆ

ನಿನಗೆ ನಿನ್ನ ಪರಿವಾರ ಮೂರ್ತಿಗಳಿಗೆ
ವಿನಯದಿ ನಮಿಸಿದೆ ಗೋಪಾಲವಿಠ್ಠಲ ಕಾಯೊ ॥ 8 ॥

## ಧ್ರುವತಾಳ ಸುಳಾದಿ 22

ಒಬ್ಬನೆ ಪೋಪನೆಂದು ಆಡಲ್ಯಾತಕೆ ಮನುಜ
ಒಬ್ಬ ನಾನಹುದೆ ನೋಡಿ ಎಲ್ಲ್ಯಾದರ
ಒಬ್ಬ ರೊಳಗೆ ಅನಂತ ಜನರಿಪ್ಪರು
ಹಬ್ಬಿಕೊಂಡಿಪ್ಪರು ಪರಸ್ಪರ ಭೇದವಾಗಿ
ತಬ್ಬಿಬ್ಬು ಗೊಂಬರಲ್ಲ ಬಹು ಕುಶಲರು
ಒಬ್ಬನ ಕರ್ಮವಿನ್ನು ಅನಂತ ಜನರ ಕರ್ಮ
ಒಬ್ಬನ ಕರ್ಮಕನಂತ ಜನರ ಸಹಾಯ
ತುಂಬಿದ್ದ ಪಟ್ಟಣ ದೊಳುಳ್ಳಿಯ ಮಾರುವಂತೆ
ಒಬ್ಬನಾ ಯಃಕಶ್ಚಿತ್ ಬಿದ್ದಹೆನೋ
ಒಬ್ಬನೆ ಈ ದೇಹಕ್ಕೆ ಕರ್ತನೆಂದರೆ ಸೌಖ್ಯ
ಗುಬ್ಬೆ ಕೊರಳಿನಲ್ಲಿ ಗೋದಿ ಕಲ್ಲು ಕಟ್ಟಿದಂತೆ
ಉಬ್ಬಸವಲ್ಲದೆ ಉರುಳುವ ನಿರಯದಿ
ಗರ್ಭಧಾರಣ ಮರಣ ಬಿಡಲರಿಯವು
ಕಬ್ಬುಬಿಲ್ಲಿನಜನಕ ಗೋಪಾಲ ವಿಠ್ಠಲನಂಘ್ರಿ
ಅಬ್ಜ ಎಂಬೋದು ಕಾಣ ಅವನೆಂದೆಂದೂ ॥ 1 ॥

ಮಟ್ಟತಾಳ

ಜನಕನಲ್ಲಿಗೆ ಬಾಹನಾಗಿ ಒಬ್ಬನಲ್ಲ
ಜನನಿಯ ಜಠರದಿಂದ ಜನಿಸ ಲೊಬ್ಬನಲ್ಲ
ಜನನಂತರ ಒಬ್ಬನಂಬುವದಲ್ಲ
ತನು ನಾಶ ವಾಗೆ ಒಬ್ಬನಂಬುವದಲ್ಲ
ತನು ಸಂಬಂಧಿಗಳು ತೊಲಗೆ ಒಬ್ಬನಲ್ಲ
ತನುವು ತನ್ನದಲ್ಲ ತನುವಿಗೆ ತಾನಲ್ಲ
ಅನುವಾಗಿ ಇದ್ದರೆ ಆಪ್ತರು ಸರ್ವರು
ಕನಸಿನಂದದಿ ಕಾಣೊ ಕಂಡದ್ದು ಎಲ್ಲವು
ಮನಸು ಮಾಡಬೇಡ ಮಮತೆ ಇವುಗಳಲ್ಲಿ
ಕನಸು ಜಾಗರ ಸುಪ್ತಿ ಘನ ಪಾತಾಳ ಸ್ವರ್ಗ
ಜನ ರಹಿತ ಸ್ಥಾನ ವನ ಕಾನನಗಳಲ್ಲಿ
ನಿನಗೆ ಗೆಳೆಯನಾಗಿ ಗೋಪಾಲ ವಿಠ್ಠಲ
ಅನಿಮಿತ್ತ ಬಾಂಧವನಾಗಿ ಕ್ಷಣ ಬಿಡದಲ್ಲೆ ಕಾವ ॥ 2 ॥

ರೂಪಕತಾಳ

ಇಷ್ಟು ಮಂದ್ಯಾಡಿಸಲು ಆಡುವಿ ವಚನಗಳು
ಸ್ಪಷ್ಟವಾಗಿ ನೋಡು ನಿನ್ನೊಳಗೆ
ಎಷ್ಟು ಮಂದಿ ಅಡಿ ಇಟ್ಟರೆ ನೀ ಇಡುವಿ
ಗಟ್ಯ್ಯಾಗಿ ನೋಡು ಚಲನಿಲ್ಲದೆ
ಎಷ್ಟು ಮಂದಿ ಯೋಚಿಸಲು ನೀ ಯೋಚಿಸುವಿ
ನಿಷ್ಟಿ ಇಂದಲಿ ತಿಳಿಯೊ ನಿನ್ನೊಳಗೆ
ಕಟ್ಟಿಗೆ ಸಾಧೃಶ್ಯ ಕಾಣೊ ನೀ ಇವರೆಲ್ಲಿ
ಚೇಷ್ಟಾ ಮಾಡಿಸದೆ ಸುಮ್ಮನಿರಲೂ
ಇಷ್ಟರು ಬಹುಮಂದಿ ಉಂಟು ನಿನ್ನೊಳಗೆ
ದುಷ್ಟರು ಬಹುಮಂದಿ ಉಂಟು ನಿನ್ನೊಳಗೆ
ಇಷ್ಟಾನಿಷ್ಟ ಕ್ರಿಯಾ ಇವರಿಗೆ ಪ್ರೇರಕರಾಗಿ
ಇಷ್ಟನಾಗಿ ಗೋಪಾಲ ವಿಠ್ಠಲನೆ ಮಾಡಿಪಾ ॥ 3 ॥

ಝುಂಪೆತಾಳ

ವಾಸುದೇವನಾಗಿದ್ದು ಒಳಗಿದ್ದು ತಾ ಹೃಷಿ
ಕೇಶನಾಗಿ ಇಂದ್ರಿಯಂಗಳಿಗೆ ಪ್ರೇರಕನು ಹ
ಯಾಸ್ಯನಾಗಿ ಒಳಗೆ ಜ್ಞಾನ ಪುಟ್ಟಿಸುವ ಮಹಿ
ದಾಸನಾಗಿ ವಿಷಯ ವಿರಕುತಿ ನೀವ
ವ್ಯಾಸನಾಗಿ ಉಪದೇಶಗಳ ಮಾಳ್ಪಾ
ಪೋಷಕನಾಗಿಹ ಪ್ರದ್ಯುಮ್ನ ನಾಗಿನ್ನು
ಬೇಸರದೆ ಸೃಜಿಸುವ ಸಂಕರುಷಣನಾಗಿ
ಮೋಸ ಗೊಡ ಜ್ಞಾನ ಮತ್ಸ್ಯನಾಗಿ ಒಳಗಿದ್ದು
ಬೇಸರದೆ ಹೊರುವ ಕೂರ್ಮನಾಗಿ
ಕ್ಲೇಶಗಳು ಪರಿಹರಿಪ ಒಳಗೆ ವರಹನಾಗಿ
ದ್ವೇಷಪುಟ್ಟಿಸುವ ದೈತ್ಯರ ಮೇಲೆ ನರಸಿಂಹ
ಕಾಸುಕಾಸಿಗೆ ಕೂಡಿ ಹಾಕಿಸುವ ವಾಮನಾ
ಭೂಸುರರಿಗೆ ತ್ಯಾಗ ಮಾಡಿಸುವ ಭಾರ್ಗವ
ವಾಸ ಮಾಡುವ ಬುದ್ಧಿ ನೀವ ಒಳಗೆ ರಾಮಾ
ಮೀಸಲ ಭೋಗಗಳು ಕೊಂಬ ಮನಸಿಗೆ ಕೃಷ್ಣ
ನಾಶಮಾಡುವ ಪರರ ಮೋಹಿಸುವ ಬೌದ್ಧ
ದೇಶಗಳು ತಿರುಗುವಾಗ ಮನಕೊಡುವ ಒಳಗೆ ಕಲ್ಕಿ
ಬೇಸರದೆ ಬಹು ರೂಪನಾಗಿ ಗೋಪಾಲ ವಿಠ್ಠಲ
ಪೋಷಿಸುವ ನಿರ್ವ್ಯಾಜ್ಯದಿಂದ ನಿತ್ಯಾ ॥ 4 ॥

ತ್ರಿವಿಡಿತಾಳ

ವರಣ ಪ್ರತಿಪಾದ್ಯ ಐವತ್ತೊಂದು
ಇರವು ನಿಯಾಮಕ ಕೇಶವಾದಿಗಳು
ಎರಡೊಂದು ಅವಸ್ಥಾಪ್ರದ ಮೂರ್ತಿಗಳು
ಎರಡೊಂದು ವರ್ಣ ಮೂರ್ತಿಗಳು ಇನ್ನು
ಪರಿಪರಿ ಕೃದ್ಧೋಲ್ಕ ಆತ್ಮಾದಿ ಮೂರ್ತಿಗಳು
ಎರಗಿ ರೋಮ ರೋಮ ತುಂಬಿಹ ಮೂರ್ತಿಗಳು
ಹೊರಗೆ ಒಳಗೆ ವ್ಯಾಪ್ತ ಗೋಪಾಲವಿಠ್ಠಲ
ತಿರುಗುವ ಎಮ್ಮೊಡನೆ ಪರಿಪರಿ ರೂಪನಾಗಿ ॥ 5 ॥

ಅಟ್ಟತಾಳ

ಏಕ ಮೂರುತಿ ಚತುರ ಮೂರುತಿ
ಏಕ ಸಪುತ ಮೂರ್ತಿ ಏಕ ದಶಮೂರುತಿ
ಏಕ ಶತ ಮೂರುತಿ ಎಕಷ್ಟ ಮೂರುತಿ
ಏಕ ಸಾಸಿರ ಮೂರ್ತಿ
ಏಕಧಿಕ ಎಪ್ಪತ್ತೊಂದು ಸಾವಿರ ಮೂರ್ತಿ
ಏಕ ಅಷ್ಟ ಕೋಟಿ ರೂಪನಾಗಿಪ್ಪ ಮೂರ್ತಿ
ಏಕಾರ್ಣವದಲ್ಲಿ ಏಕ ಮೇವನದ್ವಿತೀಯ ಮೂರ್ತಿ
ಈಕಡ್ಯಾಕಡೆ ಸವ್ಯಾಪ ಸವ್ಯ ಮೂರ್ತಿ
ಸಾಕಾರ ಮೂರ್ತಿಗಳು ಸರ್ವಜ್ಞ ಪರಿಪೂರ್ಣ
ಸಾಕುವ ಸರ್ವತ್ರ ಗೋಪಾಲ ವಿಠ್ಠಲನಿರೆ
ನಾ ಕಾಣೆ ಎನಗಿನ್ನು ಏಕಾಂತ ವೆಂಬುವದು ॥ 6 ॥
(ಆದಿತಾಳ, ಜತೆ ಸಿಕ್ಕಿಲ್ಲ)

## ಸುಳಾದಿ 23

ಧ್ರುವತಾಳ

ಆವ ಕರ್ಮಗಳಿನ್ನು ಆವಧರ್ಮಗಳಿನ್ನು
ಆವ ತೀರ್ಥಯಾತ್ರೆಯು ಆವಾವಾ ವ್ರತಂಗಳು
ಆವಾವಾ ಸಜ್ಜನರ ಸಹವಾಸಂಗಳು ಎಲ್ಲ
ಆವಾವಾ ವೇದ ಶಾಸ್ತ್ರ ದೇವಾರ್ಚನೆಗಳೆಲ್ಲ
ದೇವ ನಿನ್ನ ಒಲಿಸುವ ಉಪಾಯಂಗಳು
ಆವಾವಾ ಪರಿ ಸಾಧನಂಗಳು ಎನ್ನು ಈ ವಿಧಸಾಧನಗಳಿನ್ನು
ತಾವೊಪ್ಪಿಸೀಗಾ ಸಾಧನವ ಪೊಗಲಾಡಿಸಿತೊ
ನಾ ಒಂದರಿಯದಾದೆ ದೇವಾ ದೇವಾ
ಗೋವು ಕರೆದ ಪಾಲು ಹಾವಿಗೆರದಂತೆ
ಸಾವಿರ ಬಗೆ ಸಾಧನಂಗಳೂ ಎಲ್ಲ
ಈ ಉದ್ಧಾರಕ್ಕುಪಾಯವ ದಾವದಯ್ಯಾ
ನೀ ಒಲಿವ ಬಗೆ ಇನ್ನಾವದು ನಾನರಿಯೆ
ಭೂವಲ್ಲಭ ನಮ್ಮ ಗೋಪಾಲವಿಠ್ಠಲರೇಯಾ
ಭಾವ ಶುದ್ಧದಿ ನಿನ್ನ ಸೇವಿಸದೆ ॥ 1 ॥

ಮಟ್ಟತಾಳ

ಮನವು ಧನದಲ್ಲಿಟ್ಟು ಎಣಿಸಲು ಜೀವಂಗಳು
ಹಣವೆಣಿಕಲ್ಲದೆ ನಿನ್ನ ಎಣಿಸಲಿಲ್ಲ
ನೊಣನು ಅನ್ನದಲಿಟ್ಟು ಉಣಕಲಿತರೆ ಇನ್ನು
ಗುಣ ಕೊಡಬಲ್ಲದೆ ದಣಿಸದೆ ಬಿಡತನಕ
ಮನುಜ ಜಡ ನಾನು ಕುಣಿಯ ಕಾಣದೆ ಬಿದ್ದು
ಎಣಿಸುತಲಿದ್ದಂತೆ ಧನದ ವ್ಯಾಕುಲವಯ್ಯಾ
ಮಣಿ ಕಾಂಚನ ಮೃಣ್ಮಯ ಸಮವೆಂದು
ಮನದೊಳು ಮಾಡದೆ ಮನಸಿಜನಯ್ಯನೆ
ಎನಗೆ ನೀ ನೊಲಿಯೆ ಬೋಧೆನಿತ್ತು ಇನಿತು ಕಾಣೆ
ನಿನಗೆ ನೀನೆ ಬಲ್ಲಿ ಎನಗಾವ ಸಾಧನೆಯ
ಕೊನೆ ಮೊದಲು ಕಾಣೆ ಗುಣಪೂರ್ಣ ಕಾಮನೆ
ಫಣಿ ಶಾಯಿ ನಮ್ಮ ಗೋಪಾಲ ವಿಠ್ಠಲ
ತನುಮನ ದೊಡಿಯ ಅನುವರಿತು ಪೊರಿಯೊ ॥ 2 ॥

ತ್ರಿವಿಡಿತಾಳ

ವಿಷಯಂಗಳೆಲ್ಲ ಇನ್ನು ವಿಷವೆಂದರಿದು ದು
ರ್ವಿಷಯಕ್ಕೆರಗುವೆನೊ ದೆಶೆಗೆಟ್ಟು ಬರಿದೆ
ಹಸಿದು ಪೋಗಿ ಇನ್ನು ಅಸುರ ತನದಲೀಗ
ನಸುಗುಂದಿ ಕಾಯಿಯ ಮಸಳಿ ಮೆದ್ದರೆ
ತೃಷಿ ಹೋಗ ಬಲ್ಲದೆ ರಸ ಉಣ್ಣದನಕ
ಹಸಿಯೆ ವಸ್ತ್ರವ ವೈದು ಕೆಸರೊಳು ತುಳಿದರೆ
ಹಸನಾಗ ಬಲ್ಲದೆ ವಸನ ವೇಗ
ಬಿಸಜಾಕ್ಷ ನಿನ್ನ ಕರುಣ
ರಸವೆಂಬ ಮಡುವಿನೊಳುಶಾರೀರ ತೋಯಿದು
ಬಿಸಜ ಚರಣವ ತೋರೊ ಕಸವ ಕಿತ್ತಿಯು ಕಾಮಕ್ರೋಧಂಗಳೆಲ್ಲ
ಉಸರಿದೆ ನಿನಗೆ ನಾ ಅಸುರಮರ್ದನ ರಂಗ
ವಸುದೇವ ಸುತ ನಮ್ಮ ಗೋಪಾಲವಿಠ್ಠಲ
ವಿಷಯ ದಾಶಿಗೆ ಮನವಶ ಮಾಡದಿರೊ ॥ 3 ॥

ಅಟ್ಟತಾಳ

ಮಾಡದೆ ಭಕುತಿಯ ಬೇಡದೆ ಮುಕುತಿಯ
ನೀಡ ಬಲ್ಲೆಯೋ ದೇವ ನೋಡವರ ಪುಣ್ಯ
ಕಾಡಿಗಿ ಮಸಿ ಕನ್ನಡಿಗೆ ಪೂಸಿ ಇನ್ನು
ನೋಡಲು ಮೊಗವನ್ನು ಪಾಡಾಗಿ ತೋರೋದೆ
ಗಾಡಿಕಾರನು ತನ್ನೊಡಲಾಶಗೆ
ನಾಡೊಳಗಿಲ್ಲದಾಟಾಡಿ ಜನ ಮರುಳು
ಮಾಡಿಧನವನ್ನು ಕೂಡಿಸಿದಂದದಿ
ಆಡಿ ಪಾಡಿ ಹರಿದಾಸನೆಂದು ಜನರ
ಬೇಡುವದಕೆ ದ್ರವ್ಯ ಮಾಡುವೆ ಭಕುತಿಯ
ನೋಡುವಂತೆ ಜನರು ರೂಢಿಯೊಳೆನ್ನಂಥ
ಮೂಢನಿಲ್ಲಲೋ ದೇವ ಈಡಾರೊ ಎನಗಿನ್ನು
ಮಾಡೆ ಮನದವಗೆ ಮಾಡಲೆಂತೊ ಕೃಪೆ
ಬಾಡಿಗೆ ಮನೆ ದೇಹ ಬಿಡಾರ ಸ್ಥಿರವಲ್ಲ
ನಾಡ ದೇವರ ಗಂಡ ಗೋಪಾಲವಿಠ್ಠಲ
ಗೋಡಿ ಮರಿಯೆ ಭಕ್ತಿ ಮಾಡಿದ ರೊಲಿಮೆಯಿಲ್ಲ ॥ 4 ॥

ಆದಿತಾಳ

ಇಷ್ಟೆ ನಾನಾಪರಿ ಚಿನ್ನ ಅಲಂಕಾರ
ಉಟ್ಟ ಪೀತಾಂಬರ ತೊಟ್ಟ ಪಟ್ಟಾವಳಿ
ಅಷ್ಟ ಸಂಪತ್ತಿನ ಧಿಟ್ಟ ಕನ್ನಿಕೆಯನು
ದೃಷ್ಟಿಯೊಳಗೆ ಸಮವಿಲ್ಲದ ಬಾಲಿಗೆ
ನೆಟ್ಟನೆ ಮೊಗದಲ್ಲಿ ಕುಷ್ಟವು ಇದ್ದರೆ
ನಷ್ಟ ಚಲುವಿಕೆ ಇನ್ಯಾತಕ್ಕಯ್ಯಾ
ಕೃಷ್ಣಾ ನಿನ್ನಲಿ ಭಕುತಿ ಪುಟ್ಟದಲೇವೆ ಇನ್ನು
ವೈಷ್ಣವನಾಗಿ ಉಳ್ಳಷ್ಟು ಕರ್ಮ ಮಾಡಲು
ಭ್ರಷ್ಟ ಜನ್ಮಂಗಳು ಹೋಗ ಬಲ್ಲವೇನಯ್ಯಾ
ಹುಟ್ಟಿದರು ಗೌಡ ಹೆಸರು ಇಕ್ಕದತಿ
ಕೆಟ್ಟ ಕಬ್ಬಲಿಗಗೆ ಕೊಟ್ಟರೆ ತಾಳೋನೆ
ಸೃಷ್ಠಿಗೊಡೆಯ ನಮ್ಮ ಗೋಪಾಲವಿಠ್ಠಲ
ನಿಷ್ಟಿಲಿ ಕೊಡು ನಿನ್ನ ಮುಟ್ಟಿ ಪೂಜಿಸಲಿ ॥ 5 ॥

ಜತೆ
ಜ್ಞಾನವೆ ಭಕುತರಿಗೆ ನೀನೊಲಿಯೊ ಎನಗಿನ್ನು
ದಾನವಾಂತಕ ರಂಗ ಗೋಪಾಲವಿಠ್ಠಲ ॥ 6 ॥

ಧ್ರುವತಾಳ

## ಸುಳಾದಿ 24

ಅನಂತ ಅಪರಾಧ ಎನ್ನಲ್ಲಿ ಉಂಟು ದೇವ
ಇನ್ನು ಮುಂದೆ ಆಗೋವು ಅನಂತ ವಿದ್ದರನ್ನ
ಮುನ್ನೆ ನಿನ್ನ ಆ ನಾಮವನ್ನು ನೆನೆಯನೆ
ಅನಂತ ಅಪರಾಧಗಧಿಕಾರಿ ಆನಾದೆನೊ
ನಿನ್ನ ನಾಮದಿಂದ ಹೋಗುವಷ್ಟು ದೋಷ
ಎನ್ನಿಂದ ಮಾಡಲಿ ಇನ್ನಳವಲ್ಲವು
ಇನ್ನು ತಿಳಿದು ಹೋಗೆ ಎನ್ನ ಮನವು
ನಿನ್ನ ನೆನೆಸದನ್ಯ ಕೆರಗುತದೆ
ಕಣ್ಣಲ್ಲಿ ಕಂಡರೆ ಕರ್ಣದಿ ಕೇಳಿದರೆ
ಇನ್ನೆಂಥ ವೈರಾಗ್ಯವನ್ನು ನಾ ತೋರುವೆ
ಕುನ್ನಿ ಸ್ವಪ್ನದಿ ಜ್ಞಾನವನ್ನು ತಂದುಕೊಂಡು
ಸನ್ನುತ ಪರರನ್ನವ ತಿಂದಂತೆ
ಎನ್ನ ದಾಸತ್ವವು ಇನ್ನಿಚ್ಛೈಸಲಿ ಕೈಯ್ಯ
ಅನಂತ ಪರಿಯಲ್ಲಿ ಶಾಸ್ತ್ರಂಗಳೆಲ್ಲ ತಿಳಿದು
ತನ್ನ ಸತಿಯನ್ನು ಅನ್ಯರಿ ಗೊಪ್ಪಿಸಿ
ಹೆಣ್ಣು ಶಿಶುವು ಪಡೆದು ಕನ್ಯಾದಾನವ ಮಾಡಿ
ಪುಣ್ಯಗಳಿಸಿದಂತೆ ಎನ್ನ ಧರ್ಮವಯ್ಯಾ
ನಿನ್ನ ದಾಸನಾಗಿ ನಿನ್ನ ಮುದ್ರೆಯ ಧರಿಸಿ
ನಿನ್ನ ಹಾಡಿ ಪಾಡಿ ನಿನ್ನನ್ನು ಒಲಿಸದೆ
ಹೊನ್ನು ಉಳ್ಳವನಲ್ಲಿ ಚನ್ನಾಗಿ ಪೋಗಿನ್ನು
ನಿನ್ನಂಥ ದಾತನ ಇನ್ನೆಲ್ಲಿ ಕಾಣೆನೆಂ
ದುನ್ನತ ಪರಿಯಲ್ಲಿ ಬಣ್ಣಿಸಿ ಕೊಂಡಾಡಿ
ಹೊನ್ನು ಘಳಿಸಿ ತಂದು ಅನ್ನದಾನವ ಮಾಡಿ
ಘನ್ನತೆ ಪಡೆದನೊ ನಿನ್ನನೊಯಿದು ಬೀರಿ

ಇನ್ನೆನಾಯಿತೆಂಬೊ ಪುಣ್ಯ ಪಾಪಂಗಳು
ಮುನ್ನೆ ಮಾಡಿದದ ದೆಲ್ಲ ಇನ್ನು ಮಾಡುತಲಿಪ್ಪೆ
ಸನ್ನುತ ಮುನಿ ಪ್ರಿಯ ಗೋಪಾಲ ವಿಠ್ಠಲ
ಎನ್ನ ದೇಹ ಬಲು ಭಂಗ ಗೆಟ್ಟಿತಲ್ಲೊ ॥ 1 ॥

ಮಟ್ಟತಾಳ

ಆಶೆ ಎಂಬೋದು ದೊಡ್ಡ ದೋಷವೆಂಬೋದು ತಿಳಿದು
ರಾಶಿ ನರಕದೊಳು ವಾಸಮಾಡುವೆನಯ್ಯಾ
ಹೇಸಿ ಜಂಬುಕ ತಾನು ಗ್ರಾಸಕಕ್ಕಿಯ
ವಾಸೆ ಎಂದು ಘಾಸೆ ಬಟ್ಟ ತೆರದಿ
ಮೋಸ ಹೋಗಿದುರಾಶಿಗೆರಗಿ ಇನ್ನು
ಮೀಸಲದ ಪುಣ್ಯ ಹ್ರಾಸ ಮಾಳ್ಪೆನಯ್ಯಾ
ಈ ಸಮಸ್ತ ದೋಷರಾಶಿ ಒಪ್ಪಿಸಿನ್ನು
ಬೇಸರದಲೆ ಶ್ರೀ ವಾಸುದೇವ ನಿನ್ನ ಸಾಸಿರನಾಮವು
ಸೂಸಿ ವೃಷ್ಠಿ ಗರೆದು ನಾಶಮಾಡುವ ಅಘ
ಪಾಶ ಕಡಿಯೊ ಬೇಗ ಶೇಷ ಶಾಯಿ ಗೋಪಾಲ ವಿಠ್ಠಲ ನಿಜ
ದಾಸರಲಿ ಭಕುತಿ ಲೇಸು ಆಗಿ ನೀಯೊ. ॥ 2 ॥

ತ್ರಿವಿಡಿತಾಳ

ಆವಾವ ಕಾಲಕ್ಕೂ ಜೀವಯೋಗ್ಯತೆ ಅರಿದು
ದೇವ ನೀನು ಫಲವನು ನೀವುತಲಿರೇ
ಆ ಒಂದು ಪರಿಯ ತನವ ಮಾಡಿ ನಿನ್ನ
ಸೇವಿಗೆ ಅನ್ಯಥ ವಾಗುವೆನೋ ತನುವಿನ ಗ್ರಾಸವು
ಕಾವುವಾತನೆ ಬಲ್ಲ ಹಾವು ಬಲ್ಲದೆ ವೃಥಾ ಧಾವತಿ ಅಲ್ಲದೆ
ಹೇವ ಇಲ್ಲದೆ ಮಾನ ಈವಿಧ ಯೆಳೆದು
ಸಾವು ಕೊಲ್ಲುತಲಿದೆ ದೇವ ಕೇಳೊ
ಆವದಾದರು ನಿಷ್ಠುರ ಆಡಿದಡೆ ದೇವನೆ ಪ್ರೇರಕನೆಂದು ಅರಿಯದಲೆ
ನೋವಾಗುವೆನೊ ನಿನ್ನ ಭಾವಾರ್ಥ ತಿಳಿಯದೆ
ಆವ ಕಾರ್ಯದಲ್ಲಿ ಆವ ಕರ್ಮಗಳಲ್ಲಿ
ಆವಾವರಲ್ಲಿನ್ನು ಯಾವತ್ತರಲ್ಲಿ ನೀ ವ್ಯಾಪಕನಾಗಿನ್ನು

ಜೀವರ ಕೈಯ ವ್ಯಾಪಾರ ಮಾಡಿಸಿ ಇನ್ನು
ಆ ಉದಕದಿ ಕಮಲವು ಇದ್ದಂಥಾ
ಈ ಉಪಾಸನೆಯನ್ನು ಸಾವಧಾನದಿ ಮಾಳ್ಪ
ಜೀವರಿಗೆ ಇನ್ನು ನೀವರಿಯೆ ರಂಗ
ದೇವಕಿನಂದನ ಗೋಪಾಲವಿಠ್ಠಲ
ಆವರಲ್ಲಿ ಇದ್ದರನ್ನ ಕಾವ ಭಾರ ನಿನ್ನದೊ ॥ 3 ॥

ಅಟ್ಟತಾಳ

ಸಾಕ ಸಾಕು ದುರ್ವಿಷಯ ಕೆರಗಿಸದೆ
ನೂಕ ಬೇಡವು ನರಕದ ಜನುಮಕ್ಕೆ
ನೂಕು ನೂಕು ದುರಿತ ಕುಪಥಗಳೆಲ್ಲ
ನೂಕಿಸ ಬೇಡದೆ ದಿನವ ಕಳಿಯದೆ ವ್ಯರ್ಥ
ಬೇಕು ಎನಿಸು ನಿನ್ನ ಶರಣರ ಸಹವಾಸ
ಸಾಕು ಸಾಕೆಂಬಂತೆ ಸಾಲದೆ ನಿನ್ನ ನಾಮ
ವಾಕು ಎನಗೆ ಇತ್ತು ಸಹಕಾರ ವಾಗಿನ್ನು
ನೀ ಕಾಯಬೇಕೆನ್ನ ಸಾಕಲ್ಯ ಗುಣನಿಧಿ
ಲೋಕರಕ್ಷಕ ರಂಗ ಗೋಪಾಲ ವಿಠ್ಠಲ
ವ್ಯಾಕುಲ ಗೊಳಿಸು ನಿನ್ನ ಕಳವಳಿಕೆಯೊಳು. ॥ 4 ॥

ಆದಿತಾಳ

ಧರೆಯೊಳು ಅಜ್ಞಾನವೆಂಬ ಕತ್ತಲೆಗಿನ್ನು
ಹರಿ ನಿನ್ನ ಚರಣ ಸ್ಮರಣೆ ದೀಪ ನಿಲ್ಲಿಸೆ
ಇರಬಲ್ಲದೆ ತಾ ತಮವು ಹರಿದು ಪೋಗುವದಯ್ಯಾ
ಕರುಣಾಕರನೆ ಸ್ಮರಣೆ ಪಾಲ ಉಳ್ಳವರಿಗೆ
ಕರಿ ಎಂಬ ದೋಷಿನ್ನು ಹರಿಯು ಕಂಡ ತೆರದಿ
ಅರಿಯೆ ನಾನಾ ಪರಿ ಸಾಧನದೊಳಗೆ
ಹರಿ ನಿನ್ನ ಸ್ಮರಣೀಗೆ ಇನ್ನೊಂದು ನಾ ಕಾಣೆ
ಪರಮ ಮೂಢನು ನಾನು ಕರವಡ್ಡಿ ಬೇಡಿಕೊಂಬೆ
ವರವ ಪಾಲಿಸು ದೇವ ಕರುಣಾಕರ ಕೃಷ್ಣ
ದುರಿತ ಬಂದರಾಗಲಿ ಹರುಷ ಬಂದರಾಗಲಿ

ಇರಳು ಹಗಲು ನಿನ್ನ ಸ್ಥಿರ ಭಕುತಿ ಸ್ಮರಣೆ ಇತ್ತು
ಪೊರಿ ಎನ್ನ ಬಿಡದಲೆ ಗೋಪಾಲ ವಿಠ್ಠಲ ॥ 5 ॥

ಜತೆ

ನಿನ್ನ ವೃಕ್ಷದ ಹಣ್ಣು ಅನ್ಯರು ವೈದರೆ
ಪುಣ್ಯ ನಿನ್ನದು ಕಾಣೊ ಗೋಪಾಲ ವಿಠ್ಠಲ ॥ 6 ॥

ಧ್ರುವತಾಳ

## ಸುಳಾದಿ 25

### ಅಹೋಬಲ ನರಸಿಂಹ ದೇವರ ಸ್ತೋತ್ರ

ಅನಂತನ್ನ ನೋಡಿ ಅಗಣಿತ ಗುಣಗಣನ
ಅನಂತನ್ನ ಪಾಡಿ ಆಗಮಾದಿ ವಿನುತನ
ಅನಂತನ್ನ ಬೇಡಿ ಅನಿಮಿತ್ತ ಬಾಂಧವನ
ಅನಂತನ್ನ ತಿಳಿರಿ ಅಧಿಕಾರಾನುಸಾರ
ಅನಂತ ಜನರ ಪೊರಿವಾ ಅನಂತ ರೂಪನಾಗಿ
ಅನಂತನೇವೆ ಅಹೋಬಲ ನಾರಸಿಂಹನಾಗಿ
ಅನಂತ ಪರಿಯೆ ತುತಿಪೊ ಆ ಮಾರ್ಕಾಂಡೇಯ ಗೊಲಿದು
ಅನಂತ ಮೂರ್ತಿ ತೋರಿ ಆತನ ವ್ರತವ ಗೆಲಿಸಿ
ಅನಂತ ಸಿರಿ ಅಜಭವಾದ್ಯರಿಂದಲಿನ್ನು
ಅನಂತ ಪರಿಯಲ್ಲಿ ಸ್ಮರಿಸಿ ಕೊಳುತಲಿಪ್ಪ
ಅನಂತ ಗಿರಿವಾಸ ಗೋಪಾಲವಿಠ್ಠಲ
ಅನಂತ ನಿಂದಲಿ ಅನಂತ ತೀರ್ಥ ಉಂಟು ॥ 1 ॥

ಮಟ್ಟತಾಳ

ಭವನಾಶನ ಮಾಳ್ಪಾ ಭಾಗೀರಥಿಜನಕ
ಭವನಾಶಿನಿ ತೀರ್ಥದಲ್ಲಿ ತಾನೆ ನಿಂದು
ಅವನಿಯೊಳಗೆ ಒಬ್ಬ ಚಂಡ ಶಾಸನನು ಎಂ
ಬವನು ತಾನು ಬಲು ಕವಿಗಳ ದೂಷಿಸುತ
ಭವ ಪೀಡಿತನಾಗಿ ಬಹು ವಿಪ್ರರ ದ್ರೋ
ಹವನು ತಾಕಿ ಶವನು ಆಗಿ ಭೀಳೆ
ಜವನ ದೂತರು ಬಂದು ಜಬರಿಸಿ ವಯ್ಯುವ ಸಮಯ

ಕ್ಕವನ ಅಂಗುಟ ಬೆರಳು ಭವನಾಸಿಲಿ ಬೀಳೆ
ಭವತರಿದು ಅನುಭವಕೆ ತಂದು ಇತ್ತು
ಭುವನ ದೊಳಗೆ ದಶರಥರಾಯನೆ ಆದ
ಭವರೋಗದ ವೈದ್ಯ ಗೋಪಾಲ ವಿಠ್ಠಲನು
ಪವನಂತರ ನಿಂತು ಪಂಡಿತರನು ಪೊರೆವಾ ॥ 2 ॥

ರೂಪಕತಾಳ

ಸಿರಿದೇವಿ ಪೆಸರಿನ ತೀರ್ಥ ಇಲ್ಲುಂಟು
ಗರುಡ ತೀರ್ಥ ಉಂಟು ಉರಗ ತೀರ್ಥ ಉಂಟು
ನರರ ಉದ್ಧರಿಸಲು ವಾಯುತೀರ್ಥ ಉಂಟು
ಪರಿ ಪರಿ ಪೆಸರಿನ ತೀರ್ಥಗಳಿಲ್ಲುಂಟು
ನರಹರಿ ತಾನೆ ಒಂದೊಂದು ತೀರ್ಥದಿ ಇದ್ದು
ಧರಿಮೇಲಿದ್ದ ಜನರ ಪೊರೆವಾ ತಿಳಿದವರಿಗೆ
ಕರುಣಾಕರ ಗೋಪಾಲ ವಿಠ್ಠಲ ತನ್ನ
ಶರಣರಪೊರಿಯಲಿ ಇರುತಿಪ್ಪನಿಲ್ಲಿ ॥ 3 ॥

ಝಂಪಿತಾಳ

ಸಿರಿವತ್ಸ ಕೌಸ್ತುಭ ಸಿರಿಗಂಧ ಕೊರಳ
ಅರಳಿದ ಪೂಮಾಲೆ ಆ ವುದರ ಮೇಲೊಲಿಯೆ
ಕರಣ ಕುಂಡಲ ಕಸ್ತೂರಿ ನೊಸಲ ಥಳ ಥಳಿಸೆ
ಕಿರಿದಂತ ಕಪ್ಪುರದ ಕರಡಿಗೊದನ
ಸಿರಿ ಕಿರೀಟವು ಸಿರಿನಾಮ ಕಸ್ತೂರಿ ತಿಲಕ
ಕರ ಚತುರ್ಭೂಭುಜ ಶಂಖ ಚಕ್ರಾಯುಧ
ವರನಾಭಿ ಇಂದ ವೊಪ್ಪೊವಡ್ಯಾಣ ಕಟಿ
ತರ ಮೇಲೆ ಉಡಿಗೆ ಕಿಂಕಿಣಿಯ ಘಂಟಿ
ಊರು ಜಾನು ಜಂಘೆ ಜಘನ
ಶರಣರ ಮೋಹಿಪ ರೂಪ ಸಿರಿ ನಾರಾಯಣ ಶೃಂ
ಗಾರ ಮೂರ್ತಿ ಗರುಡವಾಹನ ಗೋಪಾಲ ವಿಠ್ಠಲ
ಪರಿವಾರ ದೊಡೆಯ ಪರಬೊಮ್ಮ ಕಾಣೊ ॥ 4 ॥

ತ್ರಿವಿಡಿತಾಳ

ಇಲ್ಲಿ ಉಂಟು ಅಲ್ಲಿ ಇಲ್ಲ
ಅಲ್ಲಿ ಉಂಟು ಇಲ್ಲೆ ಇಲ್ಲ
ಸೊಲ್ಲ ನಾಡ ಸಲ್ಲಾದಿನ್ನು ಬಲ್ಲವರಿಗೆಲ್ಲ ಕೈವಲ್ಯಾ
ಬೆಲ್ಲದಚ್ಚು ಆವಕಡೆಯಿಂದಾದರು ತಿನ್ನಲು
ಬೆಲ್ಲ ಒಂದು ಕಡೆಯಾಗಿ ಕಲ್ಲು ಒಂದು ಕಡ್ಯಾಗೋದೆ
ಎಲ್ಲಿ ನೋಡಾ ಹರಿ ಇರಲು ಇಲ್ಲಿಗೆ ಬಂದದ್ಯಾಕೆನಲು
ಸುಲಭದಿ ತಿಳುವ ಸ್ಥಳದಲ್ಲಿ ಮಹಾತ್ಮೆ ಉಂಟು
ಅಲ್ಲಿಂದ ಬಂದದು ಏನಾ
ಇಲ್ಲಿಂದ ಕೊಂಡೊಯಿದದೇನು
ಬಲ್ಲ ಜ್ಞಾನಿಗಳು ಮನದಲ್ಲಿದ್ದು ಗುಣಿಸಿ ನೋಡಿ
ಮಲ್ಲರ ಮರ್ದನ ರಂಗ ಗೋಪಾಲ ವಿಠ್ಠಲ
ಎಲ್ಲಿ ನೋಡಲು ವಿಶ್ವಮೂರ್ತಿ ತಾ ಪೊಳೆವ ॥ 5 ॥

ಅಟ್ಟತಾಳ

ನೋಡುವ ತನ್ನ ತಾ ಒಬ್ಬರಲ್ಲಿ ನಿಂತು
ಬೇಡುವ ತನ್ನ ತಾ ಒಬ್ಬರಲ್ಲಿ ನಿಂತು
ಮಾಡುವ ತನ್ನ ತಾ ಒಬ್ಬರಲ್ಲಿ ನಿಂತು
ನೀಡುವ ತನಗೆ ತಾ ಒಬ್ಬರಲ್ಲಿ ನಿಂತು
ಕೇಡು ಲಾಭಂಗಳ ಕೂಡಿ ಊಣಿಸುವನು
ಗೂಡು ಮಾಡಿಟ್ಟಂಥ ಜಡ ಜೀವರಿಗೆ
ಗಾಡಿಕಾರ ದೇವಾ ಗೋಪಾಲ ವಿಠ್ಠಲ
ಕೂಡಿ ಆಡುತ ನಮ್ಮೊಡನೆ ಸುತ್ತುತಲಿಪ್ಪ ॥ 6 ॥

ಆದಿತಾಳ

ಇಲ್ಲೆ ಅನಂತಾನಂತವಾಗಿ ಮೆಲ್ಲನೆ ತಾ ತೋರುತಿಪ್ಪ
ಇಲ್ಲೆ ಅನಂತಾಯುಧಗಳು ಬಲ್ಲವರಿಗೆ ತೋರುತಿಪ್ಪ
ಇಲ್ಲೆ ಅನಂತಾನಂತ ರೂಪಗಳು ಬಲ್ಲವರಿಗೆ ತೋರುತಿಪ್ಪ
ಇಲ್ಲಿ ಬಂದು ಕರ್ಮವು ಮಾಡೆ ಅನಂತಮಡಿ ಅವರಿಗೀಗ
ಎಲ್ಲಿ ನೋಡಾ ತೀರ್ಥಗಳು ಎಲ್ಲ ನೋಡಾ ದೇವತೆಗಳು

ಎಲ್ಲಿ ನೋಡಾ ಮುನಿಗಳು ಎಲ್ಲಿ ನೊಡಾ ತಾಪಸಿಗಳು
ನಿಲ್ಲಿಸಿಪ್ಪರೊಂದು ಬಂದು ಬಳ್ಳಿ ವೃಕ್ಷ ರೂಪದಿಂದ
ಪಲ್ಲವಿಸುತ ನಾನಾ ಪಕ್ಷಿ ಜಾತಿ ರೂಪದಿಂದ
ಹುಲ್ಲು ಕಾಷ್ಟಗಳನ್ನು ಇಲ್ಲಿ ಛೇದಿಸುವದಕೆ
ಮೆಲ್ಲನೆತಿಳಿದು ಹರಿಗಲ್ಲಿ ಇನ್ನರ್ಪಿಸಬೇಕು
ಎಲ್ಲ ಪುಷ್ಪ ಫಲವು ಶ್ರೀವಲ್ಲಭನ್ನ ಸೇವಿಸುತ್ತ
ಇಲ್ಲಿ ಇರುತಿಪ್ಪವು ಬಲ್ಲವರು ತಿಳಿದು ನೋಡಾ
ಎಲ್ಲರಂತರ್ಯಾಮಿಯಾದ ಬಲ್ಲಿದ ಗೋಪಾಲ ವಿಠ್ಠಲ
ಅಲ್ಲಿ ಪ್ರಲ್ಹಾದ ಗೊಲಿದು ಇಲ್ಲಿ ಬಂದ ದೈವ ನೋಡಿ ॥ 7 ॥

ಜತೆ

ಅನಂತನ ನೋಡಿ ಅನಂತನ ಬೇಡಿ
ಅನಂತ ಒಂದೇದೈವ ಗೋಪಾಲ ವಿಠ್ಠಲನೆನ್ನಿ ॥ 8 ॥

ಧ್ರುವತಾಳ

## ಸುಳಾದಿ 26

ಆವಲೀಲೆಯೊ ನಿನ್ನ ನಾವಾವ ವರ್ಣಿಪ
ದೇವ ನಿನ್ನ ನಿಜ ಸ್ವಭಾವ ಗುಣ
ಆವ ಜನುಮ ರಹಿತವಾದ ನೀನು ಇನ್ನು
ದೇವಕ್ಕಿ ಜಠರದಿ ಜನನವೇನೊ
ಆವ ಜಗವೆಲ್ಲ ಬಂಧಕವ ಮಾಡಿಪ್ಪ ಶಕ್ತ
ಗೋವತ್ಸ ಹಗ್ಗದಿಂದ ನೀವೇಗ ಸಿಕ್ಕೊದೇನೊ
ಆವ ನಿತ್ಯ ತೃಪ್ತನಾದವನೀ ಇನ್ನು ಪೋಗಿ
ಆವಾವ ಮನಿ ಬೆಣ್ಣಿ ಕದ್ದು ಮೆದ್ದದೇನೊ
ದೇವ ಸ್ವರಮಣನಾದ ಇನ್ನು ಪೋಗಿ
ಆವ ಗೋಪಿಕರೊಡನಾಟವು ಕ್ರೀಡೆಗಳೇನೊ
ಶ್ರೀವೈಕುಂಠ ವಾಸವಾಗಿವ ಅಪ್ರಾಕೃತನೆ
ಈಉಡುಪಿನಲ್ಲಿ ನೀ ಇಪ್ಪ ಬಗೆಯ ಏನೋ
ಗೋವಳ ರೊಡಿಯ ಗೋಪಾಲ ವಿಠ್ಠಲರೇಯಾ
ನಿವಾಸ ಮಧ್ವಮುನಿ ಮಂದಿರ ಸರ್ವೇಶ ॥ 1 ॥

ಮಟ್ಟತಾಳ

ಮುಕ್ತ ಬೊಮ್ಮಾದಿಗಳು ತುತಿಸೆ ಕಾಣದೆ ಸರ್ವ
ಶಕ್ತರಲ್ಲವೆಂದು ಸುಮ್ಮನಿರುವದೇನು
ಸೊಕ್ಕಿನಿಂದಲಿ ಗೋಮಕ್ಕಳ ಕೈಯಿಂದ
ಭಕ್ತವತ್ಸಲನೆ ಬಯಿಸಿ ಕೊಂಡದದೇನು
ಮುಕ್ತಿ ಪ್ರದಾತನೆ ನಿನಗೆ ಯಮುನಾದೇವಿ
ಘಕ್ಕನೆ ಮಾರ್ಗವ ನಿತ್ತಳೆಂಬೋದೇನೊ
ಮುಕ್ತ ನಿಯಾಮಕನೆ ನೀ ಕೌರವ ಸಭೆಗೆ
ಚಕ್ಕನೆ ಸಂಧಾನಕ್ಕಿನ್ನು ಪೋದದುಏನೋ
ಭಕ್ತವತ್ಸಲ ಕೃಷ್ಣಾ ಗೋಪಾಲ ವಿಠ್ಠಲ
ಮಕ್ಕಳಾಟಕೆ ನಿನ್ನ ಮಹಿಮೆಗೆ ನಮೋ ನಮೊ ॥ 2 ॥

ತ್ರಿವಿಡಿತಾಳ

ಅಂಗನೆ ದ್ರೌಪದಿ ಗಕ್ಷಯ ವಸನವು
ಹಿಂಗದೆ ಇತ್ತಂಥ ಹಿತ ದೈವವೆ
ಶೃಂಗಾರದೀ ಪುರದ ರಜಕನ್ನ ಬಿಡದಲೆ
ಭಂಗ ಬಡಿಸಿ ವಸ್ತ್ರನುಟ್ಟು ಕೊಂಡದ್ದು ಏನೊ
ಹಿಂಗದೆ ಅಜಭವರಿನ್ನು ಅರ್ಚಿಸಲಾಗಿ
ಕುಂಗಿದ್ದ ಕುಬುಜಿ ಅರ್ಚನಿಗೆ ಮೆಚ್ಚಿದ್ದದೇನೊ
ಅಂಗನೆ ಲಕುಮಿ ಅಲಂಕರಿಸುತಲಿರೆ
ರಂಗ ಪೂಗಾರನ ಮಾಲೆ ಕೊಂಡದು ಏನೊ
ತುಂಗ ಮಹಿಮ ಗೋಪಾಲ ವಿಠ್ಠಲ ಕೃಷ್ಣ
ಡಿಂಗರಿಗರ ಪ್ರೀಯ ದೀನಜನರ ಬಂಧು ॥ 3 ॥

ಅಟ್ಟತಾಳ

ದುಃಖ ಸಾಗರದ ಸಿಕ್ಕು ಬಿಡಿಪನೆ ದೇ
ವಕ್ಕಿಯ ಶರಿಯ ಬಿಡಿಸಿದನೆಂಬುವ ದೇನೋ
ಅಕ್ಕರದಲಿ ವದನ ತೆರೆದು ಇನ್ನು
ಘಕ್ಕನೆ ಹದಿನಾಲ್ಕು ಲೋಕ ತೋರಿದನೆ ಗೋ
ಮಕ್ಕಳ ಕೂಡಾಡಿ ಅಡಗಿ ಕೊಂಬುವದೇನೊ

ಮುಖ್ಯ ಮುಕುತರು ನಿನ್ನನ್ನು ಕೊಂಡಾಡುತ್ತಲಿರೆ
ಉಖ್ಖಾ ಅಮ್ಮಾ ಎಂದು ಅಕ್ಕೆ ಮಾಡಿದದ ದೇನೊ
ಭಕ್ತ ವತ್ಸಲ ದೇವ ಗೋಪಾಲ ವಿಠ್ಠಲ ವಿ
ರಕ್ತರ ಮನದಲ್ಲಿ ಬಿಡದೆ ಇಪ್ಪುವ ಸ್ವಾಮಿ ॥ 4 ॥

ಆದಿತಾಳ

ಜಾರ ಚೋರ ದೋಷಗಳು ಆರು ಆರು ಮಾಡಿನಿನ್ನ
ಸಾರಿ ತುತಿಸಿ ಸಾರೆ ಅವರಾಪಾರ ಓಡವು
ಜಾರ ಚೋರ ಗುಣಗಳೆಲ್ಲ ನಿನಗೆ ಒಪ್ಪಿತಯ್ಯಾ ಸರ್ವ
ಕಾರಣಕ್ಕೆ ನೀನೆ ಮುಖ್ಯ ಕಾರಣಾದ ಕಾರಣವು
ಮಾರುತೀಶ ಚಲುವ ಗೋಪಾಲವಿಠ್ಠಲರೇಯಾ
ಆರು ಬಲ್ಲರಯ್ಯಾ ನಿನ್ನಪಾರ ಮಹಿಮೆ ಪೂರಣವು ॥ 5 ॥

ಜತೆ

ಉಡುಪಿನ ವಾಸ ಶ್ರೀ ಕೃಷ್ಣ ಗೋಪಾಲವಿಠ್ಠಲ
ಬಿಡದೆ ನಂಬಿಸೋ ನಿನ್ನ ಚರಣ ಕಮಲವ ॥ 6 ॥

## ಸುಳಾದಿ 27

ಧ್ರುವತಾಳ

ಎತ್ತಣ ಶಬ್ದವಿದು ಎನ್ನ ಕರ್ಣಕಿದು ಯವ್ವ
ಎತ್ತಣ ಸ್ಪರ್ಶವಿದು ಎನ್ನ ಅಂಗಕಿದು ಯವ್ವ
ಎತ್ತಣ ರೂಪವಿದು ಎನ್ನ ನಯನಕಿದು ಯವ್ವ
ಎತ್ತಣ ರಸವಿದು ಎನ್ನ ಜಿಹ್ವೆಗೆ ಇದು ಯವ್ವ
ಎತ್ತಣ ಗಂಧವಿದು ಎನ್ನ ನಾಸಕಿದು ಯವ್ವ
ಸುತ್ತಿಹ ಶಿರದಿ ನಾನಾ ಲತೆಯು ಎಳೆದಳಿರು
ರತುನ ಮುಕುಟ ಪಣೆಯು ಕಸ್ತೂರಿ ಕಮಲ ನಯನ
ವೃತ್ತವದನವು ಮಂದಸ್ಮಿತ ಚಲ್ವ ಕಿರಿದಂತ
ತತ್ಥಳಿಪ ಕಪೋಲ ಚಲತ್ತು ಮಕರ ಕುಂಡಲ
ಉತ್ತಮದ ಕಂಬು ಕಂಠ ಉರದಲ್ಲಿ ಶ್ರೀವತ್ಸ
ಶ್ರೀ ತುಲಸಿ ಮಾಲ ಶೃಂಗಾರಿತ್ತವಾದ ಭುಜಕೀರ್ತಿ
ತಿತ್ತಿರಿ ಮವ್ವೂರಿ ಕೊಳಲೂದುತ್ತ ಸ್ವರವೆತ್ತಿಗಾನ

ಕುತ್ತಿಗೆಯೆ ಬಾಗಿ ತಾಳಕಿಕ್ಕಿ ತೋಳ ಕರವನ್ನು
ಗುತ್ತಿ ಗುಲಗುಂಜಿ ದಂಡೆ ಚಿತ್ರ ಹೊನ್ನುಂಗುರ ಬೆರಳ
ಲೊತ್ತಿ ವೇಣು ಮೀಟುತ್ತ ಮತ್ತೆ ಸರಿಗಮದಿಂದ
ಚಿತ್ತಜನಯ್ಯ ಜಗದ್ಭರಿತ ಉದರ ತ್ರಿವಳಿಯ
ಸುತ್ತಿದ ಕಟಿಯ ಕಾಂಚೀದಾಮ ಗುಲ್ಲಿಯ ಚೀಲ
ಬುತ್ತಿಯ ಚಿಕ್ಕವು ಬಚ್ಚಣಿಯ ಕೋಲು ಬಲಸೆಕ್ಕಿ
ಎತ್ತಿ ಎತ್ತಿ ಮೆಲ್ಲನೆ ಪಾದೆತ್ತಿ ಹೆಜ್ಜೆ ನಡುತ್ತ
ಮತ್ತೆ ಮಹ ಅರ್ಥಿಗಿನ್ನುಪೃಥ್ವಿ ಆತುರಳಾಗಿ
ಇತ್ತ ವಿಭವು ಮುಂದತ್ತ ಚಿಂತಿಸುತಿಪ್ಪಳೊ
ಸತ್ಯ ಸಾಕಾರ ಸರ್ವಜ್ಞ ಗೋಪಾಲವಿಠ್ಠಲ
ಮತ್ತೆ ಉಡುಪಿನ ಕೃಷ್ಣ ಸುತ್ತು ಸುಳಿದು ಸಲಹೆನ್ನ ॥ 1 ॥

ಮಟ್ಟತಾಳ

ಸುಖಪೂರ್ಣ ಜ್ಞಾನಪೂರ್ಣ ಸುಖ ತೀರ್ಥರ ಪ್ರಿಯ
ಭಕುತ ವತ್ಸಲದೇವ ಬಂಧಕ ಮೋಚಕ
ಶಕುತ ಲಕುಮಿ ಮನೋಹರ ರಾಜ್ಯರಾಜೇಶ್ವರ
ಮುಕುತಿ ದಾಯಕ ಮೂಲ ಅವತಾರ ಅಭೇದ
ನಖಶಿಖ ಪರಿಪೂರ್ಣ ನರ ಸಖ ನಿರ್ದೋಷ
ಸಕಲರಲ್ಲಿ ವ್ಯಾಪ್ತ ಸಕಲ ಸಾರ ಭೋಕ್ತ
ಭಕುತಿ ಇಂದ ಲಭ್ಯ ಬಡವ ಬಲ್ಲಿದ ನೆನ್ನ
ಮಕ್ಕಳ ಮಾಣಿಕ್ಯ ದೇವಕ್ಕಿ ಪುಣ್ಯೋದಯ
ರಕ್ಕಸಾಂತಕ ರಾಮ ಪ್ರಾಕೃತ ರಹಿತ
ಸಕಲ ಗುಣ ಪೂರ್ಣ ಗೋಪಾಲ ವಿಠ್ಠಲ
ಶ್ರೀ ಕೃಷ್ಣ ಉಡುಪಿ ನಿವಾಸ ಸಲಹೋ ನಮ್ಮ ॥ 2 ॥

ರೂಪಕತಾಳ

ದ್ವಾಪರದಲಿ ಅಂದು ಅವತರಿಸಿದ ಹರಿಯೆ
ಗೋಪಾಲ ರೊಡನಿನ್ನ ಆಡಿ ಆಕಳ ಕಾಯ್ದು
ಅಪ್ರಮೇಯ ಪೂರ್ಣ ಪೂರ್ಣ ಮಾಡಲಿಬೇಕು ಎಂತೆಂದು
ಈ ಪೃಥ್ವಿಯಲ್ಲಿ ಈಸ್ಥಳದಲ್ಲಿ ನಿಂತಿನ್ನು

ಗೋಪಾಲಕರೆ ಗೋವುಗಳ ಅಂಧಾದವರ
ಸುಪರಮ ಸನ್ಯಾಸಿಗಳ ಮಾಡಿ ಸೃಷ್ಟಿಸಿ
ತಾ ಪೂಜೆ ಇವರಿಂದ ಸರ್ವ ಸಾಧನಗಳನ
ಶ್ರೀಪತಿ ಇವರಿಂದ ನಿರತ ಸರ್ವ ಸಾಧನಗಳನ
ತಾ ಪಾಲಿಸುವ ಸಂಭಾಷ ಸಂದರುಶನದಿ
ನಾ ಪ್ರತಿ ಕಾಣೆ ಈ ಕ್ಷೇತ್ರಕ್ಕೆ ಮಿಗಿಲೆಂದು
ಶ್ರೀ ಪುರುಷೋತ್ತಮ ಉಡುಪಿನ ಸಿರಿ ಕೃಷ್ಣ
ಅಪಾರ ಮಹಿಮ ಗೋಪಾಲ ವಿಠ್ಠಲ ॥ 3 ॥

ಝಂಪೆತಾಳ

ಅಣುಮೂರುತಿ ಇದೆ ಘನ ಮೂರುತಿ ಇದೇ
ಅಣು ಘನ ಪರಿಪೂರ್ಣ ಮೂರುತಿ ಇದೆ
ವನಜ ಭವಾದಿಗಳ ಮನಕೆ ಧೇಯವು ಇದೇ
ಸನಕಾದಿಗಳ ಮನಕೆ ಒಪ್ಪುವದಿದೇ
ಅಣಿಮಾದಿ ಅಷ್ಟಾಂಗ ಯೋಗ ಸಾಧನವುಳ್ಳ
ಮುನಿಗಳ ಮನಕೆ ಪೊಳೆಯುತಲಿಹದಿದೆ
ಕನಸು ಜಾಗ್ರತೆ (ಸ್ವಪ್ನ) ಸುಷುಪ್ತಿ ವ್ಯಾಪಾರ
ದಿನಗಳನ್ನು ನಡೆಸುವ ಮೂರ್ತಿ ಇದೇ
ಫಣಿ ಫಣದಲ್ಲಿ ನಾಟ್ಯವಾಡಿ ಭಕ್ತರ ಕಾಯ್ದ
ಮನುಜ ರೂಪವ ತಾಳ್ದ ಮೂರ್ತಿ ಇದೇ
ಜನನಿ ಗಾಟವ ತೋರಿ ಜನರ ತೋಷ ಬಡಿಸಿದ
ಘನ ಕರುಣಾಕರ ಮೂರ್ತಿ ಇದೇ
ವನಧಿ ತೀರವಾಸ ಗೋಪಾಲವಿಠ್ಠಲ
ಚಿನುಮಯ ಮೂರ್ತಿ ಸುಖ
ಮುನಿ ಮನಮಂದಿರ ನಿವಾಸ ॥ 4 ॥

ತ್ರಿವಿಡಿತಾಳ

ಚಿತ್ತಜನಯ್ಯ ಕಾಣೋ ಚಿಂತನಿಗೆ
ಭಕ್ತ ವತ್ಸಲ ಕಾಣೋ ಅಭಿಮುಖಿಕೆ
ನಿತ್ಯ ವ್ಯಕ್ತನು ಕಾಣೋ ನಿರುಪಾಧಿಕರಿಗೆಲ್ಲ

ನಿತ್ಯಾ ವ್ಯಕ್ತ ವಿಷಯಾಸಕ್ತರಿಗೆ
ಸತ್ಯ ರೂಪನು ಕಾಣೊ ಭೃತ್ಯ ಜನರಿಗಿನ್ನು
ಮೃತ್ಯುರೂಪನು ಕಾಣೊ ದೈತ್ಯಜನಕೆ
ಮತ್ತೆ ಮಧ್ಯಮರಿಗೆ ಮನುಜ ರೂಪದಿ ತೋರ್ಪ
ಮತ್ತಾ ಜಾರಾ ಸ್ತ್ರೀಯರಿಗೆ ಜಾರ
ಸುತ್ತ ಆಡಿದ ಗೋಪಾಲಕರಿಂಗೆ ಗೋವಳ
ತತ್ತದಾಕಾರವು ವಂದರಲ್ಲೇ
ಪ್ರತ್ಯೇಕ ಅವರವರ ಇಷ್ಟ ರೂಪಕನಾಗಿ
ನಿತ್ಯ ತೋರುವ ನಿಲಕೆ ಜೀವರಿಗೆ
ಮುಕ್ತಿ ದಾಯಕ ಗೋಪಾಲವಿಠ್ಠಲ
ಪ್ರತ್ಯಕ್ಷ ನೋಡಿಲ್ಲಿ ಬಲ್ಲವರಿಗೆ ॥ 5 ॥

ಅಟ್ಟತಾಳ

ಇದೇ ಶ್ವೇತದ್ವೀಪ ಇದೇ ಅನಂತಾಸನ
ಇದೇ ಶ್ರೀ ವೈಕುಂಠ ಇದೇ ಮುಕ್ತ ಭಾಗ
ಇದೇ ಮಧ್ವ ಸರೋವರ ವಿಧಿಯಿಂದ ಮಾಡಿದ್ದು
ವಿಧಿ ಕಾಣೋ ವಿರಜಾನದಿಯ ಸ್ನಾನಕೆ ಮುಂದೆ
ಪದುಮೆ ಇಂದರ್ಥಿಲಿ ಪೂಜಿತ ಮೂರ್ತಿದು
ವಿಧಿ ಇಂದ ನಿರ್ಮಿತವಾದ ಮೂರ್ತಿಯು ನೋಡಾ
ಅಧಿಕದೀಕವಾಹ ಮೂರ್ತಿ ಅಪ್ರತಿ ಈಕ್ಷೇತ್ರ
ಬುಧರೇವೆ ಬಲ್ಲರು ವಿಧಿಸಿ ನೋಡಲು ಇನ್ನು
ಮದನ ನಯ್ಯ ಚಲ್ವ ಗೋಪಾಲವಿಠ್ಠಲ
ಸದಾ ನಮ್ಮ ಸಲಹೋ ಶ್ರೀ ಉಡುಪಿನ ಸಿರಿ ಕೃಷ್ಣ ॥ 6 ।

ಆದಿತಾಳ

ನಮೊ ನಮೋ ಪಾಂಡವ ಪಕ್ಷ ಪಾತಿಯೆ
ನಮೊ ನಮೋ ಅಗಣಿತ ಗುಣಗಣಾಂಬುಧೆ
ನಮೊ ನಮೋ ನಿರ್ದೋಷ ನಿಜ ಆನಂದ
ನಮೊ ನಮೋ ಪ್ರಾಕೃತ ಗಂಧ ವಿದೂರನೆ
ನಮೊ ನಮೋ ನಿತ್ಯ ನಿರಂಜನ ಪೂರ್ಣ

ನಮೊ ನಮೋ ಸ್ವಗತ ಭೇದ ವಿವರ್ಜಿತ
ನಮೊ ನಮೋ ನಿರ್ಜಿತ ಮಾಯ ಸುವರ್ಗ
ನಮೊ ನಮೋ ಕಾರುಣ್ಯ ಕಾಪಟ್ಯ ರಹಿತ
ನಮೊ ನಮೋ ವಿಷ್ಣು ಸಾಕಾರ ಚಲುವ
ನಮೊ ನಮೋ ನಿತ್ಯತೃಪ್ತ ನಿರಾಶ್ರಯ
ನಮೊ ನಮೋ ಸಿರಿ ಅಬುಜ ಭವ ವಂದಿತ
ನಮೊ ನಮೋ ಸರ್ವ ಜೀವ ಜಡ ವ್ಯಾಪ್ತ
ನಮೊ ನಮೋ ಸೃಷ್ಟ್ಯಾದಿ ಅಷ್ಟ ಕರ್ತರಾಜ
ನಮೊ ನಮೋ ಸುರನದಿ ಜನಕ ಹೇ ತಾತ
ನಮೊ ನಮೋ ಗೋಪಾಲ ವಿಠ್ಠಲ ಮೂರುತಿ
ನಮೊ ನಮೋ ಜಯ ಜಯ ಉಡುಪಿನ ಸಿರಿ ಕೃಷ್ಣ ॥ 7 ॥

ಜತೆ

ನೋಡಿದವನಲ್ಲ ನಾ ನಿನ್ನ ನಿಜರೂಪ
ನೋಡಿಸೋ ಕರುಣದಿ ಗೋಪಾಲ ವಿಠ್ಠಲ ॥ 8 ॥

## ಸುಳಾದಿ 28

ಧ್ರುವತಾಳ

ಇಂದಿರಾದೇವಿ ತಂದೆ ವಿಠ್ಠಲ ನರ
ವಿಂದ ಚರಣಕ್ಕಿನ್ನು ಅಂದಿಗೆ ಗೆಜ್ಜೆ ಆದೆ
ಹೊಂದಿಕೆ ಯಾದ ಊರು ಜಾನು ಕೈಯ ಮೇಲೆ
ಚಂದಾದ ಸ್ವರೂಪ ಪೀತಾಂಬರೊಡ್ಯಾಣಾದೆ
ಮಂದರ ಧರ ನೊಕ್ಷಸ್ಥಳದಲಿ ನೀನಿಂದೆ
ಕಂದರದಲಿ ಚಿತ್ರ ವೈಚಿತ್ರ ಪರಿ ಪರಿ
ಗಂಧವು ಪದಕ ಹಾರಂಗಳು ಪುಷ್ಪ ತುಳಸೀ
ಇಂದೊಪ್ಪುವ ಅಲಂಕಾರನಂದ ಶೋಭಿತಳಾದೆ
ಒಂದೊಂದು ಹಸ್ತದಲಿ ಆಯುಧಗಳಾದೆ
ಚಂದುಳ್ಳ ಕಡಿಯ ತೋಳ್ಬಂದಿ ಭುಜಕೀರ್ತಿ
ಕುಂದು ಇಲ್ಲದೆ ಕರನ ಕುಂಡಲ ನಾನಾಪರಿ
ಅಂದವಾದರಳೆಲೆ ಸುಂದರ ಕಿರೀಟವು
ಸಂದಿ ಸಂದಿಗೆ ನಾನಾ ಭರಣಾಲಂಕಾರಳಾದೆ

ಇಂದಿರೇಶನ ಪ್ರತಿ ಅವಯವ ಗಳಲಿ
ಇನ್ನು ಇಂದಿರೇ ಪ್ರತಿ ಪ್ರತಿ ವಸ್ತುವಾದೆ
ಕಂದರ್ಪ ನಯ್ಯನ ಆನಂದದಿ ಬೆರೆದು ಸುಖ ಸುರಿದೆ ನೀ
ಒಂದರ ಘಳಿಗೆ ಅಗಲಾದೆ ಇನ್ನು ಕಂದಬೊಮ್ಮನು ಮತ್ತೆ
ನಂದಿವಾಹನ ಅಮರೇಂದ್ರ ಸನಕ ಸನಂದರಿಂದ ಲಿನ್ನು
ಕುಂದಿಲ್ಲದೋಲಗವ ನಂದಾದಿ ಕೊಳುತ ಮುಕ್ತ
ರಿಂದ ಶೇವಿತಳಾಗಿ ಎಂದೆಂದು ಬಿಡದಲೆ
ಸಂದೇಹ ವಿಲ್ಲದೆ ಗೋಪಾಲವಿಠ್ಠಲನ್ನ
ಪೊಂದಿ ಸುಖದಲ್ಲಿ ಚಂದದಿ ಮೆರೆದೆ ॥ 1 ॥

ಮಟ್ಟತಾಳ

ಹರಿ ಅನಿರುದ್ಧನಾಗೆ ಶಿರಿ ಶಾಂತಿದೇವಿ ಯಾದೆ
ಹರಿ ಪ್ರದ್ಯುಮ್ನ ನಾಗೆ ಶಿರಿ ಕೃತಿ ದೇವಿ ಆದೆ
ಹರಿ ಸಂಕರುಷಣ ನಾಗೆ ಶಿರಿ ಜಯಾ ದೇವಿ ಆದೆ
ಹರಿ ವಾಸುದೇವ ನಾಗೆ ಶಿರಿ ಮಾಯಾ ದೇವಿ ಆದೆ
ಎರಡೆರಡವ ತಾರಕ್ಕೆ ಮರಳಿ ಮರಳಿ ಚತುರ ಅವತಾರಗಳು ಆದೆ
ಪರಿಪರಿ ಅವತಾರಕ್ಕೆ ಪರಿಪರಿ ರೂಪಳಾದೆ
ಶರಣರ ಪಾಲಕ ಗೋಪಾಲ ವಿಠ್ಠಲನ್ನ
ಚರಣ ಕಮಲವನ್ನು ಪರಿಪರಿ ಸೇವಿಸುತ ॥ 2 ॥

ತ್ರಿವಿಡಿತಾಳ

ಧರಿಯ ರೂಪದಿ ಹರಿಗೆ ಕುಳ್ಳಿರ ಗದ್ದಿಗೆಯಾದೆ
ಮೆರೆವ ಅವ್ಯಾಕೃತ ಗಗನವೇ ಕೊಡೆಯಾದೆ
ಎರಡೆರ ಡೊಂದು ರೂಪದಿ ಹರಿ ಇತ್ತಲು ರಮಾ
ಮರಳಿ ಶ್ರೀರೂಪದಿ ಹರಿಯಿಂದ ಬೆರೆದು
ಸ್ವರಮಣನ ರಮಿಸಿ ಯೋಗ ನಿದ್ರೆಯ ಮಾಡಿ
ಹರಿ ಆಜ್ಞೆದಿಂದ ಅಂಭ್ರಣಿ ರೂಪಳಾದೆ
ಪರಿಪರಿ ಶೃತಿ ಇಂದ ಸೃಷ್ಟಿಯ ರಚಿಸೆಂದು
ಹರಿಯ ಕೊಂಡಾಡಿದೆ ಹರುಷದಿ ನಲಿದೆ
ಹರಿಯ ನಾಭಿಯಲಿನ್ನು ಸರಸಿಜ ರೂಪದಿ

ವಿರಿಂಚಿಯನ ಪಡೆದೆ ಕರುಣಾಕರ ಮತ್ತೆ
ಅರಿವಂತೆ ಅಜಗಿನ್ನು ತಪ ತಪ ವೆಂದು
ಅಶರೀರ ಹಿತನುಡಿದೆ ಅವ್ಯಾಕೃತಕೆ ಅಭಿಮಾನಿ
ಪರಿಪೂರ್ಣ ಗುಣ ಭರಿತ ಗೋಪಾಲವಿಠ್ಠಲನ್ನ
ಕರುಣದಿಂದೆರೆಡೆರಡು ಸೃಷ್ಟಿಯ ರಚಿಸಿದೆ ॥ 3 ॥

ಅಟ್ಟತಾಳ

ಹರಿ ಆಜ್ಞೆದಿಂದಲಿ ಜಡ ಪ್ರಕೃತಿ ದೆಶೆಯಿಂದ
ವರ ತ್ರಿಗುಣಾತ್ಮಕ ವಾದಂಥ ಮಹತತ್ವದ
ದರಿಂದ ವೈಕಾರಿಕ ತೈಜಸ ತಾಮಸವನ್ನು
ಭರಿತವಾದಂಥ ಅಹಂಕಾರ ತತ್ವ ಪರಿಪರಿ ಸೃಷ್ಟಿಸಿದೆ
ವರಮಾಯ ನೋವಿಲ್ಲದೆ
ಪರಮದಯಾಳು ಗೋಪಾಲ ವಿಠ್ಠಲನು
ಕರುಣಿಸುವನು ನೀ ಕರ ಪಿಡಿವವರ ॥ 4 ॥

ಆದಿತಾಳ

ಮಹತತ್ವ ದಶೆಯಿಂದ ಬೊಮ್ಮನ ಸೃಷ್ಟಿಸಿದೆ
ಅಹಂಕಾರ ವೈಕಾರಿಕದಿಂದ ಮನಸು ಇಂದ್ರಿಯಗಳಭಿಮಾನಿ ದೇವತೆಗಳನ್ನು
ಅಹಂಕಾರ ಪಂಚತನ್ಮಾತ್ರಿಯನು ಸೃಷ್ಟಿಸಿದೆ
ಅಹಂಕಾರ ತೈಜಸದಿಂದ ಚಕ್ಷುರಾದಿ ಇಂದ್ರಿಯಗಳನ್ನು ಎಲ್ಲ ಸೃಷ್ಟಿಸಿದೆ
ಅಹಂಕಾರ ತಾಮಸದಿಂದಲಿ ಪಂಚ
ಮಹಾ ಭೂತಂಗಳ ಸೃಷ್ಟಿಸಿದೆ
ಮೋಹದಿಂದ ಎಲ್ಲ ತತ್ವೇಶರ ಸೃಷ್ಟಿಸಿದೆ
ಆ ಹರಿ ಕರುಣಾ ಪೂರ್ಣ ಕಟಾಕ್ಷದಿ ಈ
ಮಹಾ ಜಗಕೆಲ್ಲ ಪ್ರೇಮದಿ ಸಲಹುವೆ
ಮೋಹನ್ನ ಮೂರುತಿ ಗೋಪಾಲವಿಠ್ಠಲನ್ನ
ಸಹಸಾ ವಿಲ್ಲದೆ ರಹಸ್ಯ ಪೂಜಿಪೆ ॥ 5 ॥

ಜತೆ

ನಮೊ ನಮೊ ನಿನ್ನ ಪಾದ ಕಮಲವೆ ಮೊರೆಹೊಕ್ಕೆ
ಮಮತೆ ಪುಟ್ಟಿಸೆನೆಗೆ ಗೋಪಾಲ ವಿಠ್ಠಲನಲ್ಲಿ ॥ 6 ॥

ಧ್ರುವತಾಳ **ಸುಳಾದಿ 29** ರಾಗ : ಸಾರಂಗ

ಒಂದು ನಿನ್ನ ಮೂರುತಿ ಬೊಮ್ಮಾಂಡದಿ ಇಪ್ಪುದು
ಒಂದು ನಿನ್ನ ಮೂರುತಿ ಬೊಮ್ಮಾಂಡ ಸುತ್ತಿಪ್ಪುದು
ಒಂದು ನಿನ್ನ ಮೂರುತಿ ಬೊಮ್ಮಾಂಡದ ಹೊರಗೆ
ಗಂಧಾ ಪೂಜಿಸಿದಂತೆ ಅವ್ಯಾಕೃತ ವ್ಯಾಪಿಸಿ
ಇಂದಿರೆ ಅಭಿಮಾನಿ ಆತತ್ತ್ವಾ ನಿತ್ಯಾವಸ್ತ
ಎಂದಿಗೆ ಅಲ್ಲಿ ಬಿಡದೆ ಇಪ್ಪಾ ಮಹಾ ಮೂರುತಿ
ವಂದೆ ನಿನ್ನ ಮೂರುತಿ ಮೂಲಾವತಾರ ಐಕ್ಯಾ
ಒಂದೇ ಬಲ ಜ್ಞಾನ ಆನಂದ ನಿರ್ದೋಷ
ಎಂದಿಗೂ ಜೀವ ಜಡದಿಂದ ಅಗಲದೆ ಇಪ್ಪ
ಸುಂದರ ವಿಗ್ರಹ ಗೋಪಾಲವಿಠ್ಠಲ
ನಿಂದು ಭಕುತರಲ್ಲಿ ಇಪ್ಪ ಕರುಣಿ ॥ 1 ॥

ಮಟ್ಟತಾಳ

ಸರ್ವಾಪರೋಕ್ಷಿ ಸರ್ವಜ್ಞಾನೆ
ಅರ್ವಾನಂದಾ ಗುಣಗಣ ಪರಿಪೂರ್ಣ
ಸರ್ವೋತ್ತಮಾ ಸಾಕ್ಷಾತಕಾರಾ
ಸರ್ವದಿ ವ್ಯಾಪ್ತಾ ಸರ್ವ ಚೇಷ್ಟಾ
ನಿರ್ವಿಕಾರಾ ನಿತ್ಯಾ ತೃಪ್ತಾ
ಗರ್ವ ಹರಾ ಗರುಡ ಗಮನ
ನಿರ್ವಧಿಕ ಅಂತರ್ಯಾಮಿ ರೂಪಾ
ಘನದಲ್ಲಿ ಅಣು ಅಡಕ ಮೂಲರೂಪದಿ
ಅಣು ಘನ ಕಾರ್ಯಗಳು ನಿನ್ನ ಭಕುತರಿಗಾಗಿ
ದಿನ ದಿನಗಳಲ್ಲಿ ಮಾಡುತಲೆ ಇಪ್ಪೆ
ಘನ ಅಣು ಪರಿಪೂರ್ಣ ಗೋಪಾಲ ವಿಠ್ಠಲಾ
ನಿನಗಲ್ಲದೀ ಶಕುತಿ ಭಣುಗುಗಳಿಗುಂಟೇ ॥ 2 ॥

ತ್ರಿವಿಡಿತಾಳ

ನಿಷೇಧಾ ವಿಶೇಷಾ ವಿಭಾಗ ಮಾಡಲಾಗಿ
ನಿಷೇಧಾ ವಿಶೇಷಾ ವಸ್ತು ನೀನೆ

ವೀಶೇಷಾ ನೀಶೇಷಾ ವಿಭಾಗ ಮಾಡಲಾಗಿ
ಸಾಶಿರಕೆ ಬೆಲೆ ನೀನೆ ಕಾಸಿಗೆ ಬೆಲೆ ನೀನೆ
ಲೇಸು ಹ್ರಾಸಕೆ ಎಲ್ಲಾ ಶೇಷಾ ನೀನೆ
ದೋಷರಹಿತ ಭಕ್ತ ಪೋಷ ಆವಲ್ಲಿದ್ದರು
ಕೇಶವಾಚ್ಯುತಾನಂತಾ ನಾಶರಹಿತ
ವಾಸುದೇವ ಮುಕುಂದ ಗೋಪಾಲವಿಠ್ಠಲ ದಾಸಾ
ದಾಸದಾಸರ ಪೊರೆವ ಭಾರ ನಿನ್ನದೊ ದೇವ ॥ 3 ॥

ಅಟ್ಟತಾಳ

ಗೋವಿಂದ ಗೋಪಾಲ ಗೋವರ್ಧನಧರ
ಗೋವಳ ರೊಡಿಯಾನೆ ಗೋವುಗಳ ಪಾಲ
ಜೀವ ಜಡದಿ ಭಿನ್ನ ಪಾವನ್ನ ಮೂರುತಿ
ಈವ ಕಾವ ಇಷ್ಟಾ ಯಾವತ್ತರಲಿ ವ್ಯಾಪ್ತಾ
ಕಾವ ಕರುಣಿ ರಂಗ ಗೋಪಾಲ ವಿಠ್ಠಲ
ಕೋವಿದರಿಗೆ ನಿನ್ನ ಕುರುಹು ತೋರಿರ್ವಿ ॥ 4 ॥

ಆದಿತಾಳ

ನಿನ್ನ ಇಚ್ಛೆ ಇಂದಲಿ ಜಗವ ಸೃಷ್ಟಿಸುವಿ
ನಿನ್ನ ಇಚ್ಛೆ ಇಂದಲಿ ಅವತಾರ ಮಾಡುವಿ
ನಿನ್ನ ಇಚ್ಛೆ ಇಂದಲಿ ಜಗವ ಪಾಲಿಸುವಿ
ನಿನ್ನ ಇಚ್ಛೆ ಇಂದಲಿ ಜಗವ ಸಂಹರಿಸುವಿ
ನಿನಗೆ ನೀನೆ ಪ್ರೇರಣಿ ಮಾಡುವಿ
ನಿನ್ನಿಂದ ನೀನೆ ಆನಂದ ಬಡುವಿ
ಭಿನ್ನ ವಸ್ತುವಿನಿಂದ ಇನ್ನಾಪೇಕ್ಷಯು
ಇನ್ನಿಲ್ಲ ಇನ್ನಿಲ್ಲ ಚಿನುಮಯ ನಿನಗೆ
ಇನ್ನು ಆವಾವ ಜೀವರುಗಳಿಗೆ
ಉನ್ನಾಹ ವ್ಯಕುತಿ ಮಾಡುವ ನೀನೆ
ಘನ್ನ ದಯಾನಿಧಿ ಗೋಪಾಲವಿಠ್ಠಲ
ನಿನ್ನ ಮಹಿಮೆಗೆ ನಾ ನಮೊ ನಮೊಯೆಂಬೆ ॥ 5 ॥

ಜತೆ

ಸ್ವಾತಂತ್ರ ಸ್ವಾಧೀನ ಪಾರತಂತ್ರಾದಿ ದೂರ
ಅತಂತ್ರರಾ ಪೊರೆಯೊ ಗೋಪಾಲ ವಿಠ್ಠಲ ॥ 6 ॥

## ಸುಳಾದಿ 30

ಧ್ರುವತಾಳ

ಹರಿಯ ಸೇವಿಸುವವ ಆವ ಪಾಮರನೆ ಮರದು
ಹರಿಯ ಸೇವಿಸುವವ ಅವ ಪಾಮರನು ಅಲ್ಲೆ
ಹರಿಯ ತಿಳಿಯದವನು ಅವನು ಜ್ಞಾನಿಯೆ ನೋಡಾ
ಹರಿಯ ತಿಳಿದವ ಪೂರ್ಣ ಅವನು ಜ್ಞಾನಿಯೆ ನೋಡಾ
ಹರಿಯೇ ಕರ್ತಾ ನಾ ಕರ್ತುನಲ್ಲಾ ನೆಂದವ ಜ್ಞಾನಿ
ಹರಿ ಕರ್ತು ನಾನು ಕರ್ತುನೆಂದವನು ಜ್ಞಾನಿಯೆ
ಹರಿಯೆ ಸ್ವಾತಂತ್ರ ನಾನಲ್ಲವೆಂದವ ಜ್ಞಾನಿಯೆ
ಹರಿಯೆ ಸ್ವಾತಂತ್ರ ನಾನು ಸ್ವಾತಂತ್ರನೆಂದವ ಜ್ಞಾನಿಯೆ
ಹರಿ ಮಾಡಿಸಲು ಮಾಡಿದೆ ನೆಂಬೋವ ಜ್ಞಾನಿಯೆ
ಹರಿ ಮಾಡಿ ಮಾಡಿಸಲು ಮಾಡಿದೆಂದವ ಜ್ಞಾನೆ
ಹರಿ ಮಾಡೆನ್ನೆ ಮಾಡಿದೆ ನೆಂದವನು ಜ್ಞಾನಿಯೆ
ಹರಿ ಮಾಡಿದರೆ ನಾ ಮಾಡೇನೆಂದೆವ ಜ್ಞಾನೆ
ಹರಿಯ ಕೂಡಾ ನಾನು ಮಾಡಿದೆಂಬವ ಜ್ಞಾನೆ
ಹರಿಯೆ ಮಾಳ್ಪವ ನಾನ್ಯಾತಕೆಲ್ಲೆಂದವ ಜ್ಞಾನೆ
ಹರಿಯ ನರಿಯದವ ಅವನು ಒಬ್ಬ ಜ್ಞಾನಿಯೆ
ಹರಿಯ ಬಲ್ಲೆನೆಂದವ ಅವನು ಒಬ್ಬ ಜ್ಞಾನಿಯೆ
ಹರಿಯೆ ಸರ್ವ ಚೇಷ್ಟಪ್ರದ ಗೋಪಾಲವಿಠ್ಠಲ ನರ
ಹರಿ ಎಂದರಿದವನು ನರನೆ ನರನೆ ನೋಡಾ ॥ 1 ॥

ಮಟ್ಟತಾಳ

ಮಂತ್ರ ಮಾಡಿದರೆನು ತಂತು ತೋರಿದರೇನು
ಎಂತೆಂತು ಕರ್ಮ ನಿರಂತರ ಮಾಡಲೇನು
ಚಿಂತನೆ ಹರಿ ಸ್ವತಂತ್ರ ಪರತಂತ್ರ
ಇಂತು ಜೀವೇಶರ ವಿವೇಕ ನರಿಯದಾ

ನಂತ ಜನುಮಗಳು ಆಗಿ ಬಂದಿದ್ದರು
ಸಂತೋಷವು ಕೊಡವು ಸಾಧನ ಕರ್ಮಗಳು
ದಂತಿ ಮಜ್ಜನ ಕಾಣೋ ಹರಿಯ ತಿಳಿಯದ ಕರ್ಮ
ಗ್ರಂಥಿಬಿಡುವದಲ್ಲ ಅಜ್ಞಾನದ ಸರಕು
ನಿಂತು ನಿದ್ರೆ ಮಾಳ್ಪನಂತೆ ಕೊನಿಗೆ ಸೌಖ್ಯ
ಚಿಂತಿತ ಫಲದಾತ ಗೋಪಾಲ ವಿಠ್ಠಲ
ನೆಂತೆಂತುಪಾಸ್ಯರಂತತಂತೆ ಫಲವೀವ ॥ 2 ॥

ರೂಪಕತಾಳ

ಚೇತನರೆ ಸರಿ ಜೀವ ಚಲನೆ ಮಾಡಿಸೆ ಹರಿ
ಚೇತನವೆ ಜಡತುಲ್ಯ ಚಲನೆ ಮಾಡಿಸದಿರಲು
ಚೇತನಾ ಚೇತನಕೆ ಸಾಮ್ಯವೆ ಸರಿ ಹರಿವಿನಹ
ಯಾತರಿಂದಲಿ ನೋಡು ಜ್ಞಾನಿಚ್ಛೆ ಪ್ರಯತ್ನವು
ಪಾತಕ ಪುಣ್ಯಕ್ಕು ಹರಿಯೆ ಪ್ರೇರಕನೆಂದು
ತಾ ತಿಳಿದು ಇಪ್ಪವಗೆ ಯಾತನೆಂಬದು ಎಲ್ಲೊ
ತಾ ತಿಳಿಯದಲೆ ಪುಣ್ಯ ಮಾತುರಕೆ ನಾ ನೆನಲು
ಪಾತಕವನೆ ಮಾಡಿ ಪುಣ್ಯವಾದರು ನೋಡು
ಪತಿವ್ರತ ಸ್ತ್ರೀ ತನ್ನ ಪತಿ ಆಜ್ಞದಿಂದ ವಿ
ಜಾತಿ ಪುರುಷನ್ನ ಅನುಸರಿಸೆಂದು ಆಜ್ಞ ಕೊಡೆ
ಮಾತು ಪತಿಯದು ನಡಿಸೆ ಪಾತಕಾವಳಿಗುಂಟೆ
ಯಾತನಿಗೆ ಸರಿ ಯೋಗ್ಯ ಕರ್ಮ ಮಾಡಿದರಾಗೆ
ಪಾತಕಿಲ್ಲವು ನೋಡು ನೋಡಿ ನೋಡು
ಜ್ಯೋತಿರ್ಮಯೆ ಮೂರ್ತಿ ಗೋಪಾಲ ವಿಠ್ಠಲ
ಯಾತರವ ನಾನಲ್ಲ ಎಲ್ಲ ನಿನ್ನಾಧೀನ ॥ 3 ॥

ಝುಂಪೆತಾಳ

ಹರಿಮಾಡೆನಲು ಮಾಡೆನೆಂಬುವಗೆ ಸಂಸಾರ
ಹರಿಯೆಂಬುವದು ಲಕ್ಷ ಹರದಾರಿ ಜಲವುದ್ದ
ಶರಧಿಂದ ಕಡೆ ಬೀಳಲರಿಯಾ ನವನೆಂದಿಗು
ಹರಿಯು ತೋರದು ಅವಗೆ ಎಂದೆಂದಿಗು
ಹರಿ ಕೂಡ ನಾನು ಮಾಡಿದೆನೆಂಬುವಗೆ

ಶರಧಿ ಹರಗೋಲು ಹುಟ್ಟಿಲ್ಲದ್ಹಾಕಿದಂತೆ
ಹರಿ ಮಾಡಿಸಲು ಮಾಡೆನೆಂಬುವಗೆ ಭವಶರಧಿ
ಹರ ಗೋಲಿಟ್ಟು ಹುಟ್ಟು ಹಾಕಿದಂತೆ
ಹರಿ ಮಾಡಿಸಲು ನಾನು ಮಾಡಿದೆ ನೆಂಬುವನಿಗೆ
ಶರಧಿ ಅರಕಾಲು ಪರಿಮಾಣ ಜಲವು
ಹರಿಯ ಕರ್ತೃತ್ವವು ಅರಿದ ಹಾಗೆಲ್ಲ ಭವ
ಶರಧಿ ಬತ್ತುವದಿನ್ನು ಅರಿದವರಿಗೆ
ಹರಿ ಮಹಾರಾಜ ಗೋಪಾಲವಿಠ್ಠಲ ತನ್ನ
ಅರಿದಂತೆ ಅರಿವ ಅರಿದಿರುವುವರಿಗೆ ॥ 4 ॥

ತ್ರಿವಿಡಿತಾಳ

ಮರದು ಮಾಡಿದ ಕರ್ಮ ಮಹಾಮಹತ್ತಾದರು
ಹುರುದು ಬೀಜವ ಬಿತ್ತಿ ಫಲ ಆಪೇಕ್ಷಿಸಿದಂತೆ
ದೊರಕಿಸಿ ಕೊಡದಿನ್ನು ಯೋಗ್ಯ ಗತಿಯು ನೋಡಾ
ಮರಳಿ ಸಂಸಾರದಿ ತಂದಿಡುವದು
ಅರಿದು ಮಾಡಿದ ಕರ್ಮ ಅಲ್ಪವಾದರು ನೋಡು
ಪರಮತ್ಯುತ್ತಮವಾದ ಫಲ ಕೊಡುವದು
ಸರಿ ಬಿಡು ಹರಿ ಅರಿದು ಕುಕರ್ಮವನ್ನೆ ಮಾಡೆ
ಮರದವಾನಂತೆ ಮರಳಿ ಫಲಯ್ಯೆದು
ಕುರುಡ ಜನ್ಮಾರಭ್ಯ ಕುರಿತು ಅವಗೆ ಬಂದು
ಗುರುತು ಪೇಳಲೆನ್ನೆ ಅದರ ಕುರುಹ ನರಿವಾನೆ
ಅರಿದು ಬಹುದಿನ ನಾನಾ ಅರ್ಥವು ಮಧ್ಯ
ಕುರುಡ ನಂತಿಪ್ಪನ ಕುರಿತು ಅಣಕಿಸಿ ಒಂದು
ಗುರುತು ತೋರಿ ಅದರ ಕುರುಹ ಪೇಳೆನನ್ನೆ ಹುಟ್ಟು
ಗುರುಡ ನಂದದಿ ತಾನು ಹುಡಿಕ್ಯಾಡುವನೆ ನೋಡ
ಶರಣ ಜನರ ಪಾಲಾ ಗೋಪಾಲ ವಿಠ್ಠಲ ತನ್ನ
ಅರಿದವರ ಹಿಂದೆ ತಿರುಗುವ ಕ್ಷಣ ಬಿಡದೆ ॥ 5 ॥

ಅಟತಾಳ

ಕರ್ತೃತ್ವವೆಂಬದು ಜೀವ ಸ್ವರೂಪವು
ಹತ್ತಿ ಇಪ್ಪದು ನೋಡು ಅನಾದಿ ಇಂದಲಿ ನಿತ್ಯ
ದತ್ತವಾಗಿದೆ ಈಶನಿಂದ ವೆಂಬ ಮಾತು

ಅರ್ತು ನೋಡಿ ಹರಿಯಹೊರ್ತು ಆಗುವದಲ್ಲಾ
ಮರ್ತರೆ ಮರೆವುವ ಅರ್ತರೆ ಅರುವುವ
ಕರ್ತು ಕಾರ್ಯತಾ ಸರ್ವಸ್ವಾತಂತ್ರ ಹರಿ ತಾನು
ಸೂತ್ರ ನಾಟಕ ಸರ್ವ ಚೇಷ್ಠಿತಾ ಮಾಡಿಸೆ
ಕೀರ್ತಿ ಅಪಕೀರ್ತಿ ಜೀವರ್ಗೆ ತಂದೀವ
ಸ್ವಾರ್ಥಪಾರ ರಹಿತ ಗೋಪಾಲ ವಿಠ್ಠಲ
ಆರ್ತೀತರಿವಾ ಅರಿದ ಭಕ್ತರ ಮನದ ॥ 6 ॥

ಆದಿತಾಳ

ಮಾಡಲಿ ಬೇಕು ಎಲ್ಲ ಮಾಡಿಲ್ಲವೆನಬೇಕು
ನೋಡಲಿ ಬೇಕು ಎಲ್ಲ ನೋಡಿಲ್ಲವೆನಬೇಕು
ಬೇಡಲಿ ಬೇಕು ನಾನೇ ಬೇಡಿಲ್ಲ ವೆನಬೇಕು
ಓಡಲಿಬೇಕು ನಾನೆ ಓಡಿಲ್ಲೆನಬೇಕು
ಆಡಲಿ ಬೇಕು ನಾನೆ ಆಡಿಲ್ಲ ವೆನಬೇಕು
ನೀಡಲಿಬೇಕು ನಾನೆ ನೀಡಿಲ್ಲ ವೆನಬೇಕು
ಕೇಡುಲಾಭಕೆ ಮನವ ಕೆಡಿಸದೆ ಒಂದೇರೀತಿ
ನೋಡಿದವರಿಗೆ ಉನ್ಮದನಂತೆ ತೋರುತ್ತ
ಗೂಢನಾಗಿ ಹರಿಯ ಗುಣಗಳ ಕೊಂಡಾಡುತ್ತ
ರೂಢಿಲಿ ಈ ವಪುವನ್ನು ಮಾಡಿದೆಲ್ಲ ಸಾಧನ
ಪಾಡಿದವರ ಪ್ರಾಣ ಗೋಪಾವಿಠ್ಠಲ ತಾನು
ನೋಡು ಈ ಪರಿ ಇದ್ದವಗೆ ಮಾಡುವ ಗತಿಗೆ ಹವಣಿ ॥ 7 ॥

ಜತೆ

ಸಕಲ ಸಾಧನ ಹರಿಯಾಧೀನ ತಿಳಿವದೆ ಸುಖ
ವೃಕೋದರ ನೊಡಿಯ ಗೋಪಾಲ ವಿಠ್ಠಲ ವೊಲಿವಾ ॥ 8 ॥

## ಸುಳಾದಿ 31

ಧ್ರುವತಾಳ — ರಾಗ : ಮಧ್ಯಮ

ಹರಿಮಾಡಿದಂತೆ ಎಲ್ಲ ಮಾಡುವೆನಯ್ಯಾ ನಾನು
ಹರಿ ನೋಡಿಸಿದದೆಲ್ಲ ನೋಡುವೆನಯ್ಯಾ ನಾನು
ಹರಿ ಕೇಳಿಸಿದ ರಿನ್ನು ಕೇಳುವೆನಯ್ಯಾ ನಾನು

ಹರಿ ಉಂಡರಾಯಿತಿನ್ನು ಉಣುವೆನಯ್ಯಾ ನಾನು
ಹರಿ ನುಡಿಸಲಾಗಿನ್ನು ನುಡಿವೆನಯ್ಯಾ ನಾನು
ಹರಿ ಪಿಡಿದರೆ ನಾನು ಪಿಡಿವೆನಯ್ಯಾ ನಾನು (ನೋಡು)
ಹರಿ ಕೊಡಿಸಿದಡೆ ಆನು ಕೊಡುವೆ ಏನಾದದ್ದು
ಹರಿ ನಡಿಸಿದಾಡಾನು ನಡಿವೆ ನಾನಾಕಡಿಗೆ
ಹರಿ ನಿಂತಡಾಯಿತೆ ನಿಲ್ಲುವೆನಯ್ಯಾ ನಾನು
ಹರಿಯು ಮನಸು ಮಾಡೆ ಮನಸು ಮಾಡುವೆ ನಾನು
ಹರಿಯು ದ್ವೇಷವು ಮಾಡೆ ಆನು ದ್ವೇಷವು ಮಾಳ್ಪೆ
ಹರಿ ಮೋಹಿತನಾಗೆ ಆನು ಮೋಹಿಪೆನಯ್ಯಾ
ಹರಿ ಜಾಗೃತ ನಾಗೆ ಆನು ಜಾಗೃತನಾಹೆ
ಹರಿ ಮರದಡಾಯಿತೆ ಮರವುವೆನಯ್ಯಾ ನಾನು
ಹರಿ ನೆನಿಸಲ್ಯೆನಗೆ ನೆನಪು ಆಗುವದು
ಹರಿ ಕಾಮನ ಮಾಡೆ ಆನು ಕಾಮನ ಮಾಳ್ಪೆ
ಹರಿ ಇಚ್ಛೆ ಗೊಂದಕನ್ನ ಪ್ರತಿಕೂಲನಲ್ಲ ನಾನು
ಹರಿ ಪೂರ್ಣಶಕ್ತಿ ಗುಣ ಶರಧಿ ಕಾಣಯ್ಯಾ ನಿರುತ
ಹರಿ ನಿರ್ದೋಷ ಜ್ಞಾನಾನಂದ ಪರಿಪೂರ್ಣ ದೇವ
ಹರಿ ಪೂರ್ಣ ಕಾಮ ಆನು ಅತ್ಯಂತ ಅಲ್ಪ ನೀರ
ಹರಿಯು ಹೋದಾಗೆ ಯೆಲ್ಲ ತೃಣವು ಪೋಗುವದಯ್ಯಾ
ಹರಿಯೆ ಸ್ವಾತಂತ್ರ ಆನು ಅಸ್ವಾತಂತ್ರ
ಹರಿ ಸರ್ವ ವ್ಯಾಪ್ತ ಮೂರ್ತಿ ಗೋಪಾಲವಿಠ್ಠಲ
ಹರಿಯೆ ಭಕುತರ ಮನದ ಸಿರಿಯೆ ಹೇ ಎನ್ನ ಧೊರಿಯೆ ॥ 1 ॥

ಮಟ್ಟತಾಳ

ಕರ್ತು ನಾನೆಂದರೆ ಹರಿಯ ಹೊರತಾಗಿನ್ನು
ವ್ಯರ್ಥ ನೋಡು ಏನು ಮಾಡಿದ ಕರ್ಮವು
ಮೃತ್ಯು ತನಗೆ ತಾನು ತಂದಕೊಂಡವ ನಾಹಾ
ಆರ್ತಿ ಅವನಿಗೆ ನಾಶವಾಗದಿನ್ನು
ಕರ್ತು ನಾನಲ್ಲವೆನೆ ಸಾಧನಕೆ ಫಲವೇನು
ಪ್ರತ್ಯಕ್ಷಕೆ ಬಾಧೆ ಮಿಥ್ಯಾಜ್ಞಾನಿಯು ಅವ
ಕರ್ತೃತ್ವ ವೆಂಬೋದು ಜೀವ ನಿಷ್ಟವು ನೋಡು

ಶೃತ್ಯರ್ಥಗಳಲ್ಲಿ ಸಿದ್ಧವಾಗಿದೆ ನೋಡು
ಮರ್ತು ಹರಿಯ ಮಹಿಮೆ ನರಿಯದೆ ಜೀವನು
ಸ್ಫೂರ್ತಿ ಇಲ್ಲದ ಅಪಕೀರ್ತಿವಂತ ನಾಹಾ
ಕರ್ತು ಕಾರಯತಾ ವಿಷ್ಣು ಗೋಪಾಲವಿಠ್ಠಲನ್ನ
ಅರ್ತವ ಧನ್ಯನೋ ಕರ್ತುನೆಂಬವ ರೊಳಗೆ ॥ ॥ 2 ॥

ರೂಪಕತಾಳ

ಪೃಥಿವಿ ಮೇಲೆ ಒಂದು ರಥವೇರಿ ಬರಲಾಗಿ
ರಥಬರುತಿದೆ ನೋಡು ಎಂಬರು ಜನರೆಲ್ಲ
ರಥ ರಥಿಕರಿಬ್ಬರಿಗಾವಾಧಾರವು ಎಂಬ
ಮತಿ ಮನದಲ್ಲಿ ಉಳ್ಳರಾಗಿದ್ದರು ಸರಿಯೆ
ಪೃಥಿವಿಯೆ ರಥ ಹೊತ್ತು ಬಾಹದನರ್‍ಯಾತಕ್ಕೆ
ಪ್ರತಿತ ತೋರಿದರ್ಥ ಯತಾರ್ಥ ವೆನಬೇಡಿ
ಮತಿ ಎರಡು ಪ್ರಕಾರ ಕರ್ತೃತ್ವ ದೊಳಗಾಗಿ
ಸ್ಥಿತಿ ಅರಿತು ನೋಳ್ಪರು ಜ್ಞಾನಿಗಳು
ಖತಿ ಗೊಳದಿರಿ ಇನ್ನು ಕರ್ತೃತ್ವ ವೆಂಬದು
ಜಿತವಾಗಿ ಜೀವ ಜಡಗಳಿಗನಾದಿ ಸಿದ್ಧ
ಮತಿ ಉಳ್ಳ ಕರ್ತೃತ್ವ ಚೇತನ ನಿಷ್ಟವು ಇನ್ನು
ಮತಿ ರಹಿತ ಕರ್ತೃತ್ವ ಜಡದ ಸ್ಥಿತಿ
ಸತತ ಜಡ ಚೇತನಕೆ ಕರ್ತನೆನಿಸಿ ಹರಿಯು
ಗತಿ ಅರಿತು ಅವರವರ ಪಥದಲಿಡುವ
ಪತಿತ ಪಾವನ ರಂಗ ಗೋಪಾಲವಿಠ್ಠಲ
ಚತುರ ಕ್ರೀಡೆಯು ಮಾಳ್ಪ ಸರ್ವರೊಳಗೆನಿಂತು. ॥ 3 ॥

ಝಂಪೆತಾಳ

ಆತ್ಮ ಪರಮಾತ್ಮನ ವಿವೇಕ ಜ್ಞಾನವು
ಸೊತ್ತಮರ ಕರುಣದಿಂದಾಗಬೇಕು
ಸೋತ್ತಮರ ಪ್ರಸಾದ ವೆಂಬುವದು ಗತಿಗಿನ್ನು
ಮತ್ತೆ ತ್ರಿರಾವರ್ತಿ ಆಗಬೇಕು
ಉತ್ತಮ ಮಧ್ಯಮ ಅಧಮವಾಗಿ ಪ್ರಸಾದದಿಂ

ಉತ್ತಮವಾದ ಗತಿ ಪೊಂದಿಸುವದು
ಆತ್ಮ ತನ್ನ ಸ್ವರೂಪ ಜ್ಞಾನ ನೀವನೊ
ಮತ್ತದೆ ಅಧಮ ಪ್ರಸಾದವೆನ್ನು
ಸತ್ವ ಕರ್ಮಗಳಲ್ಲಿ ಪ್ರವರ್ತನಮಾಳ್ಪಾ
ಮತ್ತೆ "ಏನಂ ಮೋಚಯಾಮಿ" ಎಂದು
ನಿತ್ಯ ಅನಿತ್ಯ ಜ್ಞಾನ ಆವಾಗ ಪುಟ್ಟುವದು
ಮತ್ತೆ ಅವನೀಗ ಯಾತಕೆ ಸಲ್ಲ
ಸೋತ್ತಮ ಗುರು ಉಪದೇಶವೆಂಬುವದು ಅವನಿಗೆ
ಮತ್ತೆ ಅಶರೀರ ವಾಕ್ಯದಿ ಅಹುದು
ಪ್ರತ್ಯಕ್ಷ ಪೇಳರು ಅವನಿಗೆ ಇದು ನೋಡುವಾಚಾ
ಪ್ರಸಾದ ವೆಂದು ಕರಿಸೋದು
ಸತ್ಯ ಸಂಕಲ್ಪ ಗೋಪಾಲವಿಠ್ಠಲ ತನ್ನ
ಭಕತರ ಬಲ ಮಾಡದವರಿ ಗೊಲಿಯಾ ॥ 4 ॥

ತ್ರಿವಿಡಿತಾಳ

ಒಂದು ಕರ್ಮವು ಮಾಡೆ ಅವರಿಗೆ ಅದರಲ್ಲಿ
ಇಂದಿರೆ ಅಜಭವ ಪರಿವಾರ ಸಹವಾಗಿ
ನಿಂದು ತನಗೆ ಕರ್ಮ ಮಾಡಿಸಿದರೆಂಬ
ಚಂದದ ಸ್ಮೃತಿಇನ್ನು ಬಂದು ವೊದಗಿದರೆ
ಸಂದೇಹಸ್ಥನಾಗಾ ಸಂಸಾರಕೆ ದೂರಾ
ಬಂದ ಮೋಚಕ ಅದೆ ಮಧ್ಯಮ ಪ್ರಸಾದ
ಸಂದರ್ಶನ ಪೂರ್ವ ಸ್ವಚ್ಛಾದ ಕಿಂತಲಿ
ಹಿಂದಾಗುವವು ಸಂಚಿತಾಗಾಮಿ ಕರ್ಮವು
ಮಂದ ಮತಿಯ ನಾಶ ಮೊದಲಿಕಿಂತ
ಹಿಂದಾಗ ಈ ಮೇಲೆ ಹರಿಯ ದರಶನದಲ್ಲ್ಯಾ
ನಂದ ಭರಿತನಾಗಿ ಸಂಚರಿಸುವಾ
ಮುಂದೆ ಮುಂದತಿಶಯ ಸಮಾಧಿ ಸಾಧನ
ಪೊಂದಿ ಕೂಡ್ರುವನಾಹ ಜಡನಂದದಿ
ನಿಂದಿರದ ಬಾಹಿರ ಸ್ಮೃತಿ ಭೇರಿ ತಾಡಣವಾಗೆ
ಒಂದೇ ಅವನ ವ್ಯಾಪಾರ ವೃತ್ತಿ ನಾಶ

ಸಂದೇಹ ವಿಲ್ಲದಕೆ ಸದ್ಗುರು ಪ್ರಸಾದ
ಛಂದವಗಾಯಿತೆಂದು ಅರಿವದು
ವೃಂದಾರ ಕೇಂದ್ರ ಶ್ರೀಗೋಪಾಲ ವಿಠ್ಠಲ
ಒಂದು ಮಾತ್ರವು ಇಟ್ಟು ಸಕಲ ಸುಖ ಕೊಡುವ ॥ 5 ॥

ಅಟ್ಟತಾಳ

ಉತ್ತಮ ಪ್ರಸಾದ ಮತ್ತೆ ಲಕ್ಷಣ ಕೇಳು
ಪ್ರತ್ಯಕ್ಷವು ನೋಡು ಆವಾವ ವಿಷಯದಿ
ತತ್ವ ಸಂದೇಹ ವಿಲ್ಲ ಪ್ರಾರಬ್ಧ ಕರ್ಮವು
ಅತ್ಯಲ್ಪ ವಾಗಿನ್ನು ಕಡೆಗೆ ಆಗುವದು
ಹತ್ತಿದ ಲಿಂಗವು ಅಕಾರ್ಯ ಕಾರ್ಯವು
ಎತ್ತ ನೋಡಿದರು ಹರಿಯ ರೂಪಗಳ ಕಾಂಬ
ಚಿತ್ತವ್ಯಾಕುಲನಾಗ ಅಖಂಡ ಧ್ಯಾನದಿ
ಸತ್ಯಲೋಕದಿ ವಾಸವಾಗಿ ಅನಂತರ
ಮುಕ್ತನಾಗುವ ತಾನು ಹಿಂದೆ ನಾನಾ ಜನ್ಮ
ಸುತ್ತಿ ಬಂದದನೆಲ್ಲ ನೆನದು ತನ್ನ ಮನೋ
ವೃತ್ತಿ ನಾನಾ ಪರಿ ವ್ಯಭಿಚರಿಸಿದದೆಲ್ಲ
ಉತ್ತಮರ ಕೂಡ ಸುಖ ಪೇಳಿ ಕೊಳ್ಳುತ
ಉತ್ಕಟ್ವಾಗಿ ತಮಗಿಂದವರರಿಗೆ
ಮತ್ತೆ ತಮ್ಮೊಡನೆ ಭಕ್ತಿಯು ವೆಗ್ಗಳವ ಮಾ
ಡುತ್ತ ಆನಂದ ಭರಿತ ವಾಗುವ ನಾವ
ಸತ್ಯ ಸಂಕಲ್ಪ ಗೋಪಾಲ ವಿಠ್ಠಲನ್ನ
ಭಕ್ತರಲ್ಲಿ ಭಕ್ತಿ ಮುಕ್ತಿ ಸಾಧನವೆ ॥ 6 ॥

ಆದಿತಾಳ

ಹರಿಪರನೆನ್ನು ಹರಿ ವಾರ್ತಿಯು ಕೇಳು ಹರಿ ಮಾತುಗಳಾಡು
ಹರಿ ಮೂರ್ತಿಯ ನೋಡು ಹರಿ ಪೂಜೆಯ ಮಾಡು
ಹರಿಗಡ್ಡವ ಬೀಳು ಹರಿಪರನಾಗು
ಹರಿ ಭಕ್ತರ ಕೂಡು ಹರಿಯನ್ನೆ ಬೇಡು (ಬಿಡದಿರು)
ಹರಿಯ ಹೊರತಿನ್ನು ಹರಿಗೆ ಬೀಳದಿರು

ಹರಿಯ ಮಾಯದಿನ್ನು ಹರಿ ಗುಣವ ತಿಳಿ
ಹರಿಯ ಭಕುತರಿಂದ ಹರಿಯ ಮರೆದರಘಳಿಗೆ ಇರಸಲ್ಲ
ಹರಿಗರ್ಪಣ ಮಾಡು ಹರಿ ಮಾಡಿಸಿದ್ದೆಲ್ಲ
ಹರಿಯನ್ನು ತಿಳೀ ಗುರುಗಳಲಿನ್ನು
ಹರಿ ಧೇನಿಸಿ ಗುರುವಿನ ಗುರುತು ಮಾಡು
ಹರಿ ಸರ್ವ ಕರ್ತು ಗೋಪಾಲ ವಿಠ್ಠಲನ್ನ
ಸ್ಮರಣೆಯು ಕ್ಲೇಶ ಹರ ಸುಖಕರ ॥ 7 ॥

ಜತೆ

ನೋಡಿ ಮಾಡು ಕರ್ಮ ಫಲದಿ ವಿರಕ್ತನಾಗಿ
ಬೇಡು ಗೋಪಾಲ ವಿಠ್ಠಲ ನಂಘ್ರಿಗಳ ಸೇವಾ ॥ 8 ॥

ಧ್ರುವತಾಳ

## ಸುಳಾದಿ 32

ರಾಗ : ಭೈರವಿ

ನೀನು ಪಟ್ಟಿಸಲು ಪುಟ್ಟುವ ಜೀವ ನಾನಯ್ಯ
ನೀನು ಪೋಷಿಸಲು ಪೋಷಿಸಿಕೊಂಬ ನಾನಯ್ಯಾ
ನೀನು ಚಲಿಸಲು ಚಲಿಸುವೆನಯ್ಯಾ ನಾನು
ನೀನು ತಡಹಲು ತಡಹುವೆನಯ್ಯಾ ನಾನು
ನೀನು ನುಡಿಸಲು ನುಡಿವದು ನಾಲಿಗಿ
ನೀನೆ ವ್ಯಾಪ್ತನು ಸ್ಥೂಲ ಸೂಕ್ಷ್ಮ ದೇಹಗಳಲ್ಲಿ
ನೀನೆ ಕರ್ತ ಭೋಕ್ತಾ ನೀನೆ ಆಧಾರನು
ನೀನೆ ನೇಮಿಸಿದಂತೆ ಲಾಭ ನಷ್ಟಂಗಳು
ನೀನೆ ಸರ್ವ ಚರಾಚರ ಪ್ರೇರಕ ನೀನೆ
ನೀನೆ ಸ್ವಾತಂತ್ರ ಸ್ವಾತಂತ್ರ ಸ್ವಪ್ರಕಾಶ
ನೀನೆ ವ್ಯಾಪಕ ಸರ್ವ ಜೀವ ಜಗತ್ತಿನಲ್ಲಿ
ನೀನೆ ನೀನೆ ನೀನೆ ಗೋಪಾಲ ವಿಠ್ಠಲ ॥ 1 ॥

ಮಟ್ಟತಾಳ

ನಾನಾ ಯೋನಿಗಳಲ್ಲಿ ಜನಿಸಿ ಬರಲಿಕ್ಕೆ
ನಾನು ಸ್ವಾತಂತ್ರನೇನೊ ಪೇಳೆಲೊ ಹರಿಯೆ
ನೀನೆ ಸೃಷ್ಟಿಸುವೆ ಕರ್ಮ ನೆವನ ಮಾಡಿ

ಏನು ಕರ್ಮಕೆ ಸ್ವಾತಂತ್ರ ನಿನ್ನ ವಿನಹ ಉಂಟೆ
ನೀನೆ ಕಾರಣ ಯೋಗ್ಯತೆ ನಿನ್ನಾಧೀನ
ಏನಾದ ಕರ್ಮ ದ್ವಯ ನೀನೆ ಮಾಡಿಪುವಿ
ನೀನೆ ಮಾಡಿದೆಂದು ನಿನಗೆ ಸಮರ್ಪಿತವು
ನಾನು ನಿನ್ನಾಧೀನ ಗೋಪಾಲವಿಠ್ಠಲ ॥ 2 ॥

ರೂಪಕತಾಳ

ಪೃಥಿವಿಪತಿ ಒಂದು ರಥವು ನಿರ್ಮಾಣವು ಮಾಡಿ
ಅತಿ ಉತ್ತಮವಾದ ವಾಜಿಗಳನ್ನು ಕಟ್ಟಿ
ಮಥನಿಸಿ ಸೂತನೊಬ್ಬನಮಾಡಿ ಆಕ್ಷಣ
ರಥದ ಮಧ್ಯದಲ್ಲಿ ತಾ ಕುಳಿತ ಕಂದನ ಸಹ
ಪಥವನರಿತು ನಡಿಸೆಂದು ಸೂತಗೆ ಪೇಳೆ
ಯಥಾ ಯಥಾ ಮನದಿಚ್ಛೆ ಬಂದಂತೆ ನಡಿಸೋರು
ರಥಕೆ ಸ್ವಾತಂತ್ರ ಆವದು ಪೇಳೊ ಹರಿಯೆ
ರಥ ಎನ್ನ ದೇಹವು ಪೃಥಿವಿ ಪತಿ ನೀನು
ರಥಿಕರೆ ತಾತ್ವಿಕರು ಕಂದನಂದದಿ ನಾನು
ಅತಿ ಉತ್ತಮ ವಾಜಿಗಳೆ ಇಂದ್ರಿಯಗಳು
ಜತನಾಗಿ ಪಿಡಿದ ಹಗ್ಗವೆ ಎನ್ನ ಮನಸು
ಖತಿಂದ ಪಿಡಿದಟ್ಟುವ ಮಣಿಯೆ ಕರ್ಮಂಗಳು ಆ
ರಥಕೆ ಈ ರಥಕೆ ಭೇದ ಉಂಟೆ
ಹಿತದಿಂದ ಪೇಳೆಲೊ ರಥಾಂಗ ಪಾಣಿಯೇ ಪಾ
ರಥನ ಪಾಲಕನೆ ಗೋಪಾಲ ವಿಠ್ಠಲ ಕೇಳೊ
ಸತತ ನೀ ಪ್ರೇರಕ ಸಥೆ ನಿನ್ನದೊ ॥ 3 ॥

ಝಂಪೆತಾಳ

ಪತಿಯು ತಾನಾಗಿ ತನ್ನ ಸತಿಗೆ ಪಾಪಪುಣ್ಯದ
ವ್ರತವ ಮಾಡೆಂದು ನಿರೂಪ ಕೊಡಲು ಇದೇ
ಶೃತಿ ಸ್ಮೃತಿ ನಿರ್ಣಯಗಳು ಪೇಳುತಲಿವೆ
ಪತಿ ನೀನು ಎನಗೆ ಸತಿಯು ನಿನಗೆ ನಾನು
ಪತಿತ ಪಾವನ ಪಾಪ ನಿರ್ಲೇಪನಹುದು ಜಗ

ತೃಪ್ತಿ ಎಂದೆನಿಸಿಕೊಂಬ ಅತಿಶಯವು ನಿನಗಯ್ಯಾ
ಹಿತದಿಂದ ಕೇಳು ದೃಷ್ಟಾಂತರವು ಎನ್ನ
ಮತಿ ನೀ ಪ್ರೇರಿಸಿದಂತೆ ಪೇಳುವೆನೊ ಹರಿಯೆ
ಅತಿ ಸೀತಬಾಧಿಸೆ ವನ್ಹಿ ಆಶ್ರಯಿಸುವರೊ
ಜಿತವಾಗಿ ಸೀತವನ್ಹಿಗೆ ಲೇಪಿಸುವದೇ
ಪತಿತ ಪಾವನ ಪಾಪ ನಿರ್ಲೇಪ ನೀ ಸತ್ಯ
ದಿತಿಜ ಮರ್ದನನೆ ಗೋಪಾಲ ವಿಠ್ಠಲ ನಿನ್ನ
ಕೃತಿ ಅತಿ ಆಶ್ಚರ್ಯವು ಹಿತವೊ ಭಕ್ತರಿಗೆ ॥ 4 ॥

ತ್ರಿವಿಡಿತಾಳ

ತರಣಿ ಉದಿತನಾಗೆ ತಮವು ನಿಲ್ಲುವದೆ
ಗರಡನೆದುರಿಗೆ ಉರಗ ಸರಸ ನಾಡುವದೆ
ಹರಿಯ ಕೂಡ ಕರಿ ತಿರುಗಿ ಕಾದುವದೆ
ಹರಿ ನಿನ್ನ ಕರುಣವಾಗಲು ದುರಿತದ ಭಯವೆ
ಸುರಪತಿ ವಜ್ರಕ್ಕೆ ಗಿರಿ ಪ್ರತಿನಿಧಿಯೆ
ಪರಮ ಬಲಾಢ್ಯನಿಗೆ ಹೇಡಿ ಅಂಜಿಕೆಯೆ
ಉರಿವ ಮಾರಿಗೆ ತೃಣವು ಅಣಕ ವಾಡುವದೆ
ಪರಮ ಪುರುಷ ನಿನ್ನ ಸ್ಮರಣೆ ಬಲವಿರಲಿಕ್ಕೆ
ದುರಿತ ಕಂಜೆನೊ ಜವನರ ದಂಡ ಕಂಜೆನೊ
ಪರಮ ದಯಾಳು ಗೋಪಾಲ ವಿಠ್ಠಲ ನಿನ್ನ
ಕರುಣ ಬಲಕಿನ್ನು ಮಿಗೆ ಬಲವಿಲ್ಲವೊ ॥ 5 ॥

ಅಟ್ಟತಾಳ

ನಿತ್ಯ ಪತ್ನಿ ಭಾವ ಲಕುಮಿ ಗಿತ್ತವ ನೀನು
ಸತ್ಯಲೋಕಾಧಿಪತ್ಯ ಬೊಮ್ಮಗಿತ್ತೆಲೊ ದೇವ
ಮೃತ್ಯುಂಜಯಗೆ ಕೈಲಾಸ ವಿತ್ತವ ನೀನು
ಭೃತ್ಯ ಇಂದ್ರಗೆ ತ್ರಿವಿಷ್ಟವ ಕೊಟ್ಟೆಯ್ಯಾ ಈ
ಮರ್ತ್ಯಲೋಕದ ಸಂಪದವಿಗಲ್ಲದ ಏಕ
ಛತ್ರಾಧಿಪತಿಗೆ ಒಂದು ಆಸ್ತಿ ನಾಸ್ತಿಗಳುಂಟೆ
ಅತ್ಯುನ್ನತ ನೀನು ಅಹಿರಾಜ ತಲ್ಪನೆ

ಮುತ್ತವೆ ರೋಮ ರೋಮಕೆ ಕೋಟಿ ಬ್ರಹ್ಮಾಂಡ
ನಿತ್ಯ ಖಗನು ವಾಹನನೇನೋ ನಿನ್ನ
ಕೃತ್ಯ ನೋಡಲು ಅತ್ಯಾಶ್ಚರ್ಯ ತೋರುತಲಿದೆ
ಸತ್ಯ ಸಂಕಲ್ಪನೆ ಗೋಪಾಲ ವಿಠ್ಠಲ
ಉತ್ತಮರಿಗೆ ಸುಲಭ ಭೃತ್ಯಪಾಲಕನೆ ॥ 6 ॥

ಆದಿತಾಳ

ಜಲಧಿ ಪೊಕ್ಕರೆ ಬಿಡೆ ಜಲದಲಡಗೆ ಬಿಡೆ
ನೆಲದ ಮರಿಯಲಿ ಪೊಕ್ಕರೆ ನಿನ್ನ ಬಿಡೆನೊ
ಬಲು ಘೋರ ರೂಪ ತನದಲಂಜಿಸಲು ಬಿಡೆ
ಸುಲಭದಿ ಗತಿಇಲ್ಲ ಯಾಚಕ ನೆನೆ ಬಿಡೆ
ಬಲವಂತಿಕೆಯಲಿ ಪರಶು ತೋರಲು ಬಿಡೆ
ತಲೆ ಜಡಗಟ್ಟಿ ತಪಸಿಯಾದರು ಬಿಡೆ
ಕುಲಹೀನ ನಾಗಿ ದನಗಾಯಿದರು ಬಿಡೆ
ಬಲು ಅರ್ಭಕನೆಂದು ಬತ್ತಲಾದರು ಬಿಡೆ
ಸಿಲುಕದೆ ವಾಜಿಯ ನೇರಿ ಓಡದಂತೆನ್ನ
ತಲೆ ನಿನ್ನ ಕಾಲಿಗೆ ಕಟ್ಟಿ ಕೆಡಹುವೆನೊ
ಖಳರ ವಂಚಕೆ ವೇಷಗಳು ಬಲ್ಲೆನೊ ನಾನು
ಸುಲಭದಿಂದಲಿ ಕಾಯೊ ಗೋಪಾಲವಿಠ್ಠಲ ॥ 7 ॥

ಜತೆ

ಗಿರಿಯ ನೆತ್ತುವನಿಗೆ ಹರಳು ಭಾರವೆ ದೇವ
ಪೊರಿ ಎನ್ನ ಕರುಣಾಳೆ ಗೋಪಾಲ ವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 33** ರಾಗ : ಮಧ್ಯಮಾವತಿ

ಎಲ್ಲೆ ಗೇಹ ಎಲ್ಲೆದೈಯ್ಯಾ ವೃತ್ತಿ ಕ್ಷೇತ್ರ
ಎಲ್ಲೆದಯ್ಯಾ ಗ್ರಾಮ ಸ್ಥಳವು ಎಲ್ಲೆದಯ್ಯಾ ದೇಶವಾಸ
ಎಲ್ಲೆದಯ್ಯಾ ಧನವು ಧಾನ್ಯ ಎಲೆದಯ್ಯಾ ಸತಿಯು ಸುತರು
ಎಲ್ಲೆದಯ್ಯಾ ವಸನ ಪಶುವು ಎಲ್ಲೆದಯ್ಯಾ ಬಂಧು ಬಳಗ
ಎಲ್ಲೆದಯ್ಯಾ ಒಡವಿಗಳು ಎಲ್ಲೆದಯ್ಯಾ ಕರಿ ಉಷ್ಟ್ರಗಳು

ಎಲ್ಲೆದಯ್ಯಾ ಆಳು ವೇಳ್ಯಾ
ಎಲ್ಲೆದಯ್ಯಾ ಕೂಪತಟಾಕ ಎಲ್ಲೆದಯ್ಯಾ ಸಿಲಿ ವೃಕ್ಷಗಳು
ಎಲ್ಲೆದಯ್ಯಾ ಮುತ್ತು ಮಾಣಿಕ್ಯಾ
ನಿಲ್ಲದೆ ಪೋಗೊ ನೀರ ಗುಳ್ಳಿಯಂತೆ ದೇಹಕ್ಕೆ
ಇಲ್ಲದ ಕರ್ತೃತ್ವ ಇನ್ನೆಲ್ಲಿಂದ ಪಚ್ಚಿಕೊಂಬಿ
ಸಲ್ಲದ ನಿನಗೀ ವಾಕು ಎಲ್ಲಿ ಪೋದರು ಅನ್ಯ
ಗೆಲ್ಲಲಾರಿಯೊ ಜೀವ ಬಲ್ಲವಿಕೆಲ್ಲ ನಿನಗೆ
ಎಲ್ಲ ನನ್ನ ದೆಂಬೋದು ಒಳಿತಲ್ಲವೊ ನಿನಗೆ
ನಿಲ್ಲಿಸಿ ನಿನ್ನ ಮುಂದೆ ಎಲ್ಲವು ಹೋಹಾಗಲಿ
ಕಲ್ಲು ಹೊಡದಂತೆ ನೀ ಮೆಲ್ಲನೆ ನೋಡುತಿಪ್ಪೆ
ನಿಲ್ಲದೆ ನೀನು ಬಿಟ್ಟು ಚಲ್ಲಿ ಹೋಗುವಾಗಲಿ
ಹುಲ್ಲು ಕಡ್ಡಿಯೆನ್ನು ನೀ ಬಾಯಲ್ಲಿ ಕೊಂಡು ಹೋಗುವ್ಯಾ
ಎಲ್ಲ ರೂಪದಲ್ಲಿ ಶ್ರೀ ವಲ್ಲಭ
ಅಲ್ಲಲ್ಲಿ ತಾನೆ ಇದ್ದು ಜೀವ ನೆಲ್ಲರ ಪಾಲಿಸಿನ್ನು
ಗುಲ್ಲು ಎಬ್ಬಿಸಿ ಪ್ರಳಯದಲ್ಲಿ
ಎಲ್ಲರ ನುಂಗೊ ಬಲ್ಲಿದ ರಂಗನಾಮ
ಗೆಲ್ಲರಿಗೊಡಿಯ ಕಾಣೊ
ಮಲ್ಲ ಮರ್ದನ ರಂಗ ಗೋಪಾಲ ವಿಠ್ಠಲ ತಾ
ಬಲ್ಲದೆ ಮಾಡಿಸುವ ಎಲ್ಲಕಾಲದಲಿನ್ನು ॥ 1 ॥

ಮಟ್ಟತಾಳ

ಖಣದವಳಗೆ ಧಾನ್ಯವಣಗ ಹಾಕಿದರೆ
ಮನಿಗೆ ತರಲಾಗಿ ಖಣದಲಿ ಉಳಿದವೆಷ್ಟು
ವನಕಿ ಇಂದಲಿ ಧಾನ್ಯ ಘನವಾಗಿ ಕುಟ್ಟಿದರೆ
ವನಕಿ ನುಂಗಿದ ವೆಷ್ಟು ಅನವರಿತು ನೋಡಿ
ಶುಣಕಗೆ ಪುಷ್ಕರಣಿ ಮಲ್ಕರ್ಣಿ ಇರಲು
ದಣಿ ಕುಡುವದೆ ಉದಕ ಕೊನೆ ನಾಲಿಗೆ ಯಲ್ಲದೆ
ಮಣಕಕೆ ಸೇರು ತುಪ್ಪ ಮನಿಯೊಳಗಾದರೆ
ಮಣಕಕೆ ಬಂದದೇನು ಮಡಿಯು ಮಾತ್ರವು
ಕನಸಿನೊಳಗೆ ಹಣವು ಕಂಡಹಾಗೆ ಕೊಟ್ಟರೆ

ಎಣಿಸಿ ಕೊಡಬಲ್ಲಾ ಋಣದವ ಬೇಡಿದರೆ
ಮುನುಸು ಗುಟ್ಟಿದವನ ಮುದ್ದಾಡಿದರಿನ್ನು
ಮನಸಿಗೆ ಹರುಷತ್ವ ಮದಡ ಜೀವವೆಕೇಳು
ಧನ ತೂಗೋ ತಕ್ಕಡಿ ಮನೆಯೊಳಗಿರಲಿಕ್ಕೆ
ಧನ ಹೋದರೆ ತಕ್ಕಡಿನ್ನ ಕೇಳ್ಳೋರುಂಟೆ
ಗುಣಹೀನ ಜೀವ ನಿನಗೆ ಅಲ್ಲದವೆಲ್ಲ ನನಗೆ
ನನ್ನ ದೆಂಬೋದೆನಿತು ನೀತಿಯ ಕಾಣೋ
ಸನಕಾದಿಗಳೊಡೆಯ ಗೋಪಾಲವಿಠ್ಠಲನ್ನ
ಅನುವಾಗಿ ನೀ ತಿಳಿದು ಗುಣ ವುಪಾಸನೆ ಮಾಡು ॥ 2 ॥

ತ್ರಿವಿಡಿತಾಳ

ಆರಿಗೆ ವಶವಲ್ಲದ ಲೆಂಕಿಯ ಕಟ್ಟಿದ
ಧೀರರಾದಂಥ ಸುರರಿಂದ ಪೂಜೆಯ ಗೊಂಡ
ಆ ರಾವಣನನು ಕಡಿಗೆ ಆದ ತೆರನು ನೋಡು
ಆರಾದರು ಅವಗೆ ಆಯುಷ್ಯವಿತ್ತರೆ
ಆರಿಂದ ಮರಣವು ಆಗಲಿಕ್ಕಿಲ್ಲವೆಂದು
ಆ ರುದ್ರನಿಂದ ವರವನು ಪಡಿದಿದ್ದಂಥ
ಆ ರಕ್ಕಸ ಹಿರಣ್ಯಕರಾರಾದರುಳುಹಿದರೆ
ಆರಿಗೆ ಆರಿಲ್ಲ ಹಾರದಿರೆಲೊ ಬರಿದೆ
ಕ್ರೂರ ಕಂಸನ ನೋಡು ದುರಿಯೋಧನರ ನೋಡು
ಆರು ಇವರಿಗೆ ತನ್ನವರು ಇದ್ದಿಲ್ಲವೇ
ದೂರು ಮಾತ್ರವೆ ತನ್ನವರು ತನ್ನಿಂದೆಬೋದು
ಆರಿಗಾರಿಲ್ಲ ವಿಚಾರ ಮಾಡಲು
ಮೂರು ದಿನದ ಭಾಗ್ಯ ಸ್ಥಿರವೆಂದು ನಂಬಿ ನೀ
ಕಾರಣ ಕರ್ತನ ಮರಿಯದಿರು
ಸೇರು ಈತನ ವರದ್ವಾರದ ಬಳಿಯಲ್ಲಿ
ಕಾರುಣ್ಯದಿ ಪಾಲಿಸುವ ಕರುಣಾಕರ ರಂಗ
ಮಾರಜನಕ ಚಲುವ ಗೋಪಾಲವಿಠ್ಠಲನ್ನ
ಆರು ಮೂರು ಭಕ್ತಿಲಿ ಬಾರಿ ಬಾರಿಗೆ ಸ್ಮರಿಸೋ ॥ 3 ॥

ಅಟ್ಟತಾಳ

ನಷ್ಟವೆಂಬೋದು ನನ್ನ ದೆಂಬೋದು ಬಲು ನಷ್ಟ
ಇಷ್ಟರೊಳಗೆ ಕೃಷ್ಣ ನೀನೆ ಎಂಬೋದು
ನಿಷ್ಟ ಕಷ್ಟ ದೊಳಗೆ ಪುನಃ ಹುಟ್ಟಿ ಹೋಹೋದೆ ಕಷ್ಟ
ನಿಷ್ಠೆಯೊಳಗೆ ಹರಿ ಸ್ಮರಣೆ ಮಾಡೋದೆ ನಿಷ್ಟಾ
ಅಷ್ಟ ಕರ್ತೃತ್ವವು ಶ್ರೀಹರಿಯ ಆಧೀನವೆಂದು
ಭ್ರಷ್ಟ ಸಂಸಾರವು ದಾಟುವವನೆ ಧಿಟ್ಠ
ಸೃಷ್ಠಿ ಗೊಡೆಯನಾದ ಗೋಪಾಲವಿಠ್ಠಲ
ಮುಟ್ಟಿ ಪೂಜಿಸುವವರ ಬಿಟ್ಟನೆಂದರು ಬಿಡ ॥ 4 ॥

ಆದಿತಾಳ

ಧರಿಯೊಳು ಇದ್ದಂಥ ಈ ಪರಿಪರಿ ಪದಾರ್ಥ
ಹರಿಯಿಂದ ನಿರ್ಮಿತ ಕರವಾದವು ಎಲ್ಲ
ಅರಿದು ನೋಡಿ ಇನ್ನು ಕರಕರೆಗಳು ಬಿಟ್ಟು
ಕರಣ ಶುದ್ಧಿಯಲಿನ್ನು ಕರವಡ್ಡಿ ಕೊಂಡು ನಿಂದು
ವರ ಉದಕದಲಿಂದ ಹರಿಗರ್ಪಿತವೆಂದು
ಹರುಷದಲಿತಿನ್ನು ಸ್ಥಿರ ಪದವಿಯ ಪಡಿ
ಬರಿದೆ ನನ್ನದು ಎಂಬೊ ಮರುಳ ಕರ್ತೃತ್ವವ
ಮರಿದೆ ದುರ್ವೃತ್ತಿಯ ತೊರೆದು ಲೌಕಿಕವ
ಕರುಣಾಕರ ರಂಗ ಗೋಪಾಲವಿಠ್ಠಲನ್ನ
ಶರಣರ ಮರೆಬಿದ್ದು ನರೆ ಬದುಕನುಗಾಲಾ ॥ 5 ॥

ಜತೆ

ಡೊಂಬನ ಗೂಡಿನಂತೆ ನಂಬದಿರೀ ದೇಹ
ನಂಬು ಗೋಪಾಲವಿಠ್ಠಲನಂಬುಜ ಚರಣ ॥ 6 ॥

## ಸುಳಾದಿ 34

ಧ್ರುವತಾಳ ರಾಗ : ಭೈರವಿ

ಪ್ರಸ್ತವ ಮಾಡುವಂತೆ ಕರ್ತ ನಾನಲ್ಲವಯ್ಯ
ವಸ್ತು ಬೇರೆ ಇದ್ದಾನೆ ಒಳಗೊಳಗೆ ನೋಳ್ಪದು
ಪುಸ್ತಕವಲ್ಲ ವಿನ್ನು ಬಿಚ್ಚಿ ತೋರಿಸಲು

ವಿಸ್ತರಿಸಿ ನೋಡಿರಿ ವಿವೇಕರು
ಅಸ್ತಮಾನ ತನಕ ಆದ ಸೇವೆಗೊಂಬ ಗ್ರ
ಹಸ್ತ ನಮಗೆಲ್ಲರಿ ಗೊಡಿಯ ಕಾಣೊ
ಹಸ್ತಕನ ಪಿಡಿದು ಕರ್ತೃ ಎನಗೆಂದರೆ
ಹುಸ್ತು ಹೋದಾವು ನಿಮ್ಮ ವಚನಂಗಳು
ಹೊಸ್ತಲ ಮುಂದೆ ನಿಂತು ಗೋವಿಂದ ನೆಂದರೆ
ವಸ್ತು ವೆನಿಸೋದೆ ತಾ ನಮಸ್ಕಾರಕ್ಕೆ
ಕಸ್ತೂರಿ ಭರಣಿ ಒಳಗೆ ಪರಿಮಳ ಯೆಚದರೆ
ವಸ್ತು ಇದೆ ಎಂಬೊರೆ ಭರಣಿಯನು
ದುಸ್ತರ ಎಮಗೆ ಇದು ಆಸ್ತಿಕ ತನದಿ ನೋಡಿ
ಸ್ವಸ್ಥದಲಿ ಇಷ್ಟೋದು ಯೋಚಿಸದೆ
ಮಸ್ತ ವಾಹನ್ನ ಗೋಪಾಲ ವಿಠ್ಠಲನೆ ಸ
ಮಸ್ತ ಮಾಡಿ ಮಾಡಿಸುವ ಬಗೆ ಕೇಳಿ ॥ 1 ॥

ಮಟ್ಟತಾಳ

ಒಂದು ಜೀವರಲ್ಲಿ ಕರ್ತನಾಗುವನು
ಒಂದು ಜೀವರಲ್ಲಿ ಭೋಕ್ತನಾಗುವನು
ಒಂದೊಂದು ಪದಾರ್ಥದಲ್ಲಿ ತಾನೇ ನಿಂದು
ಒಂದೊಂದು ರೂಪದಿ ಒಂದು ಆಗಿ ಬಂದು
ಒಂದಕ್ಕೊಂದು ಭೇದ ಒಂದು ವಿಷಯದಲ್ಲಿ
ಒಂದೇ ಒಂದಾಗುವ ಒಂದರಲ್ಲಿ ನೋಡೆ
ಒಂದರ ದ್ವಾರದಿ ಒಂದಕ್ಕೆ ಫಲವಿತ್ತು
ಒಂದರ ದ್ವಾರದಿ ಒಂದಕ್ಕೆ ಉಣಿಸುವ
ಒಂದರಲ್ಲಿಪ್ಪ ಒಂದರಲ್ಲಿ ಇಲ್ಲ
ಎಂದು ಆಡಲು ಸಲ್ಲ ಇಂದಿರೆ ಅರಸನ್ನ
ಒಂದೇ ದೈವ ನಮ್ಮ ಗೋಪಾಲ ವಿಠ್ಠಲ
ವಂದಿಸಿ ತಿಳಿವರಿಗೆ ಆನಂದ ಬಡಿಸುವಾ ॥ 2 ॥

ರೂಪಕತಾಳ

ತಾ ಯೆಂದಿನಿ ಕೊಂಡು ತಾನೆ ತಾ ಹೂವಾನು
ಬಾ ಯೆಂದೆನಿಸಿ ಕೊಂಡು ಬಾಹುವಾನು

ಓ ಯೆಂದೆನಿಸಿ ಕೊಂಡು ತಾನೆ ಓಗುಟ್ಟುವಾ
ಕೋ ಎಂದೆನಿಸಿ ಕೊಂಡು ತಾನೆ ಕೊಂಬುವಾನು
ಅ ಎಂದು ಕ್ಷ ಎಂದು ಐವತ್ತೊಂದಕ್ಷರ
ಬಾಯಿಂದ ಉಚ್ಚರಿಸಿ ಕಾಯ ಶುದ್ಧಿಯ ಮಾಡಿ
ಮಾಯೆ ಪೊಂದಸದಂತೆ ತತ್ವಗಳ ತೋರಿಸಿ
ನ್ಯಾಯದಿಂದಲೇವೆ ಕರ್ಮಗಳ ಮಾಡಿಸಿ
ತಾ ಯಿಸುಕೊಂಬುವ ತಡವಿಲ್ಲದೆ ಭಕುತಿ
ಬಾಯ ಬಡಿಯ ಭಕ್ತರಿಂದ ಮಾಡಿದ ಕರ್ಮ
ಬಾಯಿ ಬಿಡುವ ಭಕ್ತರಲ್ಲದವರದಿನ್ನು
ನಾಯಕನಾಗಿ ಸರ್ವರಂತರದಿ ನಿಂತು
ನಿಯಾಮಕನಾಗೆ ನಿತ್ಯ ಕುಣಿಸ್ಯಾಡುವ
ಮಾಯಾ ರಹಿತ ದೇವ ಗೋಪಾಲವಿಠ್ಠಲ
ತಾಯಿ ಆಲಿಸಿದಂತೆ ತನ್ನವರನು ಪೊರೆವ ॥ 3 ॥

ಝುಂಪಿತಾಳ

ನಾನೆ ಕರ್ತನೆಂದು ನಾಲ್ಕು ದಿಕ್ಕುಗಳಿಂದ
ನಾನಾ ಪದಾರ್ಥಗಳನ್ನು ತರಿಸಿ
ಜ್ಞಾನವಿಲ್ಲದೆ ಯಜ್ಞ ಸ್ನಾನ ಗೋದಾನ ಭೂ
ದಾನ ಹಿರಣ್ಯ ಭೂಸುರರಿ ಗುಣಿಸಿ
ನಾನಾ ವೃತ ಚಾಂದ್ರಾಯಣಾದಿ ತಪಸುಗಳನ್ನು
ಗಾನ ಗಾಯತ್ರಿ ಜಪ ಮೌನಗಳು
ಏನು ಏಸೊಂದು ಪರಿ ಕರ್ಮಗಳು ಮಾಡಿದರು
ಶ್ರೀನಿವಾಸನು ಇದರಿಂದೊಲಿವೇ
ಏನು ಮಾಡಿದುದೆಲ್ಲ ವಿಧಿಯು ಆಶ್ರಮ ಧರ್ಮ
ಕಾಣದಿದರೊಳಗೆ ಹರಿ ಕಾಣಿಸುವದು
ಕಾಣದ ಕರ್ಮ ಅನಂತ ಮಾಡೋದಕ್ಕಿಂತ
ಜ್ಞಾನ ಪೂರ್ವಕದಿ ಗೆಲುವ ಯೋಚನೆ
ತಾನು ತನ್ನರಿತು ತವಕವ ಬೀಳದಲೆ
ಮಾನಸದಲಿ ಹರಿಯ ಮೊರೆಯ ಹೊಕ್ಕು
ನೀನು ಎನ್ನ ಸ್ವಾಮಿ ನಾನು ಭೃತ್ಯನೆಂದು

ಖೂನ ವರಿದನ ಕುಡತಿ ಜಲವ ಪಿಡಿದು
ದೀನ ರಕ್ಷಕ ನೆಂದು ದೈನ್ಯ ಬಟ್ಟತ್ತರೆ
ಏನೇನು ಇದಕೆ ಸಮಾನ ಉಂಟೇ
ದಾನ ವಾಂತಕನು ಗೋಪಾಲವಿಠ್ಠಲನನ್ನ
ನೀನೆ ಗತಿ ಎಂದವರಿಗೆ ನಿಜವ ತಿಳಿಪುವ ॥ 4 ॥

ತ್ರಿವಿಡತಾಳ

ನಿತ್ಯದಿ ನಿಷ್ಕಾಮಕ ಕರ್ಮವ ಮಾಡೆ
ಪ್ರತ್ಯಕ್ಷನಾಗಿ ತಾ ನಿತ್ಯುಳ್ಳ ಫಲವೀವ
ಸತ್ಯ ಅದಕೆ ಫಲವಿತ್ತರೆ ತಪ್ಪನು
ಭಕ್ತರಿಚ್ಛಗನಾಗಿ ಬಹುಬೇಗ ವಲಿವುವ
ಮತ್ತೊಂದು ಫಲ ಕಾಗಿ ಮತ್ತೆ ಕರ್ಮವು ಮಾಡೆ
ದೈತ್ಯರ ದ್ವಾರದಿ ಫಲವ ನೀವಾ
ನಿತ್ಯ ವಲ್ಲವು ಅದು ತತ್ಕಾಲಕೆ ಸುಖ
ಚಿತ್ತಜನಯ್ಯನ ಚರಿತೆ ಹೀಗೆ
ಭಕ್ತರಾದರು ಇಂಥ ಕರ್ಮ ಮಾಡಿದರೆ
ಕ್ಲಪ್ತಕೆ ಕಡಿಮಿಲ್ಲ ಅಧಿಕಾನಂದವು ಹ್ರಾಸಾ
ಉತ್ತಮ ಅಪರೋಕ್ಷ ಆದಮೇಲಕೆ ಇನ್ನು
ಆತುಮಾರ್ಥವಾಗಿ ಹಿಂದೆ ಮಾಡಿದ ಕರ್ಮ
ಜತ್ತಾಗಿ ಪ್ರಾರಬ್ಧವಾಗಿ ಉಣಿಸುವದು
ಮತ್ತೆ ಅದರಿಂದಲಿ ಮೀರಲೊಶವೆ
ಸತ್ಯಸಂಕಲ್ಪ ಗೋಪಾಲವಿಠ್ಠಲನ್ನ
ಭಕ್ತರಿಗೆ ಕೇಡಿಲ್ಲ ಭಯವು ಇಲ್ಲ ॥ 5 ॥

ಅಟ್ಟತಾಳ

ಒಂದು ಫಲವು ಒಬ್ಬನಿಂದ ಆದರೆ ಇನ್ನು
ಎಂದಿಗವನ ಉಪಕಾರವ ಮರಿಯಾದು
ಬಂಧಕ ಎಮಗೆ ಅನಾದಿ ಕಾಲದಲಿಂದ
ಇದ್ದದ್ದು ತನ್ನ ಛಂದುಳ್ಳ ನೋಟದಿ
ಛಿಂದಿಸಿ ನಮ್ಮ ಆನಂದವ ಬಡಿಸುತ

ಹಿಂದೆ ಮುಂದೆ ಅನಿಮಿತ್ತ ಬಂಧು ಆಗಿ
ಇಂದಿರಾಪತಿ ದಯಸಿಂಧು ಕರುಣಾಳು
ಕಂದರ್ಪಜನಕ ಗೋಪಾಲವಿಠ್ಠಲನ್ನ
ಎಂದಿಗೆ ಮರಿಯೆ ನಾ ಮನ ಮಂದಿರದೊಳಗೆ ॥ 6 ॥

ಆದಿತಾಳ

ನೋಡಿ ಬಲ್ಲೆ ವಂದರಿಂದಲಿ ಬೇಢಿ ಬಲ್ಲೆ ವಂದರಿಂದಲಿ
ಮಾಡಿ ಬಲ್ಲೆ ವಂದರಿಂದಲಿ ಬೇಡಿ ಬಲ್ಲೆ ವಂದರಿಂದಲಿ
ನೋಡಿದದಕೆ ಇನ್ನು ಸರಿದೈವವಿನ್ನು ಯಲ್ಲಿ ಗಾಣೆ
ನೋಡಿದದಕೆ ಇನ್ನು ಸರಿದೈವವಿನ್ನು ಯಲ್ಲಿ ಗಾಣೆ
ನೀಡಿದದಕೆ ಈತ ನಿತ್ತ ಫಲಕು ಇನ್ನು ಸರಿಯು ಕಾಣೆ
ಮಾಡಿದದಕೂ ಈತ ತಿಳುವಂತೆ ದೈವಿನ್ನೊಂದು ಕಾಣೆ
ಬೇಡಿದದಕೆ ತಾನೆ ವಲಿವಾ ಗಾಡಿಕಾರ ಗೋಪಾಲವಿಠ್ಠಲ ॥ 7 ॥

ಜತೆ

ಕರ್ತು ಎನಿಸುವ ನಮ್ಮ ಕರ್ಮ ಮಾತ್ರನಾಗಿ
ಸೂತ್ರ ಧಾರಕ ದೇವ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 35** ರಾಗ : ಮಧ್ಯಮಾವತಿ

ಆವನ್ನೀಧರಿಯ ವ್ಯಾಪ್ತ ನೆಂದೆನಿಸುವ
ಆವಪುರುಷನೆ ನಮ್ಮ ಸ್ವಾಮಿ ಕಾಣೊ
ಆವಾವ ನಿರ್ದೋಷ ಎಂದೆನಿಸುವನೊ
ಆವನೆ ಎನ್ನ ಭಾಗ್ಯದೊಡಿಯ ಕಾಣೊ
ಆವಾವ ಜ್ಞಾನ ಗುಣ ಪೂರ್ಣ ನೆಂದೆನಿಪನೊ
ಆವನ್ನ ಎನ್ನ ಮನದೊಡೆಯ ಕಾಣೊ
ಆವಾವ ಸರ್ವತ್ರ ವ್ಯಾಪ್ತ ನಾಗಿಪ್ಪನೊ
ಆವನೇ ಎನಗೆ ಮುಖ್ಯ ವಿಷಯು ಕಾಣೊ
ಆವನಿಂದ ಜಾಗ್ರವು ಸೃಷ್ಠಿ ಸ್ಥಿತಿ ಲಯವು
ಆವನೆ ಎನ್ನ ದಾತಾ ಶ್ರೀತನು ಕಾಣೊ
ಆವನಿಂದ ಬಂಧಕ ಮೋಚಕಾದುದೊ

ಅವನೆ ಈಗ ಮನವೆ ಪಿಡಿಯೊ ಕಾಣೊ
ಆವನ ಕಾವನ್ನ ಬಾವನ್ನ ತಾವನ್ನ
ಈವನ್ನ ಪಾವನ್ನ ಪೂರ್ಣ ಗುಣ ಸಂಪನ್ನ
ಮಾವನ್ನಮರ್ದನ ಗೋಪಾಲ ವಿಠ್ಠಲನೆಂಬ
ದೇವನ್ನ ತಂದು ತೋರು ಅನುಭವಕ್ಕೆ ॥ 1 ॥

ಮಟ್ಟತಾಳ

ರಮ್ಮೆಯ ಅರಸನ್ನ ಬೊಮ್ಮನೈಯ್ಯನ್ನ
ಮೊಮ್ಮಗ ನೆಂದೆನಿಪ ಹರನ ಪೊರೆವನ್ನ
ಸುಮ್ಮನಸರನೆಲ್ಲ ಪರಿವಾರವು ಮಾಡಿ
ಬೊಮ್ಮಾಂಡವೆ ಮನಿಯ ಗಮ್ಯನೆಂದೆನಿಪನ
ಸುಮ್ಮನೆ ಹೋಗಿನ್ನು ಒಮ್ಮನದಲ್ಲಿ
ಘಮ್ಮನೆ ಅಳಗಿರ ತಿಮ್ಮನ್ನ ಕರದು ತಾ
ನಮ್ಮ ಸ್ಥಿತಿಯ ಪೇಳಿ ಸಮ್ಮತಿಸಿ ಕೊಂಬಾ
ಇಮ್ಮನ ಬ್ಯಾಡಿದಕೆ ಈಗಲೆ ಸಮ್ಯಯಿದಕೆ
ನಮ್ಮ ಪೊರೆವ ದಾತ ಗೋಪಾಲ ವಿಠ್ಠಲ
ಹಮ್ಮ ತೊರೆದು ಅಧಮ್ಮ ನೆಂದವ ಗೊಲಿವ ॥ 2 ॥

ರೂಪಕತಾಳ

ಆವನಲ್ಲಿ ಅಸ್ವತಂತ್ರ ವೆಂಬೋದು ಸಿದ್ಧ
ಅವನಲ್ಲೆ ಅವನಿರೂಪಾ ಅನುಭವ ತೋರುತಾ
ಅವನೆ ಅವನ ಮಹಿಮೆಯನು ಬಲ್ಲವ
ಅವನೆ ಸಕಲ ವಿಧಿಯನು ಮಾಡಿದವ
ಪಾವನ್ನ ನಾಗುವ ಅವನ ಕಂಡರೆ ಮನುಜ
ಈವೇಳ್ಯೆದಲಿ ಮನವೆ ಅನುಭೋಗವಲ್ಲದೆ
ದೇವಕಿನಂದನ ಗೋಪಾಲ ವಿಠ್ಠಲ ತ
ನ್ನವ ನೆಂದವನಿಗೆ ತನ್ನ ತೋರಿಸಿ ಕೊಂಬ ॥ 3 ॥

ಅಟ್ಟತಾಳ

ಕುಣಿದು ಕುಣಿಸುವ ಮಣಿದು ಮಣಿಸುವ
ಉಣಿಸುವ ನುಂಡು ತನಗೆಭೇದಾಗಿ

ಎಣಿಕೆ ತಟ್ಟುವನಲ್ಲ ಅನುಮಾನ ವಸ್ತಲ್ಲ
ಘನ ಜಾಗ್ರ ಪ್ರತಾಪ ನಿತ್ಯವ್ಯಕ್ತ ದೇವ
ಎಣಿಸು ಮನವೆ ನಿನ್ನ ಎಲ್ಲ ಪ್ರಾವರ್ತಕಾ
ಕ್ಷಣ ಕ್ಷಣಕೆ ಇನ್ನು ಕಾಣಿಸುವನು ಆ
ರನು ನಾಚದೆ ಪಿಡಿಯಿನ್ನು ನೂಕು ಸಕಲ ಅಘ
ಕ್ಷೀಣಿಸಿ ಪೋಗುವದಿದಕೆ ಅನುಮಾನ ಸಲ್ಲದು
ಘನ್ನ ಮಹಿಮ ನಮ್ಮ ಗೋಪಾಲವಿಠ್ಠಲನ್ನ
ನೆನೆಸುವದೆ ಸುಖ ನಿನಗದೆ ಬಹುಲಾಭ ॥ 4 ॥

ಆದಿತಾಳ

ಭಕ್ತರಿಗೆ ಭಕ್ತನಾಗು ಮುಕುತಿ ಬೇಕಿಚ್ಛೆ ಇತ್ತೆ
ಸಕಲ ವಿಷಯದಿ ವಿರಕ್ತಿ ವುಳ್ಳವನಾಗು
ಕಕುಲಾತಿ ಬಿಡು ಇನ್ನೊಂದು ದೈವಿಲ್ಲ ಯೆಂದು
ಲಕುಮಿ ರಮಣನಲ್ಲಾಸಕುತಿ ಯುಳ್ಳವನಾಗು
ಸಕಲ ವಿಧಿ ನಿಷೇಧ ಹರಿಗೆ ಅಧೀನವೆಂದು
ಉಕುತಿಗಳಿಂದ ಹರಿಯ ತುತಿಗೆ ದೀಕ್ಷಿತನಾಗು
ಭಕುತ ವತ್ಸಲ ರಂಗ ಗೋಪಾಲ ವಿಠ್ಠಲ
ಸಕಲ ಬಂಧವ ಬಿಡಿಸಿ ಸುಖ ಅಂಬುಧಿಯೊಳಿಡುವ ॥ 5 ॥

ಜತೆ

ಸ್ವಾತಂತ್ರಾಸ್ವತಂತ್ರ ತಿಳಿದವನಿಗೆ ಪಾರ
ತಂತ್ರ ವಿದೂರ ಗೋಪಾಲ ವಿಠ್ಠಲ ವೊಲಿವ ॥ 6 ॥

## ಸುಳಾದಿ 36

ಧ್ರುವತಾಳ ರಾಗ : ಭೈರವಿ

ಸರಿಯಾಗಿ ಸಖನಾಗಿ ಸರ್ವೇಶನೆ
ಅರಸಾಗಿ ಆಳಾಗಿ ಅಪ್ರಮೇಯ
ಸರಸಾಗಿ ವಿರಸಾಗಿ ಸಿರಿ ಹರಿಯೆ
ಇರಳಾಗಿ ಹಗಲಾಗಿ ಶ್ರೀವಿಷ್ಣುನೆ
ನರಕಾಗಿ ಸ್ವರ್ಗವಾಗಿ ನಾರಾಯಣ
ದುರಿತನಾಗಿ ದೂರಾಗಿ ದುರುಳಾಂತಕ

ವರ ಮಾತಾ ಪಿತವಾಗಿ ಪುರುಷೋತ್ತಮ
ಪುರನಾಗಿ ಕಾನನಾಗಿ ಪುರಂದರಾ
ತುರವಾಗಿ ಕರುವಾಗಿ ದಾಮೋದರ
ಮರಿಯಾಗಿ ಮಗನಾಗಿ ಮಂಗಲಾಂಗ
ಧರಿಯಾಗಿ ಧೈರ್ಯನಾಗಿ ಶ್ರೀಕೃಷ್ಣನೇ
ನೆರೆಯಾಗಿ ನೆಂಟನಾಗಿ ಶ್ರೀರಂಗನೆ
ಹೊರಗಾಗಿ ಒಳಗಾಗಿ ಅನಂತನೆ
ಸರಳಾಗಿ ಕಠಿಣಾವಾಗಿ ಸರ್ವಜ್ಞನೆ
ಪರವಾಗಿ ಇಹವಾಗಿ ಪರಮೇಷ್ಠಿಯೆ
ದೂರನಾಗಿ ಸಾರ್‍ಯಾಗಿ ಮುಕುಂದನೆ
ಕಿರಿದಾಗಿ ಹಿರಿದಾಗಿ ತ್ರಿವಿಕ್ರಮಾ
ವರನಾಗಿ ಅಭಯನಾಗಿ ವಾಸುದೇವ
ಜಿರಿದಾಗಿ ಅಲ್ಪವಾಗಿ ಸಿರಿಕಾಂತನೆ
ಎರಡಾಗಿ ಏಕೋನಾಗಿ ಶ್ರೀಹರಿಯೆ
ಪರಿಪಾಲಿತನಾಗಿಪ್ಪ ಬಿಡದೆ ಎಂದೆಂದು ಎನ್ನ
ಸಂರಕ್ಷಿಸುವ ಭಾರಕರ್ತಾ ಮುಕ್ತ
ಅರಿದವನಿಗೆ ಲಭ್ಯಾ ಗೋಪಾಲವಿಠ್ಠಲ
ಧೊರಿಯೆ ಪೂರ್ಣ ಕಾಮ ನಿತ್ಯ ನಿರ್ಲಿಪ್ತ ॥ 1 ॥

ಮಟ್ಟತಾಳ

ಬಲ್ಲೆನೆಂದವ ಅರಿಯಾ ಅರಿಯನೆಂದವ ಬಲ್ಲ
ಇಲ್ಲವೆಂದವ ಗುಂಟು ಇದ್ದೆನೆಂಬವಗಿಲ್ಲ
ಪೊಳ್ಳು ಗಟ್ಯಾಗುವದು ಗಟ್ಟಿ ಪೊಳ್ಳಾಗುವದು
ವಲ್ಲದವನೆ ವಲಿವಾ ವೊಲಿದು ಇದ್ದವ ಬಿಡುವ
ಕಲ್ಲು ಕಲ್ಲಿಗೆ ತಾಕಿ ಅಗ್ನಿ ಪೊರಟರಿನ್ನು
ನಿಲ್ಲು ಅದಕ್ಕೆ ಒಬ್ಬ ಪುರುಷ ಬೇಕು
ಇಲ್ಲೊ ಸ್ತ್ರೀ ಲಿಂಗವು ಪುರುಷ ಎರಡು ಇದ್ದರೆ ಸೃಷ್ಠಿ
ಎಲ್ಲ ಆಗುವದೆಂಬೊ ಸೊಲ್ಲ ನಾಡಲಿ ಬೇಡ
ಪುಲ್ಲ ಲೋಚನ ಕೃಷ್ಣ ಗೋಪಾಲವಿಠ್ಠಲ
ಎಲ್ಲರಿಂದಲಿ ಭೇದ ಅಭೇದ ನಾಗಿಪ್ಪ ॥ 2 ॥

ರೂಪಕತಾಳ

ಧನದಿಂದ ವಿಕ್ರಯ ಸಕಲ ಪದಾರ್ಥವು
ಧನವ ವಿಕ್ರಿಯುಪಂಥ ಅರ್ಥಾವದು
ಧನಕಿಂತ ಉತ್ತಮ ಮನುಜಾರಾವೆ ನೋಡು
ಎನಗಿಂದ ಉತ್ತಮರಾದವರ
ಅನುಸಾರ್‍ಯಾಗಿ ನಡೆದು ಅಲ್ಲಿದ್ದ ಹರಿಯಾ
ಗುಣಗಳೇವೆ ಧನವ ಮಾಡಿ ಕೊಂಡು
ಮನೆಯ ಮಾಡಿಕೊಂಡು ಮೂರು ಅವಸ್ಥೆಯ
ನೆನೆದು ನೆನೆದು ದಿನ ಒಪ್ಪಿಸುವೆ
ಸನಕಾದಿಗಳ ಪ್ರಿಯಾ ಗೋಪಾಲವಿಠ್ಠಲ
ಎನಗೆ ನೀ ವಿಷಯನೊ ಸರ್ವ ಪರಿಯಲಿ ॥ 3 ॥

ಝುಂಪೆತಾಳ

ಉಪ ಜೀವನ ವೆಂಬದಾವದು ನೋಡಲು
ವಿಪರೀತ ವಾಗಿಹುದು ಈಗ ನೋಡ
ತಪರಹಿತನಾಗಿ ಬಿಂಬನ್ನ ಮರೆದು ಅನ್ಯ ವಿಷಯ
ಉಪಜೀವನವೆಂದು ತೋಷ ಬಡುವೆ
ಕಪರ್ದಿಕವಾದರು ಲಾಭವಾದರು ಕಾಣೆ
ತಪಿಸುವೆನು ಹಗಲಿರುಳು ವಿಷಯದಿಂದ
ಸ್ವಪ್ನದಲ್ಲ್ಯಾದರ ನಿಜ ಸುಖವನ್ನು ಕಾಣೆ
ಉಪವಾಸ ಬಹು ಜನ್ಮ ದೀನ ಉದ್ಧಾರ
ಕೃಪಪೂರ್ಣ ನೀ ಎನಗೆ ಗುಪಿತ ಸಖನಾಗಿದ್ದು
ಉಪವಾಸದಲಿ ಎನ್ನ ಇಡಲಿ ಬಹುದೇ
ಸಮುತ ದ್ವಿ ಲೋಕಕ್ಕೆ ಅನ್ನದಾತಾನೆಂದು
ಅಪರಿಮಿತ ನಿನ್ನ ಕೀರುತಿಯು ಎತ್ತ
ತೃಪುತ ನಾಗೊಂತೆನೆಗೆ ಅನ್ನ ನೀ ಉಣಿಸಿದರೆ
ನೀ ಪರಮ ಕರುಣಿ ಎಂದು ತುತಿಪೆ
ಕಪಟ ನಾಟಕಧಾರಿ ಗೋಪಾಲವಿಠ್ಠಲ
ಅಪರಾಧ ಮುನ್ನೆ ನಾ ಮಾಡಿದವನೆ ॥ 4 ॥

ತ್ರಿವಿಡಿತಾಳ

ನಾ ನಿನ್ನ ಮರೆವದಕ್ಕೆನಗೊಂದುಪಾಧಿ ಉಂಟು
ನೀ ಎನ್ನ ಮರೆವದಕ್ಕೆ ಆವ ಉಪಾಧಿಯೊ
ಅನಾದಿ ಅವಿದ್ಯ ಎನಗಾವರ್ಕ ವಾಗಿದೆ
ನೀನು ನೋಡದಂತೆನ್ನ ನಿನಗಾವ ಆವರ್ಕ
ಜ್ಞಾನ ಪೂರ್ಣನೆ ಎನಗೆ ನೀನೆ ಆವರ್ಕ ಅಭಿ
ಮಾನಿಗಳೆ ಎನ್ನ ಸ್ವಾತಂತ್ರರೆ
ನೀನೆ ಅವರಿಗೊಂದು ಮರಿಯಾದಿ ಮಾಡಿಟ್ಟು
ಪ್ರಾಣಿಗಳಾವನ್ನ ಕರ್ತಾರೆನಿಪೆ
ಗಾಣಕಟ್ಟಿದ ಎತ್ತು ಏನು ಬಲ್ಲವೊ ತೈಲ
ತಾನು ಪಕ್ವವಾದ ಪ್ರಮಾಣವು
ಧೇನಿಪವು ತಮ್ಮ ಆವಾಗ ಬಿಡೋನೆಂದು
ಗಾಣಿಗನಾಧೀನ ಎಲ್ಲ ಜೀವ
ನಾನೇ ಮುಂತಾದ ಎಲ್ಲ ಜೀವ ತಿಲಸ್ಥಾನ
ಗಾಣದ ವರಳೆವೇ ಸಂಸಾರವೋ
ಅನಾದಿ ಅವಿದ್ಯ ಸಂಸಾರದೊಳುಹಾಕಿ
ನೀನು ಮರ್ದಿಸಿ ಜ್ಞಾನ ಭಕುತಿ ತೈಲ
ವಾನು ತೆಗೆದು ಸರ್ವ ಜೀವರಿಗೆ ಎರದು
ನೀನು ಮಾಡುವ ಮರಿಯಾದಿ ಇದು
ನಾನೇವೆ ಅಪರಾಧಿ ತಿಳಿಯೆದೊಂದೆನ್ನಿಂದ
ಕಾಣಿಸುತಲಿದೆ ಕರುಣಾಕರ
ಗೋಣಿ ಹೊರಿಸಿದವನೆ ಇಳಿಸಬೇಕಲ್ಲದೆ
ಎನನ್ನ ಸ್ವಾತಂತ್ರ ಎಮಗುಂಟೊ
ಜಾಣ ಚನ್ನಿಗರಾಯ ಗೋಪಾಲವಿಠ್ಠಲ
ಜ್ಞಾನ ಅಂಬುಧಿ ನಿನ್ನ ಮೊರೆಯ ಹೊಕ್ಕೆ ॥ 5 ॥

ಅಟ್ಟತಾಳ

ಆರಾಧಿತನಾಗು ಸರ್ವ ಇಂದ್ರಿಯಗಳಿಂದ
ಆರಾಧನಿಯ ಮಾಡಿ ಸಾರೆ ನೀನಲ್ಲದೆ
ಆರಾಧನಿಯಿಂದೊಂದು ಆಶೆ ಎನಗೆ ಬೇಡ

ಆರಾಧಿಸಿದೆನೆಂಬೊ ಅಹಂಕಾರವನು ಬೇಡ
ಆರಾಧನೆಯ ಸಾಧನರಾದಕ್ಕಾಗಲಿ
ತಾರತಮ್ಯ ಪರಿವಾರ ಸಹಿತ ತಂತ್ರಸಾರಯುಕುತವಾದ
ಆರಾಧನಿಯ ಮಾಡಿ ಸಾರ ಭೋಕ್ತ ಸುಂದರಮೂರುತಿಯನು
ತೋರಿ ಎನ್ನೊಳಗೆ ಸ್ಫೂರ್ತಿಯನು ಕೊಟ್ಟು
ಕೀರುತಿ ನಿನ್ನದು ಕೊಂಡಾಡುತ ಸದಾ
ವಾರಣಾಸಿಯು ಮುಂತಾದ ಕ್ಷೇತ್ರಗಳೆಲ್ಲ
ತೋರಿಸಿ ಅಲ್ಲಲ್ಲಿ ಸ್ತೋತ್ರಮಾಡಿಸಿ ನಿನ್ನ
ಚಾರು ಚರಣದಲ್ಲಿ ಸೇರಿಸಿ ಸಲಹುವದೊ
ಕಾರಣ ನೀಬಲ್ಲಿ ಎನ್ನ ತಂದದಕಿನ್ನು
ನಾರಾಯಣ ನಿನ್ನ ತುತಿಯಮಾಡಿಸು ಪೂರ್ಣ
ಮೀರಿ ಬಂದವು ದಿನ ಸಾರಿಪೇಳುತ ಹೀನೆ
ಶಾರೀರ ವೆಂಬುದು ಅನಿತ್ಯ ಬಲು ಸಿದ್ಧ
ಊರಿಗೆ ಮುತ್ತಿಗೆ ಬರುತಿರೆ ಎಂಬಂಥ
ವಾರುತಿ ಆದರು ಸಾರೋರಪರೋಕ್ಷ
ಭಾರ ನಿನ್ನದು ಕಂಡ್ಯಾ ಗೋಪಾಲವಿಠ್ಠಲ ವಿ
ಚಾರ ನಿನ್ನಲ್ಲಿರಳ್ಹಗಳೆನಗಿರಲಿ ॥ 6 ॥

ಆದಿತಾಳ

ಛಲವಾಗೆಲಿಸು ಮತ್ಕುಲ ಸ್ವಾಮಿಯೇ ನಿಹ
ಫಲವು ಅಧಿಕ ನೋಡಿ ಕಲಿಯುಗ ಸಾಧನ
ಹಲವು ಬಗೆಯಲ್ಲಿ ಬೇಡುವದೇನಿಲ್ಲ
ಸುಲಭದಿ ಸುರನದಿ ಸ್ನಾನವ ಮಾಡಿಸಿ
ಸ್ಥಳವ ಸೇರಿಸಿ ಬಂಧುಗಳ ಸಹಿತ ತಂ
ದಿಲ್ಲಿ ನಿಲಿಸಿದ ಮ್ಯಾಲೆನ್ನ ತಿಳಿದದ್ದು ಮಾಳ್ಪೋದು
ಕಳವಳ ಇದರ ಹೊರತೊಂದು ಕಾಣಿಸೋದಿಲ್ಲ
ಉಳಿದ ಧರ್ಮಗಳ ಬಲ್ಲ ನಾನಾಗಲಿ
ತಿಳಿವಿಕೆ ಬಲು ಕೇಡು ನಿನ್ನ ಕಥೆಯಲ್ಲಿ
ಚಲಿಸದೆ ಮನಸಿಗೆ ನಿಲುಕುತ ನೀನಿರು
ಗೆಲಿದೆ ನಾನಾ ಸಂಕಲಿಪಿಸಿದದನೆಲ್ಲ

ಸಲಿಗೆಲಿ ಎನೆ ನಾ ಬಿನ್ನೈಸಿದದನೆಲ್ಲ
ಭಳಿಭಳಿರೆ ಸ್ವಾಮಿ ಭಕುತ ಜನರ ಪ್ರೇಮಿ
ಚಲುವ ಶುಭಕಾರ ಚಕ್ರ ಶಂಖಧರ
ಬಲು ವೈಚಿತ್ರ ಕೋಮಲ ಮನ ಪುರುಷ
ಜಲಜಾಕ್ಷನೆ ಮಹಾ ಕಲುಷ ಸಂಹಾರನೆ
ಜಲಜ ಸಂಭವ ಪಿತ ಜನನ ಮರಣ ದೂರ
ಚಲ ಅಚಲಾಗತ ಅಚಲಾನಂದನೆ
ಚಲಿಸುವ ಕರನ ಕುಂಡಲಗಳ ಪ್ರಭೆಯ
ಖಳಿಯ ಪ್ರಕಾಶಿತಾ ಮೊಗನೆ ಮನೋಹಾರಾ
ವಳಿ ಪಂಕ್ತಿಯ ಸುಜಠರ ಶಿರಿವತ್ಸ
ಸುಳಿಯ ಗುಂಭ ಪೊಕ್ಕಳ ಕಟಿ ಸುಗುಣ
ಘಿಲಘಿಲಕು ಊರು ಎತ್ತಿ ಕುಣೋ ಚರಣ
ನಿಲುಕುತ ಇರು ಎನ್ನ ಮನಕೆ ಆಭರಣ
ಸುಲಭ ತಾರಕ ನೋಡು ಹರಿ ನಿನ್ನ ಸ್ಮರಣೆ
ಚಲುವ ದೇವರ ದೇವ ಗೋಪಾಲ ವಿಠ್ಠಲ
ಸಲಿಗೆ ಬಿನ್ನಪಿದೊಂದು ಸಲಿಸೋ ಹೇ ಜೀಯಾ ॥ 7 ॥

ಜತೆ

ಕಾರಣೆಲ್ಲದ ಕಾರ್ಯ ಮಾಡುವರುಂಟೇನೈಯ್ಯ
ಕಾರಣ ಪುರುಷ ಕಾಯೊ ಗೋಪಾಲ ವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 37** ರಾಗ : ಭೈರವಿ

ಏನೋ ನಿನ್ನ ಮಹಿಮೆ ಆನೇನು ಕೊಂಡಾಡುವೆ
ಜ್ಞಾನಾನಂದ ಕಾಯಾ ಲೋಕಮೋಹಕದೇವಾ
ದೀನ ಜನರ ಪಾಲ ದಿನಕರ ಶತತೇಜ
ಗಾನಲೋಲಪ್ರಿಯ ಗಾಯತ್ರಿ ಪ್ರತಿಪಾದ್ಯ
ಜಾನಕಿ ರಮಣನೆ ಜಗ ಸೃಷ್ಟ್ಯಾದಷ್ಟಕರ್ತ
ದಾನವಾರಿಯೆ ರಂಗ ದಾಸರ ಮನದೊಡಿಯ
ಮಾನಾಭಿಮಾನ ಕರ್ತಾ ಮನ್ಮಥನ ಜನಕ
ಶ್ರೀನಾಥ ಸರ್ವೋತ್ತಮ ಶೃಂಗಾರ ಮೂರುತಿಯೆ

ಧ್ಯಾನದಿ ಭಕ್ತರಿಗೆ ದೀಪ್ತಿಸುತ ಪೊಳೆವನೆ
ನಾನಾ ಪದಾರ್ಥದಲ್ಲಿ ನಾನಾ ದೇಶಗಳಲ್ಲಿ
ನಾನಾ ಕಾಲಗಳಲ್ಲಿ ನೀ ನಿತ್ಯ ನಿತ್ಯತೃಪ್ತ
ಅನಾದಿ ಕಾಲ ದೈವ ಅಪ್ರಮೇಯಾ
ವಾಣಿ ಭಾರತಿ ಅಜಸುರರಿಂದ ವಂದಿತನೆ
ಕ್ಷೋಣಿ ವಳಗೆ ಸಮವಿಲ್ಲದ ದೈವವೆ
ಧೇನಿಸಿ ನೋಡಲು ದಿನದಿನಕೆ ವಿಚಿತ್ರ
ಜ್ಞಾನಿಗಳರಸನೆ ಗರುಡವಾಹನ ರಂಗ
ಕಾಣರು ನಿನ್ನ ಗುಣಹೀನ ಮನುಜರಿನ್ನು
ತಾನೆ ನೀನೆಂಬುವಗೆ ಎನೆಂಬೆ ಹರಿಯೆ
ನೀನೆ ಗತಿ ಅಂತ ನಂಬಿದ ಭಕ್ತರಿಗೆ
ಊನವಾಗೋವು ದೋಷ ಅನಂತ ವಿದ್ದರನ್ನ
ನಾನು ನಿನ್ನ ಬಣ್ಣಿಸಿ ಏನು ಬೇಡುವದಿಲ್ಲ
ರೇಣು ಎನಿಸು ಎನಿಸು ಎನ್ನ ಜ್ಞಾನಿಗಳಪಾದದ
ನಾನು ನನ್ನದು ಎಂಬೊ ಹೀನ ಮತಿಯಲಿಂದ
ಗಾಣದ ಎತ್ತಿನಂತೆ ತಿರುಗುವೆ ಧರಿಮೇಲೆ
ಭಾನುಶತತೇಜ ಗೋಪಾಲವಿಠ್ಠಲ
ದೀನರಿಗೆಲ್ಲ ದತ್ತ ಪ್ರಾಣದೇವ ॥ 1 ॥

ಮಟ್ಟತಾಳ

ಎಲ್ಲಿನೋಡಲು ನೀನು ಅಲ್ಲಲ್ಲಿ ವ್ಯಾಪ್ತನು
ಎಲ್ಲಿ ನೋಡಲು ನೀನು ಅಲ್ಲಲ್ಲಿ ಪೂರ್ಣನು
ಬಲ್ಲಿದವರಿಗೆ ಬಲ್ಲ್ಯಾ ಬಲ್ಲವ ಗತಿಸುಲಭ
ಸಲ್ಲುವದೊ ಬಿರಿದು ಎಲ್ಲಿ ನಿನಗೆ ಸಮ
ವಿಲ್ಲವು ನಾಗಾಣೆ ಮಲ್ಲರ ಮರ್ದನ
ಹುಲ್ಲು ಕಲ್ಲಿನಲ್ಲಿ ಎಲ್ಲದಿ ಭರಿತನೆ
ಎಲ್ಲ ಕಾಲದಿ ನಮ್ಮೆಲ್ಲರ ಸಲಹುವಿ
ಜಲ್ಲಧಿ ಒಳಗೆ ಇನ್ನು ಕಮಲವು ಇದ್ದಂತೆ
ಎಲ್ಲವನ್ನು ತೊರೆದು ನಿಲ್ಲಿಸಿ ಮನವನ್ನು
ಸೊಲ್ಲು ಎತ್ತಿ ಪಾಡಿ ಇಲ್ಲೆ ಆರಾಧಿಸಲು

ಚೆಲ್ಲಿ ಪೋಗದವರ ಮೆಲ್ಲನೆ ನೀಹೃದಯದಲಿ ನಿಂತು ತೋರಿ
ಫಿಲ್ಲಕೆಂದು ಕುಣಿದು ಉಳ್ಳಷ್ಟೆ ದೋಷ
ವೆಲ್ಲ ಪೋಗಲಾಡಿ ಸಲ್ಲುವಂಥ ಪದವಿ
ಭಳಿರೆ ಇತ್ತು ಪೊರವಿ ಫುಲ್ಲನಾಭನೆ ಚಲ್ವ ಗೋ
ಪಾಲ ವಿಠ್ಠಲ ಒಲ್ಲೆನೆಂದರೆ ಬಿಡಯುಳ್ಳಷ್ಟು ಕ್ಲಿಪ್ತಕೆ ॥ 2 ॥

ತ್ರಿವಿಡಿತಾಳ

ನಿನ್ನ ಜ್ಞಾನಾವಂತನೆಂದು ಇನ್ನು ಜ್ಞಾನ ಸಂಪಾದಿಸುವೆ
ನಿನ್ನ ದೋಷ ದೂರನೆಂದು ಎನ್ನ ದೋಷಂಗಳಟ್ಟುವೆ
ನಿನ್ನ ಗುಣ ಪೂರ್ಣನೆಂದು ಗುಣವಂತನಾಗುವೆ
ನಿನ್ನ ಸುಖ ಪೂರ್ಣನೆಂದು ಸಂತೋಷದಿಂದಲಿರುವೆ
ನಿನ್ನ ಬಲ ಪೂರ್ಣನೆಂದು ಬಲವಂತನಾಗುವೆ
ನಿನ್ನ ಜನನ ರಹಿತನೆಂತೆಂದು ಕೊಂಡಾಡಿ
ಮುನ್ನೆಧರಿಯ ಮೇಲೆ ಎನ್ನ ಜನನ ಕಳೆವೆ
ನಿನ್ನ ಜಾರವಂತನೆಂದು ಎನ್ನ ಜಾರತ್ವ ಕಳೆವೆ
ನಿನ್ನ ಕಂಸಾರಿ ಎಂತೆಂದು ಎನ್ನ ಸಂಸಾರ ನೀಗುವೆ
ನಿನ್ನ ದನುಜಮರ್ದನ ನೆಂದು ಎನ್ನ ಅರಿಗಳ ಗೆಲ್ಲುವೆ
ನಿನ್ನ ಭಕ್ತವತ್ಸಲನೆಂದು ಇನ್ನು ಭಕ್ತಿ ಸಂಪಾದಿಸುವೆ
ನಿನ್ನ ಕರುಣಾಳೆಂತೆಂದು ಎನ್ನ ಕರಣ ಶುದ್ಧನಾಗುವೆ
ನಿನ್ನ ತೊತ್ತಿಗೆ ತೋಂಡನಾಗಿ ನಿನ್ನ ಭೃತ್ಯನಾಗುವೆ
ನಿನ್ನವರ ಮನೆ ಮುಂದೆ ಕುನ್ನಿ ಆಗಿ ಆನಿರುವೆ
ನಿನ್ನ ತೀರಥ ಪ್ರಸಾದ ನಿನ್ನ ಯಂಜಲಗಳುಂಡು
ನಿನ್ನ ಬೇಡಿ ನಿನ್ನ ಕಾಡಿ ನಿನ್ನ ಹಾಡಿ ಹಾರೈಸಿ
ಎನ್ನ ದಿನಗಳು ಕಳೆವೆ ಮುನ್ನೆ ಕ್ಲಿಪ್ತ ಪರಿಯಂತರ
ಪುಣ್ಯವೊ ಪಾಪಗಳೊ ಎನ್ನಿಂದ ಮಾಡಿಸೊ ಕಾರ್ಯ
ಮುನ್ನೆ ಏನಿದಕೆ ಫಲವೊ ನಿನ್ನಗೆ ನೀನೆ ಬಲ್ಲೆಯ್ಯಾ
ಇನ್ನು ನಾ ಒಂದು ಬಲ್ಲೆನು ನಿನ್ನನೆ ಗತಿ ಎಂಬೋದು
ಚಿನ್ಮಯ ಮೂರುತಿ ಗೋಪಾಲ ವಿಠ್ಠಲ ರೇಯ
ಧನ್ಯ ನಾಗುವೆ ಕೇಳು ನಿನ್ನವರ ಬಳಿವಿಡಿದು ॥ 3 ॥

ಅಟ್ಟತಾಳ

ಹೀನರ ಒಳಗೆಲ್ಲ ಹೀನನು ನಾ ಬಲು
ಮಾನವ ರೊಳಗೆಲ್ಲ ಮಾನಗೇಡಿ ಬಲು
ದೀನರ ಒಳಗೆಲ್ಲ ದೀನನು ನಾ ಬಲು
ಹೀನ ದೀನ ಅಜ್ಞಾನಕೆಲ್ಲ ನಿನ್ನ
ಧ್ಯಾನ ನಾಮ ಬಲ ನಾನೊಂದು ಮಾಡಲು
ತಾನು ಇದರ ಮುಂದೆ ಏನೇನು ಮಾಳ್ಪವು
ಜಾಣ ಸೂಕರ ಗಂಡ ವಾನು ಬಂದರೆ ಇನ್ನು
ಗೋಣಿಯ ನೊಪ್ಪಿಸಿ ತಾನು ಸುಮ್ಮನಾಗೆ
ಏನು ಮಾಡುವನವ ಕ್ಷೋಣಿ ಒಳಗಿನ್ನು
ಶ್ರೀನಾಥ ನಿನ್ನ ದಾಸನಾದವನ ಇನ್ನು
ನಾನಾ ಕಾರಣ ಎಲ್ಲ ಏನೇನು ಮಾಡೋವು
ದಾನವಾಂತಕ ರಂಗ ಗೋಪಾಲವಿಠ್ಠಲ
ಮಾನಾಭಿಮಾಕೆ ನೀನೆ ಗತಿಯೊ ದೇವಾ ॥ 4 ॥

ಆದಿತಾಳ

ಜನರಲ್ಲಿ ಮನ ಹೋಗೆ ನಿನಗೆ ಹೋಯಿತು ಇನ್ನು
ಧನದಲ್ಲಿ ಮನ ಹೋಗೆ ನಿನಗೆ ಹೋಯಿತು ಇನ್ನು
ದಿನದಲ್ಲಿ ಮನ ಹೋಗೆ ನಿನಗೆ ಹೋಯಿತು ಇನ್ನು
ಗುಣದಲ್ಲಿ ಮನ ಹೋಗೆ ನಿನಗೆ ಹೋಯಿತು ಇನ್ನು
ವುಣಿಸಲ್ಲಿ ಮನ ಹೋಗೆ ನಿನಗೆ ಹೋಯಿತು ಇನ್ನು
ಕುಣಿದಾಡ ಮನ ಹೋಗೆ ನಿನಗೆ ಹೋಯಿತು ಇನ್ನು
ಎಣಿಸಲು ಮನ ಹೋಗೆ ನಿನಗೆ ಹೋಯಿತು ಇನ್ನು
ಅಣಕಿಸ ಮನ ಹೋಗೆ ನಿನಗೆ ಹೋಯಿತು ಇನ್ನು
ಅನುವು ದಪ್ಪಿದವೆಲ್ಲ ಅನುವು ಮಾಡಿ ನೋಡೆ
ನಿನಗೆ ಕಾರಣ ವಯ್ಯಾ ನೀನಿಲ್ಲ ದಾರಿಲ್ಲ
ನೀನು ಮಾಡಿಸಿದದು ನಿನಗೆ ಸಮರ್ಪಿತ
ನಿನಗೆ ನೀನೆ ಗತಿ ಎನಗೆ ನೀನೆ ಗತಿ
ಘನ ಮಹಿಮ ನಮ್ಮ ಗೋಪಾಲವಿಠ್ಠಲ ರೇಯ
ಅನುವು ತಪ್ಪಿದವೆಲ್ಲ ಅನುವು ಮಾಡಿ ಪೊರೆಯೊ ॥ 5 ॥

ಜತೆ

ನೀನು ಅನಾದಿ ಸ್ವಾಮಿ ನಾನು ಅನಾದಿ ಭೃತ್ಯ
ನೀನೆ ನೀನೆ ಗತಿಯೊ ಗೋಪಾಲವಿಠ್ಠಲ ॥ 6 ॥

ಧ್ರುವತಾಳ **ಸುಳಾದಿ 38** ರಾಗ : ಪಂತುರಾವಳಿ

ನಿನ್ನ ಸ್ಮರಣಿ ಎನಗೆ ತೀರ್ಥ ಯಾತ್ರಿಗಳಯ್ಯಾ
ನಿನ್ನ ಸ್ಮರಣಿ ಎನಗೆ ಯಜ್ಞ ದಾನಂಗಳಯ್ಯಾ
ನಿನ್ನ ಸ್ಮರಣಿ ಎನಗೆ ವ್ರತ ಚಾಂದ್ರಾಯಣಗಳಯ್ಯಾ
ನಿನ್ನ ಸ್ಮರಣಿ ಎನಗೆ ತಪಸ್ಸು ಸಿದ್ಧಿಗಳಯ್ಯಾ
ನಿನ್ನ ಸ್ಮರಣಿ ಎನಗೆ ಸಾಧನೆ ಸಂಪತ್ತುಗಳು
ನಿನ್ನ ಸ್ಮರಣಿ ಎನಗೆ ಬಲಧೈರ್ಯವೂ ಎನ್ನಯ್ಯಾ
ನಿನ್ನ ಸ್ಮರಣಿ ಎನಗೆ ಇಹ ಪರ ದಲ್ಲಿ ಲಾಭ
ನಿನ್ನ ಸ್ಮರಣಿ ಎನಗೆ ಸಿದ್ಧವಾದ ಮುಕುತೆಯ್ಯಾ
ನಿನ್ನ ವಿಸ್ಮರಣಿ ಇಂದ ಆವ ಕರ್ಮಮಾಡಲು
ಪುಣ್ಯದ ಫಲವನು ದೊರಿಯದು ಜೀವರಿಗೆ
ಕಣ್ಣು ಬಿಗಿದು ಕಟ್ಟಿ ಚಿತ್ರವ ಬರೆದಂತೆ
ನಿನ್ನರಿಯದ ಕರ್ಮ ಅನಂತ ಮಾಡಲ್ಯಾಕೆ
ಕನ್ನಿಕೆಗೆ ಬಾಲ್ಯದಿ ಕಂಡವರು ಪತಿ ಆದಂತೆ
ನಿನ್ನ ಸ್ಮರಣಿಲ್ಲದ ಕರ್ಮ ಈ ಪರಿಯೊ ದೇವ
ನಿನ್ನವಿಸ್ಮರಣೆಯೆ ಗೋಹತ್ಯ ಬ್ರಹ್ಮ ಹತ್ಯ
ನಿನ್ನ ವಿಸ್ಮರಣೆಯೆ ಪಂಚ ಮಹಾಪಾತಕ
ನಿನ್ನ ವಿಸ್ಮರಣೆಯೆ ಸರ್ವ ಅಪರಾಧವಯ್ಯಾ
ನಿನ್ನ ವಿಸ್ಮರಣವೆ ಸಕಲ ನಿಷೇಧಗಳು
ನಿನ್ನ ಸ್ಮರಣವೆ ಇಷ್ಟಗಳಯ್ಯಾ
ನಿನ್ನ ಸ್ಮರಣೆ ಇರಲು ಅಧಮ ಕರ್ಮಮಾಡಲು
ಅನ್ಯಾಯ ವೆನಿಸದು ಆಗಮ ಸಮ್ಮತವು
ಘನ್ನ ದಯಾನಿಧೆ ಗೋಪಾಲ ವಿಠ್ಠಲ
ನಿನ್ನ ಸ್ಮರಣೆ ಪುಣ್ಯ ನಿನ್ನ ವಿಸ್ಮರಣೆ ದೋಷ ॥ 1 ॥

ಮಟ್ಟತಾಳ

ಜಡ ಚೇತನ ಜ್ಞಾನ ಅಡಿಗಡಿಗೆ ತಿಳಿದು
ಜಡಕೆ ಲಯವೆ ಬಗೆದು ಚೇತನಗಳೆರಡು
ಧೃಡವಾಗಿ ತಾತನ್ನ ಒಡಲೊಳಗಿಪ್ಪನ್ನ
ಒಡೆಯನೆಂದು ತಿಳಿದು ಅಡಿಗಳಿಗೆ ಎರಗಿ
ಕೊಡುವವ ಕೊಳುವನು ಬಿಡದಲೆ ನೀನೆಂದು
ನಡಿಸುವ ನುಡಿಸುವ ಹರಿ ನೀನೆಂದರಿದು
ಎಡ ಬಲದಲ್ಲಿ ಇನ್ನು ಪರಿವಾರ ಸಹವಾಗಿ
ಕಡಕ ವಿಲ್ಲದೆ ನೋಡಿ ಜಡಮತಿಯನೆ ಬಿಟ್ಟು
ನುಡಿವದೆ ಸ್ಮರಣೆಯು ಕೊಡುವದು ಮಹಾಫಲವು
ಕಡು ಮೂರ್ಖತನದಿ ಬಿಡದಲೆ ಹಗಲಿರುಳು
ನುಡಿನುಡಿಗೆ ಘರ್ಜಿಸಿಡಲ್ಯಾತಕೆ ಮೊರಿಯಾ
ಮಿಡುಕುವದಲ್ಲದೆ ಮೃಡಸಖನು ಮೆಚ್ಚಾ
ಕಡಲಶಯನ ರಂಗ ಗೋಪಾಲವಿಠ್ಠಲ
ಕೊಡು ನಿನ್ನ ಸ್ಮರಣೆ ಬಿಡದಲೆ ಕ್ಷಣ ಕ್ಷಣಕೆ ॥ 2 ॥

ರೂಪಕತಾಳ

ನಾ ಕರ್ತ ನೆಂದದರಿಂದಲೇವೇ ಸಕಲ
ಶೋಕಾನರ್ಥಗಳು ಜೀವರಿಗೊದಗೋದು
ನೀ ಕರ್ತಾ ನೆಂದದರಿಂದ ಜೀವರಿಗೆ
ನರಕಾದ್ಯನರ್ಥಗಳು ಆಗ ಲರಿಯವಯ್ಯಾ
ಈ ಕುರುಹಕೆ (ಒ) ತಂದು ದೃಷ್ಟಾಂತರವು ಇನ್ನು
ಆಕಳನ ಕೊಂದಂತೆ ಆ ವಿಪ್ರನೆ ಸಾಕ್ಷಿ
ಶೋಕ ಸುಖವೆರಡು ನೀನು ಮಾಡಿಸಿ ಇನ್ನು
ಹಾಕು ದ್ವಿ ಫಲವನು ಜೀವರ್‍ಯೋಗ್ಯತ ಅರಿದು
ನೀ ಕಾಣಿಸಿ ಕೊಂಬುವನೆ ನಿನ್ನ ಕರ್ತೃತ್ವಕ್ಕೆ
ಸಾಕಲ್ಯವ ಗರಿದು ಏಕ ಚಿತ್ತದಲ್ಲಿಪ್ಪ
ನೀ ಕರ್ತು ಮಾ ಸ್ವಾಮಿ ನಾ ಕುಚ್ಛಿತ ಭೃತ್ಯಾ
ನೀ ಕಾಯೊ ಎನ್ನಯ್ಯಾ ಸಾಕುವ ಬಿರುದುಂಟು
ನಾ ಕೃತಘ್ನ ಬಲು ನೀ ಕರುಣಾಳಯ್ಯಾ

ನಾ ಕಪಟಿಯೊ ದೇವ ನೀ ದಯಾವಾರಿಧಿ
ಸಾಕಲ್ಯ ಗುಣಪೂರ್ಣ ಗೋಪಾಲ ವಿಠ್ಠಲ
ಹಾಕದಿರೆನ್ನ ನಾನಾ ಕುಯೋನಿಗಳಲ್ಲಿ ॥ 3 ॥

ಝಂಪಿತಾಳ

ಆವಲೀಲೆಯೊ ನಿನ್ನದಾವ ಸ್ವಭಾವವೊ
ಜೀವರೊಡನೆ ಆಟ ಆವ ಸುಖವೊ ನಿನಗೆ
ನಾವಸ್ವತಂತ್ರರು ನೀ ಸರ್ವಸ್ವಾತಂತ್ರ
ಬಾವೊದೆಮ್ಮಿಂದ ಏನು ನಿನಗೆ ದೇವ
ನಾವು ಊಳಿಗರು ನಿನಗೆ ಬೇಕಿವೆಂಬೀವೇನು
ನೀ ಊಳಿಗನಾಗಿ ಮಾಡಿಸಿ ನಮ್ಮಿಂದ
ಜೀವರಿಗೆ ಫಲವನು ತಂದು ತಂದು ನೀವೆ
ದೇವ ನಿನಗೆ ನೋಡ ಒಂದು ಕಾರಣವಿಲ್ಲ
ದೇವ ನಿನಗೆ ನೋಡ ಒಂದು ಕರ್ಮಗಳಿಲ್ಲ
ಆವಾವ ಪರಿ ನಿನ್ನ ಲೀಲೆ ತೋರಿದಿ
ದೇವ ನೀ ಬಂಡಿಯ ಬೋವಾದೆ ಅರ್ಜುನಗೆ
ಆವುಗಳ ಕಾದೆ ಸನಕಾದಿಗಳ ಪಾಲಿಸಲಿ
ಆ ಉಗ್ರಸೇನನ ಸೇವೆಯನು ಮಾಡಿದೆ
ದೇವ ಗೋಪಿಯ ಕೈಯ್ಯ ಕಟ್ಟಿ ಹಾಕಿಸಿ ಕೊಂಡೆ
ನೀವಟುವಿಪ್ರ ನಾಗಿ ಯಜ್ಞದಲಿ ಪೋಗಿ
ದೇವ ಬಿಕ್ಷವ ಬೇಡಿ ಭಕ್ತನ್ನ ಪಾಲಿಸಿದೆ
ಕಾವಲಿ ಕಾದೆ ಆತನ್ನ ಮನೆದ್ವಾರದಲಿ
ಆವ ಅಪೇಕ್ಷಯು ನಿನಗೆ ಒಂದೂ ಇಲ್ಲ
ಧಾವತಿ ಬಡುವೆ ನಿನ್ನ ಭಕುತರಿಗಾಗಿ
ನೋವಾಗುವೆ ನಿನ್ನ ಭಕ್ತರು ದಣಿದರೆ
ಆವ ನಿನ್ನ ಕಾರ್ಯ ಭಕ್ತರ ಪಾಲಣೆ
ಆವ ನಿನ್ನ ಕ್ರಿಯಾ ದನುಜರ ಮರ್ದನೆ
ಆವ ವ್ಯಾಪಾರವು ನಿನಗೆ ಮಾಡೆಂಬರು ಪೇಳುವರುಂಟೆ ದೇವ
ಕಾವ ಕರುಣೆ ನಮ್ಮ ಗೋಪಾಲ ವಿಠ್ಠಲ
ಸೇವಕರ ಪಾಲಿಸುವ ಬಗೆ ಎಂತೆಂತೋ ದೇವ ॥ 4 ॥

ತ್ರಿವಿಡಿತಾಳ

ಎನ್ನ ಅಜ್ಞಾನ ವೆಲ್ಲ ನಿನ್ನಾಧೀನವಯ್ಯಾ
ಎನ್ನ ಕರಣ ಚೇಷ್ಟೆ ವ್ಯಾಪಾರ ನಿನ್ನಾಧೀನ
ಎನ್ನ ಪ್ರೇರಣೆ ಪ್ರತಿಕ್ಷಣಕೆ ನಿನ್ನಾಧೀನ
ಎನ್ನ ಸ್ಮರಣೆ ಸ್ಫುರಣೆ ನಿನ್ನಾಧೀನ ದಮ್ಮಯ್ಯಾ
ಎನ್ನ ಸ್ವಾಮಿಯೆ ನೀನು ನಿನ್ನ ಭೃತ್ಯನು ನಾನು
ಇನ್ನೊಂದು ನಾನರಿಯ ಎನ್ನೊಡಿಯನೆ ಕೇಳು
ಎನ್ನ ಐಶ್ವರ್ಯವು ನಿನ್ನ ಪರವಾಗಲಿ
ಎನ್ನ ಆರೋಗ್ಯವು ನಿನ್ನ ಪರವಾಗಲಿ
ಎನ್ನ ಆಯುಷ್ಯವು ನಿನ್ನ ಪರವಾಗಲಿ
ಎನ್ನ ಸಕಲ ವ್ಯಾಪಾರ ನಿನ್ನ ಪರ ಆಗಲಿ
ಎನ್ನ ಚರಣಗಳು ನಿನ್ನ ಯಾತ್ರಿಯ ಮೆಟ್ಟಲಿ
ಎನ್ನ ಕರಗಳಿನ್ನು ನಿನ್ನ ಪೂಜೆ ಮಡಲಿ
ಎನ್ನ ಕರ್ಣಗಳಿನ್ನು ನಿನ್ನ ಕಥೆ ಕೇಳಲಿ
ಎನ್ನ ಚಕ್ಷುಸುಗಳು ನಿನ್ನ ಮೂರ್ತಿನೋಡಲಿ
ಎನ್ನ ಜಿಹ್ವೆಯು ಸತತ ನಿನ್ನ ಕೊಂಡಾಡಲಿ
ಎನ್ನ ಶಿರಸ್ಸು ನಿನ್ನ ಚರಣಕ್ಕೆರಗುತಿರಲಿ
ಎನ್ನ ಸರ್ವಾಂಗವು ಸಾಷ್ಟಾಂಗ ಹಾಕುತ
ಇನ್ನು ಹಗಲಿರುಳು ನಿನ್ನ ವಾಲ್ಗೈಸಲಿ
ಎನ್ನ ಮನೋ ವಾಕ್ಕಾಯದಿಂದಿನ್ನು
ಇನ್ನು ಮಾಡಿದ ಕರ್ಮ ನಿನ್ನ ಪರವು ಮಾಡಿ
ನಿನ್ನವ ನೆನೆಸಯ್ಯಾ ಘನ್ನ ದಯಾನಿಧೆ ಗೋಪಾಲವಿಠ್ಠಲ
ಇನ್ನಿದೆ ಮಾಡಿಸೋ ಅನಂತ ಜನ್ಮಕ್ಕೆ ॥ 5 ॥

ಅಟ್ಟತಾಳ

ಕೆಡಿಸುವನು ನೀನೆ ಇಡಿಸುವನು ನೀನೆ
ಕೊಡಿಸುವನು ನೀನೆ ಹಿಡಿಸುವನು ನೀನೆ
ಮಡದಿ ಇದ್ದರೆ ಮನೆ ಕಡುಶೋಭ ಎಂಬೋರು
ಹುಡುಗರಿದ್ದರೆ ಮನೆ ಕಡು ಶೋಭ ಎಂಬೋರು
ಒಡಿವೆ ಇದ್ದರೆ ಮನೆ ಕಡು ಶೋಭ ಎಂಬೋರು

ಪಡೆದರಿದ್ದರೆ ಮನೆ ಕಡು ಶೋಭ ಎಂಬೋರು
ಜಡಗಳ ಹಿಡಕೊಂಡು ಮಿಡುಕೋ ಜೀವರ ನೋಡಿ
ಎಡವಿ ಬಿದ್ದಂತೆ ಎನಗಾಗುತಿದೆ ದೇವಾ
ಜಡಮತಿ ಜಡಸ್ನಾನ ಜಡಕರ್ಮ ಜಡಪೂಜೆ
ಜಡದಿ ಭಿನ್ನ ನಿನ್ನ ಅಡಿಗಳ ವಿಡಿಯದೆ
ಕಡೆಯಿಲ್ಲದ ಕರ್ಮ ಬಿಡದೆ ಮಾಡಲಿ ಯಾಕೆ
ಒಡೆಯಾ ನಿನ್ನ ಪ್ರೀತಿ ಪಡಿಯ ದರಿಯ ರಯ್ಯಾ
ಕಡು ಸಂಪತ್ತುಗಳು ನಿನ್ನ ನುಡಿಗಳು ಎನಗಿನ್ನು
ಬಿಡೆನೊ ಎಂದೆಂದಿಗೂ ಧೃಢವಾಗಿ ಮನದೊಳು
ಕೊಡು ಇನ್ನು ಈ ಭಾಗ್ಯ ಒಡೆಯ ದೇವರದೇವ ಗೋಪಾಲವಿಠ್ಠಲ
ಕೊಡು ಒಂದು ಕೊಡದಿರೆ ಬಿಡೆ ನಿನ್ನ ಚರಣವ ॥ 6 ॥

ಆದಿತಾಳ

ದಣವು ಬಂದರೆನಗೆ ಏನು ಅವ
ಗುಣವು ಬಂದರೆ ಎನಗೆ ಏನು
ಜನುಮ ಬಂದರೆನಗೆ ಏನು ಸು
ಗುಣವಾಗಿ ಬಂದರೆನಗೆ ಏನು
ನಿನಗೆ ನನಗೆ ಭೇದ ತಿಳಿದು
ನನಗೆ ದೇಹಕೆ ಭೇದ ತಿಳಿದು
ಕ್ಷಣ ಕ್ಷಣಕೆ ನೀಸ್ವಾಮಿ ಎಂದು
ಕ್ಷಣ ಕ್ಷಣಕೆ ನಿನ್ನ ಭೃತ್ಯನೆಂದು
ಎಣಿಸುತ್ತ ಎನಗಿಂದ ಗುಣೌಧಿಕರ ಹಿಡಿದು
ಫಣಿ ರುದ್ರ ಅಜಸಿರ ಪರಿಯಂತ ದಿನದಿನದಿ
ಅನು ವರಿತು ಕೊಂಡಾಡಿ ಗುಣ ವುಪಾಸನಿಯನ್ನು
ಎನಗೊಂದು ಇರಲಯ್ಯಾ
ಮುನಿಗಳ ಮನ ಪ್ರಿಯ್ಯಾ
ಇನಿತು ಸುಖವೆ ಸಾಕು ಇನ್ನೊಬ್ಬರಿಗೆ ಅಂಜೆ
ಎನಗೊಂದು ಸುಖವಿಲ್ಲ ನಿನ್ನ ನೋಡೋದಕ್ಕಿಂತ
ಗುಣಪೂರ್ಣ ಚಲುವ ಗೋಪಾಲ ವಿಠ್ಠಲ
ನಿನಗೆ ಎನಗೆ ಲೆಂಕೆ ಎನಗೊಬ್ಬರಿನ್ನಿಲ ॥ 7 ॥

ಜತೆ

ನಂಬಲಿ ನಾನಿನ್ನು ಎಷ್ಟರ ಮನುಜ
ನೀ ನಂಬಲು ನಂಬಿದೆ ಗೋಪಾಲ ವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 39** ರಾಗ : ಸಾವೇರಿ

ನಿನ್ನ ಚಿತ್ತ ಎನ್ನ ಭಾಗ್ಯ ಇನ್ನೊಬ್ಬರೆನಗೆ ಯಿಲ್ಲ
ಮನ್ನಣೆ ಅಮನ್ನಣೆ ನಿನ್ನದೋ ಸರ್ವೇಶನೆ
ಬೆನ್ನು ಕೊಟ್ಟೆನೊ ನಿನಗೆ ಎನ್ನ ಏನನ್ನ ಮಾಡು
ಕಣ್ಣೆಲಿ ಕಂಡ್ಯಾ ಅಷ್ಟು ಎನ್ನ ಕೇಳೋಣ ನಿನ್ನ
ಬಣ್ಣಿಸಿ ನಿನ್ನ ನಾನು ಘನ್ನ ಬೇಡುವುದಿಲ್ಲ
ನನ್ನದೆಂಬೊ ಅಹಂಕಾರವನ್ನು ಬಿಡಿಸೊ ದೇವಾ
ಎನ್ನ ಸಂಕಲ್ಪವೆಲ್ಲ ನಿನ್ನ ಆಧೀನವಯ್ಯಾ
ನಿನ್ನ ಸಂಕಲ್ಪಕ್ಕಿನ್ನು ಭಿನ್ನ ಭಿನ್ನಗಳಿಲ್ಲ
ನಿನ್ನಿಚ್ಛೆ ನೀ ಪ್ರೇರಕ ನಿನ್ನದೊ ಎನ್ನ ಭಾರಾ
ಇನ್ನು ಮುಂದೆ ಎಂದೆಂದು ಇನ್ನಿದೆ ಸಿದ್ಧವಯ್ಯಾ
ಇನ್ನೊಂದು ನಾನರಿಯೆ ಎನ್ನೊಡಿಯನೆ ಕೇಳು
ಮನ್ನ ವಾಚಾ ಕಾಯದಿ ಇನ್ನು ಹೀಗೆ ಹಾರೈಸಿ
ಬಿನ್ನಹ ಮಾಡಿದೆ ನಿನ್ನ ನಿಲಿಸಿ ಕೊಂಡು
ಚಿನ್ನುಮಯ ಮೂರುತಿ ಗೋಪಾಲವಿಠ್ಠಲ
ನಿನ್ನ ಬೇಡುವೆನಲ್ಲದನ್ಯರಿಗಾಲ್ಪರಿಯೆ ॥ 1 ॥

ಮಟ್ಟತಾಳ

ನಿನ್ನಿಂದಲಿ ದತ್ತವಿನ್ನು ಆಗದ ವಸ್ತು
ಅನಂತ ವಿದ್ದರು ಇನ್ನೊಲ್ಲೆ ಇನ್ನೊಲ್ಲೆ
ಅನ್ಯಕರ್ಮವ ಮಾಡಿ ಅನ್ಯ ದೈವವ ನೋಡಿ
ಎನ್ನುದರ ಪೂರ್ತಿ ಮಾಡೋದಕ್ಕಿಂತ
ಬಣ್ಣ ಗೆಟ್ಟವನಾಗಿ ಅನ್ಯವಿಷಯವ ಬಿಟ್ಟು
ನಿನ್ನವನಾಗಿನ್ನು ಅನ್ಯವಿಲ್ಲದಲೆ ಅ
ರಣ್ಯ ವಾಸದಿನ್ನು ಹಣ್ಣು ಹಂಪಲಮೆದ್ದು

ನಿನ್ನ ವಿಷಯಕ್ಕೆ ಕರ್ಮ ನಿನ್ನ ವಿಷಯಕ್ಕೆ ಧರ್ಮ
ಇನ್ನೇನಾದದ್ದು ನಿನ್ನ ಪರವು ಮಾಡಿ
ಎನ್ನ ಇಡಿಸಿದರೆ ಘನ್ನುಪಕಾರವು ಇನ್ನೆಂದಿಗೆ ಮರಿಯೆ
ಚಿನ್ನುಮಯ ಮೂರುತಿ ಗೋಪಾಲವಿಠ್ಠಲ
ನಿನ್ನ ಚಿತ್ತಕೆ ಬಾರದಿನ್ನೆಂದಿಗೆ ವಲ್ಲೆ ॥ 2 ॥

ರೂಪಕತಾಳ

ಹಾಗೆ ಇತ್ತೆ ಇನ್ನು ಹಾಗೆ ಆಗಲಿ ದೇವ
ಹೀಗೆ ಇತ್ತೆ ಇನ್ನು ಹೀಗೆ ಆಗಲಿ ದೇವ
ಹಾಗೆ ಹೀಗೆ ಇನ್ನು ಎರಡು ಆಗಲಿ ದೇವ
ಆಗ ಅಂಜುವನಾರು ಈಗ ಅಳುಕುವನಾರು
ಆಗದಂಥ ಕಾರ್ಯ ಆಗಮಾಡುವನಾರು
ಆಗುವಂಥ ಕಾರ್ಯ ಅಗಲಿಸುವನಾರು
ಬಾಗಿದೆ ನಿನ್ನ ಚರಣಗಳಿಗೆ ನಾನು
ಹಾಗೆ ಆದರೂ ಲೇಸೆ ನೀ ಯಿತ್ತ ಭಾಗ್ಯಕ್ಕೆ
ಹೋಗು ಹೊರಡೆಂದರೆ ಆಗೋದೆ ನಿನ್ನಿಂದ
ಸಾಗು ಸಾಗಿ ಇನ್ನು ತೂಗಿದ ತೊಟ್ಟಲು
ಹೋಗಿ ಹೋಗಿ ತನ್ನ ಸ್ಥಳಕ್ಕೆ ನಿಲ್ಲುವದು
ಸಾಗರ ಶಯನ ಗೋಪಾಲವಿಠ್ಠಲ
ಭೋಗ ತೀರಿಸಿ ದೋಷ ನಿಯೋಗ ಮಾಡೊ ದೇವ ॥ 3 ॥

ಝಂಪೆತಾಳ

ನೀನಿತ್ತ್ಯ ನಾನಿತ್ಯ ಅನಾದಿ ಕಾಲದಿ
ಏನು ಆಗುವ ಪ್ರೀತಿ ನಿನ್ನಿಂದಲೆ ಎನಗೆ
ಕಾಣದೊಂದು ಉಂಟೆ ನಿನ್ನ ಕಂಡವರಿಗೆ
ಜಾಣತನವ್ಯಾಕೆ ಎನ್ನೊಡನೆ ಮಾಜಲಿ ಬೇಡ
ಪ್ರಾಣರಿಗೆ ಒಂದೊಂದನಿತ್ಯ ವಸ್ತುಗಳಲ್ಲಿ
ಏನು ಭ್ರಮ ಪುಟ್ಟಿಸಿ ಮರಳು ಮಾಡುವಿ ದೇವ
ಶ್ರೀನಾಥ ನಿನ್ನ ಸಾಹಸಕೆ ಆನೇನೆಂಬೆ
ಧೇನಿಸಿ ನೋಡ ಶತ ಆನಂದ ಗೊಶವಲ್ಲ

ಕಾಣಿವೆ ನೆನ್ನಂತ ನರಗುರಿಯು ನಿನ್ನ ನಾ
ಶ್ರೀನಿವಾಸನೆ ನಮೊ ನಮೊ ಎಂದೆನೋ
ದೀನ ರಕ್ಷಕ ದೇವ ಗೋಪಾಲ ವಿಠ್ಠಲ
ನೀನು ಕುಣಿಸಿದಂತೆ ನಾನು ಕುಣಿವೆನಯ್ಯಾ ॥ 4 ॥

ತ್ರಿವಿಡಿತಾಳ

ವಾಸುದೇವನೆ ನಿನಗೆ ವಾಸೆ ಒಂದೇ ಕೇಳು
ಈಶ ನೆಂಬೊ ಪೆಸರು ನಿನಗಯ್ಯಾ
ದಾಸನೆಂಬೊ ಪೆಸರು ನಿನಗೆ ಎಂದಿಗೆ ಯಿಲ್ಲ
ದಾಸತ್ವ ತನವೆಲ್ಲ ನಮ್ಮದಯ್ಯಾ
ದಾಸರು ಇಲ್ಲದ ಈಶತ್ವ ಪ್ರಕಟಿಸದು
ಈಶನು ಇಲ್ಲದ ದಾಸತ್ವ ತನ ವ್ಯಾಕೆ
ದೇಶ ಕಾಲ ಪಾತ್ರ ಈಸು ಕೂಡಿದ ಅಲ್ಲಿ
ಕಾಸುಕೊಡುವ ದಾತನಿಲ್ಲದಿರೆ ಕಾಸು ಇದ್ದವನಲ್ಲಿ
ದೇಶ ಪೋಗುವದೊ ದೇಶಿದ್ದಲ್ಲಿಗೆ ಕಾಸು ಬಾಹುವದೆ
ದಾಸತ್ವ ಎನ್ನಲ್ಲಿ ಲೇಶಮಾತ್ರವನ್ನ
ಆಶ್ರೈಸಿ ಇತ್ತೆ ಈಶ ಎನಗುಂಟು
ದೇಶ ದೇಶದವರು ಕಾಲಕೆ ಕುರುಹ
ಮಾಸದೆ ಕಂಡರೆ ಪೋಷಿಸುವರು ಬಿಡದೆ
ಲೇಸಾಗಿ ಇಬ್ಬರು ಒಂದೆ ಸ್ಥಳದಲ್ಲಿ ವಾಸವಾಗಿ ಇದ್ದು
ನಾಶ ರಹಿತರಾಗಿ ಕ್ಲೇಶಕೊಬ್ಬನ ಮಾಡಿ
ಕ್ಲೇಶರಹಿತ ನೀನಾಗಿ ಘಾಸಿಯ ಬಡಿಸೆಮ್ಮ
ಮೀಸಲಾಗಿ ನೀ ನಿಂದು
ದೋಷರಹಿತ ರಂಗ ಗೋಪಾಲವಿಠ್ಠಲ
ದಾಸರ ಬಿಡದಿರು ಏಸೇಸು ವಿಡಿದರು ॥ 5 ॥

ಅಟ್ಟತಾಳ

ಧನದಿಂದ ನೆಂಟರು ಕೆಲವರು ಎನಗಿನ್ನು
ತನುವಿನ ನೆಂಟರು ಕೆಲವರು ಎನಗಿನ್ನು
ಮನದಿಂದ ನೆಂಟರು ಕೆಲವರು ಎನಗಿನ್ನು

ದಿನದಿಂದ ನೆಂಟರು ಕೆಲವರು ಎನಗಿನ್ನು
ಗುಣದಿಂದ ನೆಂಟರು ಕೆಲವರು ಎನಗಿನ್ನು
ಇನಿತು ನೆಂಟರೊಳು ಎನಗೆ ಒಬ್ಬರ ಕಾಣೆ
ಅನುವಾಗಿ ಇದ್ದರೆ ಅಷ್ಟು ನಮ್ಮವರಲ್ಲ
ಅನುವು ತಪ್ಪಿದರಿನ್ನು ಆರು ನಮ್ಮವರಲ್ಲ
ನನಗೆ ನಿನಗೆ ನೆಂಟತನವು ಹೀಗಲ್ಲಾ
ಅನಿಮಿಷ ಅಗಲದೆ ಅನಿಮಿತ್ತ ಬಂಧು ಆಗಿ
ಕ್ಷಣ ಬಿಡದಲೆ ಕಾಯುವ ಗೋಪಾಲವಿಠ್ಠಲ
ನಿನಗೆ ಮಾಡುವದೇನು ನಮೊ ನಮೊ ಎನ್ನಿಂದಾ ॥ 6 ॥

ಆದಿತಾಳ

ನೀನೇವೆ ವೈಕುಂಠ ನೀನೇವೆ ಮುಕುತೆನಗೆ
ನೀನೇವೆ ಸಕಲಾದಿ ತೀರ್ಥಯಾತ್ರಿಗಳೆನಗೆ
ನೀನೇವೆ ಇಹ ಪರದಲ್ಲಿ ಕಾವುವಾ ನೀನೊ
ಆನೆಯಲ್ಲಿ ನೋಡಲು ನೀನೆ ಕಾಣಿಸುವದು
ನೀನಿದ್ದ ಸ್ಥಳದಲ್ಲಿ ಸಕಲ ದೇವತೆಗಳು
ನೀನೆವೆ ಫಲಂಗಳು ಸಕಲರಲ್ಲಿ ನಿಂತು
ದೀನ ಜನರ ಪಾಲ ಗೋಪಾಲವಿಠ್ಠಲ
ಜ್ಞಾನಿಗಳಿಗೆ ಪ್ರೀಯ ನಿನಗೆ ಜ್ಞಾನಿ ಪ್ರಿಯಾ ॥ 7 ॥

ಜತೆ

ಕಾಣದವನೆ ನಿನ್ನ ಕಂಡದ್ದು ಹಾರೈಸುವ
ಕಾಣುವ ಬಿಡ ನಿನ್ನ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 40** ರಾಗ : ರೇಗುಪ್ತಿ

ಧ್ಯಾನಮಾಡು ಮನವೆ ದೈನ್ಯ ವೃತ್ತಿಯಲ್ಲಿನ್ನು
ಜ್ಞಾನವಂತನಾಗಿ ಗೆದ್ದು ವಿಷಯಾ
ಹಾನಿ ಲಾಭಗಳಿಗೆ ಹರ್ಷ ಕ್ಲೇಶವು ಬಡದೆ
ಜಾಣತನದಿ ಚಿಂತಿಸು ಜಗದೀಶನ್ನ
ನಾನು ಎಂಬೋದು ಬಿಟ್ಟು ನಿತ್ಯದಲ್ಲಿ ಇನ್ನು

ಜ್ಞಾನ ಪೂರ್ಣ ಶ್ರೀ ಹರಿಯ ಧೇನಿಸಿನ್ನು
ಯೋನಿ ಯಂಭತ್ತು ನಾಲ್ಕು ಲಕ್ಷ ಬಂದ ಕಾಲಕ್ಕೂ
ನೀನು ಪಕ್ವ ಬಾರದಾ ಗತಿಯು ಇಲ್ಲಾ
ಕಾಣೆ ನಿನಗೆ ಮುಖ್ಯ ಸಾಧನ ಸಂಪತ್ತು
ಮಾನವ ಯೋನಿಯಲ್ಲೆ ಘಳಿಸಬೇಕು
ಕ್ಷೋಣಿ ಒಳಗೆ ಈ ಜನ್ಮ ಬಪ್ಪದೆ ದುರ್ಘಟ
ಶ್ರೀನಾಥನ ಕಾರುಣ್ಯವೆಂದು ತಿಳಿಯೋ
ಶ್ವಾನ ಸೂಕರ ನಾನಾಯೋನಿಬಂದ ಕಾಲಕ್ಕೂ
ಮಾನಿಸನಾಗಿ ಚಿಂತಿಸಲಿ ಬೇಕು
ಜ್ಞಾನ ಅಲ್ಲಿ ದೊರಿಯದು ಕುಚ್ಛಿತ ಯೋನಿಯಲ್ಲಿ
ನಾನಾ ಭವಣೆ ಯುಂಟು ನಾ ಎನೆಂಬೆ
ನಾನಾಕು-ಜೀವರಿನ್ನು ನಾಲ್ಕು ಬಗೆಯ ಕರ್ಮ
ತಾವು ಮಾಡು ತಿಹರೋ ದೇಹಧಾರಿಗಳಾಗಿ
ಕಾಣಿಸುವರು ಎಲ್ಲಾ ಜಗದವೊಳಗೆ ಇನ್ನು
ಜ್ಞಾನಮಾತ್ರ ನೀ ಪಿಡಿದು ಕುಳಿತುಕೋ
ಗೇಣು ಮೊಳವು ಅಣುರೇಣು ಸ್ಥಳದ ಪರಿ
ನಾನಾ ದೇಹ ಧಾರಿಗಳಿಂದ ಆಗುವ ಕರ್ಮ ಕಾಣೋ
ನಿನ್ನಲ್ಲಿ ಇದ್ದು ಸ್ವಾಮಿ ಮಾಡಿಪನೆಂದು
ಖೂನ ಪಿಡಿದು ಕುಣಿ ಕುಣಿದಾಡೋ
ನಾನು ಅಸ್ವತಂತ್ರ ನನ್ನಂತೆ ಅವರೆಂದು
ಕಾಣು ಅಲ್ಲಿ ವ್ಯಾಪಾರ ಹರಿಯೆ ಎಂದು
ಮಾನವಾ ಬಿಟ್ಟು ಮಮತೆಯಲ್ಲಿ ನಮೋ ಯೆಂದು
ಪ್ರಾಣನಾ ಸಾಕ್ಷಿಯಾಗಿ ಹರಿಗರ್ಪಿಸು
ಹೀನರಲ್ಲಿ ದಯಾ ಘನರುಗಳಲ್ಲಿ ನೇವೆ
ನೀನು ಅರಿತು ಮಾಡು ನಿತ್ಯದಲ್ಲಿ
ದೀನ ಜನಬಂಧು ಗೋಪಾಲವಿಠ್ಠಲನ್ನ
ಕಾಣು ಚೇತನಾ ಚೇತನದಿ ಇಪ್ಪನೆಂದು ॥ 1 ॥

ಮಟ್ಟತಾಳ

ಭಾವಾದ್ವೈತ ಕ್ರಿಯಾದ್ವೈತ ದ್ರವ್ಯಾದ್ವೈತ
ಇವು ಮೂರನೆ ದೇವನಲ್ಲಿ ಇಪ್ಪವೆಂದು ಅರಿದು ನೋಡು

ಆವಾವಲ್ಲಿ ಚಿಂತಿಸು ಬಿಡದೆ
ಕಾವ ಕೊಲ್ಲುವಲ್ಲಿ ಈವಲ್ಲಿ ಕೊಂಬಲ್ಲಿ
ಧಾವತಿಗಳಲ್ಲಿ ಸುಲಭ ಸೂಕ್ಷ್ಮದಲ್ಲಿ
ಭಾವ ಕ್ರಿಯ ದ್ರವ್ಯ ದೇವ ದೇವ ಎಂದು
ನೀ ವಿವೇಕದಿ ನೀಚ ಊಚ ಕ್ರಮದಿ
ಜೀವಿಗಳ ಗತಿಯು ಜಿತವಾಗಿ ಅರಿತು
ಭಾವ ಶುದ್ಧದಲ್ಲಿ ಭಕುತಿ ಪೂರ್ವಕದಿಂದ
ನೀ ವೊಲಿ ವೊಲಿದು ತಿಳಿದು ವೊಲಿಸು ವೊಲಿಸಿ ಪಾಡು
ಸೇವ್ಯ ಸೂತ್ರವು ನಿಂದ್ಯ ನೋವು ದಂಡನೆ ಎಲ್ಲಾ
ದೇವ ಪೂಜ್ಯ ಎಂಬ ಭಾವ ಕ್ರಿಯವ ಘಳಿಸು
ಆವ ವಿಷಯದಲ್ಲಿ ದೇವಾದೇವರನ್ನ
ಸಾವ ಧಾನದಿ ಹುಡುಕಿ ಪಾವನಾಂಗ ನಾಗೊ
ಕೋವಿದರ ಪ್ರಿಯ ಗೋಪಾಲವಿಠ್ಠಲ
ಕಾವ ನಿನ್ನ ಬಿಡದೆ ಆವಲ್ಲಿ ಇದ್ದರು ॥ 2 ॥

ರೂಪಕ ತಾಳ

ನೋಡಿಸಿದರೆ ನೋಡು ಆಡಿಸಿದರೆ ಆಡು
ಕೂಡಿಸಿದರೆ ಕೂಡು ಓಡಿಸಿದರೆ ಓಡು
ಬೇಡಿಸಿದರೆ ಬೇಡು ನೀಡಿಸಿದರೆ ನೀಡು
ಮಾಡಿಸಿದರೆ ಮಾಡು ವಿಹಿತ ಅವಿಹಿತಗಳು
ಕೇಡು ಎಂದು ತಿಳಿಯೊ ಅವಿಹಿತ ಮಾಡಿಸಿದರೆ
ಕೇಡು ಲಾಭಂಗಳು ಮಾಡಿಸಿದರೆ ನೀನು
ಮಾಡಿಸಿದರೆ ಕೇಡು ಬೇಡಿಕೊ ದೈನ್ಯದಿ ಪಶ್ಚಾತ್ತಾಪನಾಗು
ನೋಡು ನಿನಗಾವ ವಿಷಯಂಗಳಲಿನ್ನು
ಮಾಡಿಸುವ ಅನುಭವ ಹರಿಯೆ ಯೆನ್ನು
ಕೂಡಿಸು ಯಾವತ್ತು ಜಡ ಚೇತನಗಳಲ್ಲಿ
ಗೂಡು ಮಾಡಿಟ್ಟಂಥ ಮೂರ್ತಿಗಳೆಲ್ಲ
ಕ್ರೋಢೀಕರಿಸಿ ಧ್ಯಾನ ಮಾಡು ನಿನ್ನ ಮನದಿ
ಕೇಡು ತೋರದು ನಿನ್ನ ಸಾಧನಕೆ
ಮೂಢಮತಿಯಲ್ಲಿ ಜಡ ಪ್ರತಿಮೆ ಪಿಡಿದು

ಮಾಡೋ ಅಲ್ಲಿ ಪೂಜೆ ಇದೆ ಬಗೆ ಚಿಂತಿಸು
ಷೋಡಶ ಕಳೆಉಳ್ಳ ಲಿಂಗದ ಒಳ ಹೊರಗೆ
ಮಾಡಿ ಮಾಡಿಸುವ ಹರಿಯ ಮಹಿಮೆ ತಿಳಿ
ನಾಡಿ ಗೊಡೆಯರಂಗ ಗೋಪಾಲವಿಠ್ಠಲ
ಈಡಿಲ್ಲದ ದೈವನ ನೋಡು ಮನದಿ ನಿಲಿಸಿ ॥ 3 ॥

ಝಂಪಿತಾಳ

ಒಂದೆ ಪಿಡಿದು ಮತ್ತಾನಂತವ ಚಿಂತಿಸು
ಒಂದೆ ಚಿಂತಿಸು ಮತ್ತಾನಂತವೆಲ್ಲ
ತಂದುಕೊ ನಿನ್ನಲ್ಲಿ ಕ್ಷಣಕ್ಷಣಕೆ ಸ್ಮೃತಿಯನು
ಸಂದೇಹ ಬಿಟ್ಟು ಸರ್ವೋತ್ತಮನೆಂದು ಭಿ
ನ್ನಾದಿಯನು ತಿಳಿಯದಿರು ಹರಿ ಅಂಶಿ ಅಂಶಕ್ಕೆ
ಒಂದೊಂದೆ ಪೂರ್ಣ ಬಲಉಳ್ಳವೆಂದು
ಇಂದ್ರಿಯಂಗಳು ಎಲ್ಲ ಪೂರ್ಣ ಮಯ ಯೆಂತಂದು
ಒಂದು ರೂಪಕನ್ನ ಇಂದ್ರಿಯ ಭೇದವು ಇಲ್ಲ
ಪೊಂದಿಪ್ಪವು ಕಪಿಲಾದಿ ನಾಮಗಳಿಂದ
ಗಂಧ ಆಘ್ರಾಣಿಸುತ ನೋಡುತ ಕೇಳುತ
ನಿಂದಿಪ್ಪವು ಪೂರ್ಣವಾಗಿ ತನ್ನ ಮನ
ಬಂದಂತೆ ಕ್ರೀಡೆಗಳನು ತೋರಿ
ಸಂದಿ ಸಂದಿಲಿ ಇನ್ನು ವ್ಯಾಪ್ತನಾಗಿ ಇನ್ನು
ಒಂದು ಪಿಡಿದು ನೋಡಿ ಆಡಿ ಕಂಡೇವೆನಲು
ಇಂದಿರೆಗೆ ತಿಳಿಯಲಾಗೋಚರವು
ಬಂದು ನಿಲ್ಲುವ ತತ್ತದ್ಯೋಗ್ಯತಿ ಅನುಸಾರ
ಸಂದರುಶನ ವಿತ್ತು ಸಲಹುವನೋ
ಒಂದು ಕೊಂಡು ಮತ್ತೊಂದು ಕೊಡುವವನಲ್ಲ
ಒಂದು ಕೊಳ್ಳದೆ ಮತ್ತೆ ಈವನಲ್ಲಾ
ಒಂದು ಕೊಟ್ಟರೆ ಮತ್ತೆ ಒಂದು ಕೊಡುವವನಲ್ಲಾ
ಒಂದಕನಂತವ ಅನಂತಕೆ ಪೊಂದೀವಾ
ನಂದ ಮೂರುತಿ ರಾಮ ಗೋಪಾಲ ವಿಠ್ಠಲ
ಅಂದಿ ಗೈಗೆ ತೋರಿ ಅಂದದಂತೆ ಪೊಳೆವಾ ॥ 4 ॥

ತ್ರಿವಿಡಿತಾಳ

ಮಾಡು ಕರ್ಮ ಉಂಟು ನೋಡುವ ಕರ್ಮ ಉಂಟು
ಬೇಡುವ ಕರ್ಮ ಉಂಟು ಮಾಡಿಸುವರುಂಟು
ಮಾಡಿ ಮಾಡಿಸುವರು ಸಾಂಶ ಸುರಾದಿ ದಿವಿಜರು
ಮಾಡುವರೂ ಮಾತ್ರ ನಿರಂಶರೂ
ನೋಡುವರೊ ಉತ್ತಮರು ಕರ್ಮಾಧಮರೊ
ಬೇಡಿ ಮಾಡುವ ಕರ್ಮ ಸರ್ವ ಜೀವರಿಗುಂಟು
ಕೂಡುವ ಮಲಗುವ ಓಡುವ ನಿಲ್ಲುವ
ಮಾಡುವ ನಾಲ್ಕು ಕರ್ಮ ದೇಹಿಗಳು
ಮಾಡಿಸುವ ಹರಿಯೆಂದು ತಿಳಿಯಬೇಕು
ಮಾಡಿಸುವರ ದಯ ಮಾಡುವರ ದಯ
ನೋಡುವರ ದಯೆ ಬೇಡು ನಿನಗೆ ಬೇಕು
ಮಾಡುವ ಕರ್ಮವು ಈ ಪರಿ ತಿಳಿಯದೆ
ಮಾಡಲು ಏನೇನು ಫಲಬಾರದು
ನಾಡನೆಲ್ಲವ ತಿರುಗಿ ತೀರ್ಥಾದಿಗಳಮಿಂದು
ಮಾಡೆ ನಾನಾ ದಾನ ಯಜ್ಞಾದಿಗಳೆಲ್ಲ
ಕೂಡಿಸವು ಗತಿಗೆ ಎಂದೆಂದಿಗೂ
ಪಾಡಿದವರ ಪ್ರಾಣ ಗೋಪಾಲ ವಿಠ್ಠಲ
ಮಾಡಿ ಮಾಡಿಸುವಂಥ ಕರ್ತನರಿತು ಬಾಳು ॥ 5 ॥

ಅಟ್ಟತಾಳ

ಮುಕ್ತಾ ಅಮುಕ್ತಾ ಚೇತನ ದೊಳಗೆಲ್ಲ
ನಿತ್ಯಾ ನಿತ್ಯ ಜಡಗಳ ಒಳಗೆಲ್ಲ
ತತ್ತತದಾಧಾರಾ ಸತ್ತ್ರವೃತ್ತಿಯೊ
ನಿತ್ಯ ಮುಕುತಾ ನಿರ್ಲಿಪ್ತ ನಿರಾಶ್ರಯಾ
ಸತ್ವಾದಿ ರಹಿತ ನಿತ್ಯಾನಂದ ಮೂರ್ತಿ
ಚಿತ್ರ ಚಾರಿತ್ರ ವಿಮಲ ಜ್ಞಾನಪೂರ್ಣ
ಭಕ್ತ ವತ್ಸಲ ಬಂಧಕ ಮೋಚಕ ದೇವಾ
ರಕ್ತ ಶುಕ್ಲ ಶ್ಯಾಮದಳ ವರ್ನಾ
ತತ್ತಳಿಸುವ ಹರಿ ಮೂರ್ತಿಯ

ಸುತ್ತ ಪರಿವಾರ ನಿಲ್ಲಿಸಿ ನಿನ್ನಯ
ಹೃತ್ಕಮಲದಲ್ಲಿ ನಿತ್ಯ ವಾಸವಾದ
ನಿತ್ಯ ಮೂರುತಿಯನು ಚಿತ್ತಜನ್ಯೆಯ್ಯಾ ಸರ್ವೋತ್ತಮ ಹರಿಯ
ಮತ್ತೆ ಪೇಳಿದಂತೆ ಭಗವಂತ ತದ್ರೂಪಾ
ಕತ್ಯಂತ ಅಭೇದ ಚಿಂತಿಸಿ ತುತಿಸಿ
ಪ್ರತ್ಯೇಕ ಪ್ರತ್ಯೇಕಧಿಷ್ಠಾನಗಳಲ್ಲಿ
ಭಕ್ತಿ ಪೂರ್ವಕದಿ ಎತ್ತಿ ಕರವ ಮುಗಿದ
ತ್ಯಂತ ಮಹಿಮನೆ ನಿತ್ಯ ಕಾಯೊ ಎಂದು
ಉತ್ತಮರ ಸಂಗ ಜತ್ತಾಗಿ ಮಾಡಿನ್ನು
ಸತ್ಯ ಸಂಕಲ್ಪ ಗೋಪಾಲವಿಠ್ಠಲರೇಯಾ
ತುತ್ತ ಮಾಡಿಪ್ಪಂತೆ ಸಾಧನ ಮಾಡಿಪಾ ॥ 6 ॥

ಆದಿತಾಳ

ಎಂತೆಂತು ಬಿಂಬನ ಚಿಂತನೆ ಮಾಡಲು
ಅಂತಂತೆ ಬರುವನು ಪ್ರತಿ ಬಿಂಬಕ್ಕೆ ಸ್ವಾ
ತಂತ್ರ ಪೊಂದು ಹೊರತಾಗಿ
ಚಿಂತಿಸಿ ನೋಡಲು ಜೀವ ಚಿದ್ರೂಪನು
ಸಂತೋಷಾಧಿಗಳೆಲ್ಲ ಹರಿಯಾಧೀನ ನಿ
ರಂತರ ಪರಾಧೀನ ಜೀವ ಸ್ವಾಮಿ
ಭೃತ್ಯ ನ್ಯಾಯ ವೆಂದು ಉಪಾಸನೆ ಎದುರಿಲಿ
ಚಿಂತಿಸಿ ಕರಮುಗಿದು ಚಿಂತನೆ ಮಾಡಲು
ಸಂತೋಷದಲ್ಲಿ ಪ್ರಾಣದ್ವಾರಾ
ಚಿಂತಾಯಕ ತಂತ್ರ ಮೂರ್ತಿ ತೋರಿ ಭವ
ಗ್ರಂಥಿಯ ಹರಿಸುವ ತಡವಿಲ್ಲದೆ
ಶಾಂತ ಮೂರುತಿ ನಮ್ಮ ಗೋಪಾಲವಿಠ್ಠಲ
ನಿಂತಲ್ಲೆ ನಿಧಾನವಾಗಿ ಉಣಿಸುವಾ ॥ 7 ॥

ಜತೆ

ಚಲ ಅಚಲಗಳಲಿ ಈ ಪರಿ ಧೇನಿಸೆ
ಒಲಿವ ಗೋಪಾಲ ವಿಠ್ಠಲ ಇವಗೆ ಕರುಣದಲಿ ॥ 8 ॥

ಧ್ರುವತಾಳ

## ಸುಳಾದಿ 41

ರಾಗ : ಕಾಂಬೋಧಿ

ಆವಾ ವಿಷ್ಣನೆ ಜೀವದಂಗುಟ ಮಾತ್ರ ಮೂರುತಿ
ಆವಾ ವಿಷ್ಣನೆ ಜೀವದಾಕಾರ ಮೂರುತಿ
ಆವಾ ವಿಷ್ಣನೆ ಸರ್ವವ್ಯಾಪ್ತ ಮೂರುತಿ
ಆವಾ ವಿಷ್ಣನೆ ಜೀವಕ್ಕಾವರ್ಕವಾದ ಮೂರುತಿ
ಆವಾ ವಿಷ್ಣನೆ ಜೀವಾಧಿಷ್ಠಾನ ದೇಹ ಮೂರುತಿ
ಆವಾ ವಿಷ್ಣನೆ ಜಗದವ್ಯಾಪುತ ಮೂರುತಿ
ಆವಾ ವಿಷ್ಣನೆ ಮೂಲದವತಾರ ಮೂರುತಿ
ಆವಾ ವಿಷ್ಣನೆ ಮಧ್ಯ ಅಜಾದಿ ಮೂರುತಿ
ಆವಾ ವಿಷ್ಣನೆ ಜೀವಾ ಸರ್ವವಿಶ್ವಾದಿ ಮೂರುತಿ
ಆವಾ ವಿಷ್ಣನೆ ಅನಂತವತಾರ ಮೂರುತಿ
ಆವಾ ವಿಷ್ಣನೆ ಜೀವನ ಪ್ರತಿಪಾದ್ಯ ಮೂರುತಿ
ಆವಾ ವಿಷ್ಣುವಿನ್ನಾಧೀನ ವಾಗದ ಠಾವಿಲ್ಲ ಎಲ್ಲಿ ನೋಡಾ
ಆವಾ ವಿಷ್ಣು ಸರ್ವಜ್ಞ ಸಾಕಾರ ಜ್ಞಾನಾನಂದಾ
ಯಾವತ್ತು ಏಕ ಮೇವ ದೇವಾ
ಶ್ರೀವಿಷ್ಣು ನಮ್ಮ ಸ್ವಾಮಿ ಗೋಪಾಲವಿಠ್ಠಲ
ಪಾವನ್ನ ಮೂರುತಿ ಪರಮ ಪುರುಷ ನೋಡು ॥ 1 ॥

ಮಟ್ಟತಾಳ

ಪೃಥಿವಿ ಅಪ್ಪು ಅಗ್ನಿ ವಾಯುರಾಕಾಶವು
ತತು ತನ್ಮಾತ್ರಿ ಶಬ್ದಾದಿ ವಿಷಯಂಗಳು
ಜಿತ ತೈಜಸ ವೈಕಾರ ಸತು ಮಹಾ
ತತುವ ಹರಿಗೆ ಸ್ವರೂಪ ಭೂತಾ
ತತುಗಳು ಜಡವಲ್ಲ ಎಲ್ಲ ಆನಂದಮಯಾ
ಗತಿ ಗೊಡುವವು ಒಂದಕ್ಕೆ ಒಂದೊಂದೇ ಪೂರ್ಣ
ಖತಿ ಗೊಳಿಸುವವಲ್ಲ ಖಂಡ ಖಂಡವಲ್ಲಾ
ಚತುರವು ಇವು ಬಲು ಹರಿಯೆ ಇವು ಎನ್ನಿ
ಸತತ ತಾ ತನ್ನ ಸ್ವರೂಪ ಭೂತ ತತ್ವಪ್ರವೇಶವೆ
ಮತಿಯ ಪ್ರಕೃತಿ ಅಂಶಗಳಿಗೆ

ಸತತ ಬಿಂಬನಾಗಿ ಸವಿಯದೆ ಎಂದೆಂದು
ಕ್ಷಿತಿಯಲ್ಲಿ ಜೀವರಾಶಿಗೆ ಸಾಧನ ಮಾಳ್ಪ
ಪತಿತ ಪಾವನ ವಿಷ್ಣು ಗೋಪಾಲವಿಠ್ಠಲ
ಸತತ ಕ್ರೀಡಿಯ ಮಾಳ್ಪ ಚೇತನ ತನದಿ ॥ 2 ॥

ರೂಪಕತಾಳ

ವಿಷ್ಣು ವರ್ಣ ವಿನ್ನು ವಿಷ್ಣು ಕಾಲವು ನೋಡು
ವಿಷ್ಣುವೆ ಆಕಾಶ ಅವ್ಯಾಕೃತಕೆ ಬಿಂಬಾ
ವಿಷ್ಣುನೆ ಮಹದಾದಿ ವಿಷ್ಣುನೆ ಅಹಂಕಾರಿಕ
ವಿಷ್ಣು ವೈಕಾರಿಕ ವಿಷ್ಣು ತೈಜಸವಿನ್ನು
ವಿಷ್ಣು ಪಂಚಮಹಾಭೂತ ವಿಷ್ಣು ತನ್ಮಾತ್ರಿಗಳು
ವಿಷ್ಣುನೆ ಕಾರ್ಯ ಕಾರಣ ತತ್ವ ಜಡಗಳಿಗೆ ಬಿಂಬ
ವಿಷ್ಣುನೆ ತತ್ವಾಭಿಮಾನಿಗಳಲ್ಲಿ ಬೇರೆ
ತತ್ತದಾಕಾರನಾಗಿ ಇಷ್ಟರ ವಳಗಿನ್ನು
ವಿಷ್ಣುನೆ ಅವರವರ ಸತತ ಪ್ರಾವರ್ತಕನಾಗಿ
ಇಷ್ಟ ನಿಷ್ಟಗಳಿಗೆ ತೋಡಕದಿದ್ದು
ವಿಷ್ಣು ನಾಮಕ ಚಲುವ ಗೋಪಾಲವಿಠ್ಠಲ ಸರ್ವಂ
ವಿಷ್ಣು ಮಯಂ ಜಗತ್ತು ವ್ಯಾಪಿಸಿಪ್ಪ ॥ 3 ॥

ಝಂಪಿತಾಳ

ವಿಷ್ಣುನೆ ಇಷ್ಟ ತತ್ವರೂಪ ತಾನಾಗಿ
ಇಷ್ಟ ತತ್ವಗಳಿಗೆ ಬಿಂಬನಾಗಿ
ವಿಷ್ಣು ತಾನಿಪ್ಪ ದಾಶ್ಚರ್ಯ ವೆಂದೆನ್ನದಿರಿ
ವಿಷ್ಣು ದಾಸರಿಗೆ ಸ್ವರೂಪ ಭೂತಾ
ಇಷ್ಟ ತತ್ವಂಗಳು ಜೀವ ಸ್ವರೂಪದಂತೆ
ಸ್ಪಷ್ಟವಾಗಿಪ್ಪದು ತಿಳಿದವರಿಗೆ
ಕಷ್ಟ ಬಡಿಸುವರೆಲ್ಲ ಎನ್ನೆ ಅನ್ಯಾಯ
ಪುಟ್ಟಿಸುವ ಒಂದೊಂದಾ ಭೇದವ
ನಷ್ಟ ವಾಗುವದಲ್ಲ ಜೀವರ ಸ್ವರೂಪ
ಬಿಟ್ಟು ಹೋಗುವದಲ್ಲ ಎಂದೆಂದಿಗೂ

ಸ್ಪಷ್ಟವಾಗಿ ಇದರ ಅನುಭವ ಎಂಬುವದು
ವಿಷ್ಣು ದಾಸರೆ ಇದರ ವಿವರವು ಬಲ್ಲರು
ಇಷ್ಟ ಮೂರುತಿ ನಮ್ಮ ಗೋಪಾಲವಿಠ್ಠಲ
ಇಷ್ಟರಲ್ಲಿ ನಿಂತು ಹರಿ ಏನೇನು ನೋಳ್ಪ ॥ 4 ॥

ತ್ರಿವಿಡಿತಾಳ.

ಭಿನ್ನವಾದ ವೃತ್ತಿರೂಪ ಸುಖ ದುಃಖವು
ಇನ್ನು ಸ್ವರೂಪ ಅನುಭವ ಉಂಟು
ಚಿನ್ಮನಸಿನ ಮನಸಿನ ದ್ವಾರವಿನ್ನು ಅಭಿಮಾನದಲ್ಲಿ
ತನ್ನದೆಂದರಿವ ಭಿನ್ನವಾದ ದುಃಖವ
ತನ್ನ ಪ್ರಕಾಶ ಅಭಿಮಾನ ವಿದ್ದಲೆಲ್ಲ
ತನ್ನದೆಂದೇ ತಿಳಿವ ಅಭಿಮಾನದಿ
ಇನ್ನು ಹೀಗೆ ವೃತ್ತಿರೂಪ ದುಃಖವಿನ್ನು
ತನ್ನಭಿಮಾನ ದಿಂದಲೆ ಅನುಭವ
ಚನ್ನಾಗಿ ಲಿಂಗ ಭಂಗ ವಾಗುವ ತನಕ
ಇನ್ನು ಹೀಗೆ ಅನುಭವಿಪ ಜೀವನು
ಮುನ್ನೆ ವೃತ್ತಿರೂಪ ಸುಖವು ಮತ್ತೆ ಹೀಗೆ
ಇನ್ನು ಅನುಭವವೆಲ್ಲ ಒಂದೆ ನೋಡು
ತನ್ನದೆಂಬ ಅಭಿಮಾನ ಬಿಟ್ಟು ನಿರ್ಗುಣದಲ್ಲಿ
ಅನ್ನ ರಸಪಾನಂಗಳು ಎಲ್ಲ ಹರಿಯೆ ಉಣುವ
ವನೆಂದು ತಿಳಿದು ಉಂಬ ಜೀವರಿಗೆ
ಚಿನುಮಯ ಬಿಂಬ ತಾನುಂಡು ಎಲ್ಲ
ಭಿನ್ನರಸ ಸುಖ ವ್ಯಂಜಕ ಮಾಡಿ
ಆನಂದವನೆ ಇನ್ನು ಜೀವನಿಗೆ ಅಭಿವ್ಯಕ್ತ ಮಾಳ್ಪ
ಇನ್ನಿವನಿಗೆ ವಿಪರೀತ ದುಷ್ಟ ಜೀವನರಿಗೆ
ಇನ್ನು ದುಃಖ ಅಭಿವ್ಯಕ್ತಿ ಮಾಳ್ಪಾ
ಪುಣ್ಯ ಪಾಪಗಳೆರಡು ಜೀವಕೆ ಸಹಾಯವಾಗಿ
ತನ್ನದೆಂಬೋ ಮಾತು ಮಾತ್ರ ಇನ್ನು ಪುಶಿಯು
ಖಿನ್ನನ ಗ್ಯಾಡುವನು ಅಭಿಮಾನದಿ
ಅನಂತ ಗುಣ ಪೂರ್ಣ ಗೋಪಾಲವಿಠ್ಠಲ
ಚನ್ನಿಗನ ಮಹಿಮೆ ಚಿತ್ರ ವಿಚಿತ್ರವು ॥ 5 ॥

ಅಟ್ಟತಾಳ

ಒಂದು ರಸದಲ್ಲಿ ಬಿಂದು ಉದರದಿ ಬಿದ್ದರೆ
ಇಂದಿರೆ ಉಂಟಲ್ಲಿ ವಿರಿಂಚಿ ಶಿವನುಂಟು
ಚಂದ್ರಾದಿ ಗರುಡ ಶೇಷ ಇಂದ್ರಾದಿ ಸುರರೆಲ್ಲ
ಹೊಂದಿರುವರು ತಮ್ಮ ತತ್ವದ ರಸ
ಇಂದಿರೇಶ ವಿಭಾಗವಮಾಡಿ ತರತಮ
ದಿಂದಲೆ ಆರಾರ ಭಾಗ ಪೊಂದಿಸಿ ಈವಾ
ಇಂದಿರಾದೇವಿಗವ್ಯಕ್ತ ರಸದಲೆ ಅಭಿಮಾನ
ಮಂದಜ ಜನಕಗೆ ಮಹಾತತ್ವ ರಸವಿನ್ನು
ಇಂದು ಮೌಳಿಗೆ ಅಹಂಕಾರ ರಸದಲ್ಲಿ
ಇಂದ್ರಾದಿ ಸುರರಿಗೆ ವೈಕಾರಿಕ ರಸ
ತಂದು ಕೊಡುವ ತೈಜಸ ರಸ ತರತಮ್ಯ
ದಿಂದ ಭೌತಿಕ ರಸ ಒಪ್ಪದು ಮನುಜರ್ಗೆ
ತಂದು ಕೊಡುವ ಒಂದರೊಳಗೆ ಎಲ್ಲ
ಒಂದೇ ವಿಷಯ ಬಹುಮಂದಿಗೆ ಅನುಭೋಗ
ತಂದಿಪ್ಪದು ಪೃಥಿವಿ ಗಂಧ ತನ್ಮಾತ್ರೆ ಯಂತೆ
ಮಂದ ಅಸುರ ದೈತ್ಯವೃಂದಕ್ಕೆ ಇದರೊಳು
ಗಂಧ ಬೇರೆ ಉಂಟು ಒಂದೇ ರಸದಲ್ಲಿ
ಮಂದಾಕಿನಿಯಲ್ಲಿ ಮೈಲಿಗೆ ವಸ್ತ್ರ ತೊಳೆದರೆ
ತಂದು ಕೊಡುವದು ತದ್ದೂಷಣ ಆ ವಸ್ತ್ರಕ್ಕೆ
ಸುಂದರ ಮೂರುತಿ ಗೋಪಾಲವಿಠ್ಠಲ
ಬಂಧು ಆದನು ಸಾಧು ಜೀವರ್ಗೆ ॥ 6 ॥

ಆದಿತಾಳ

ದೇವಿಯಿಂದಲಿ ಕ್ರೀಡೆ ದೇವ ನಾಡುವ ತತ್ವ
ದೇವತೆಗಳನ್ನೆಲ್ಲ ಕಾವಲಿ ಇಟ್ಟಿನ್ನು
ಆವರ್ಣ ಪ್ರಕೃತಿಗಳಲಿ ತಾನಿಂತು
ತ್ರಿವಿಧ ಮೂಲರ ಜಗಕೆ ವೃಕ್ಷನಾಗಿ
ಶ್ರೀ ವಿಷ್ಣುನೆ ಅಲ್ಲ ವಿಟಪನಾಗಿ ಸರ್ವ
ಜೀವರಿ ಗಾಶ್ರಯನಾಗಿ ಪಾಲಿಸುವಾ

ಆವಾ ಈ ವೃಕ್ಷದಮೂಲ ಕಂಡವರಿಲ್ಲ
ದೇವ ದೇವೇಶನ ಲೀಲೆ ಎಷ್ಟೂ
ದೇವಿ ಲಕುಮಿ ಸಾಕಲ್ಯ ತಿಳಿಯದೆ ಶ್ರೀ
ಭಾವವನು ತಾನು ನಂದದೊಳು ಮುಣುಗಿ
ಶ್ರೀವರಪ್ರೇರಕನೆಂದು ತುತಿಸಿ ಯಿನ್ನು
ಭಾವೆ ಗಂಡನ ಕೊಂಡಾಡಿಹಳು
ಜೀವರು ತಮ್ಮ ತಮ್ಮ ಯಾವತ್ತು ಶಕ್ತಿಲಿ
ದೇವನ ಸ್ತುತಿಸಿ ಧೇನಿಸುವರು
ಗೋವರ್ಧನೋದ್ಧರ ಗೋಪಾಲವಿಠ್ಠಲನ್ನ
ದೇವನ ಮಹಿಮೆ ಬಲ್ಲವರಾರು ॥ 7 ॥

ಜತೆ

ಆಪ್ತ ಉಪಾಸನಿಗುಪ್ತದಿ ಯಿದು ಮಾಡಿ
ಪ್ರಾಪ್ತನಾಗುವ ಗೋಪಾಲವಿಠ್ಠಲ ನಿಮಗೆ ॥ 8 ॥

ಧ್ರುವತಾಳ **ಸುಳಾದಿ 42** ರಾಗ : ಸಾರಂಗ

ಒಂದೇ ರೂಪವು ನೋಡಾ ಅನಂತಪೂರ್ಣವಿನ್ನು
ಒಂದೊಂದು ಅವಯವ ಪೂರ್ಣವಯ್ಯಾ
ಒಂದು ರೂಪದೊಳಗೆ ಅನಂತ ರೂಪಂಗಳು
ಒಂದೊಂದು ರೂಪದಿಂದ ಭೇದಾಭೇದನಾಗಿಪ್ಪ
ಒಂದು ಧನುರ್ಧರ ಒಂದು ಅರಿಶಂಖದರ
ಒಂದು ಚತುರ್ಭುಜ ಒಂದು ದ್ವಿಭುಜ ರೂಪ
ಒಂದು ಚತುರಹಸ್ತ ಒಂದು ಸಾಸಿರ ಹಸ್ತ
ಒಂದು ಏಕ ಮುಖ ಒಂದು ಚತುರ್ಮುಖ
ಒಂದು ಸಾಸಿರಮುಖ ಒಂದು ಗಜಮುಖ
ಒಂದು ಮತ್ಸ್ಯಮುಖ ಒಂದು ಸೂಕರಮುಖ
ಒಂದು ಕ್ರೂರಮುಖ ಒಂದು ಶಾಂತ ಮುಖ
ಒಂದು ಶಾಮವರ್ನ ಒಂದು ರಜೋವರ್ನ
ಒಂದು ಪೀತವರ್ನ ಒಂದು ಶುಭ್ರವರ್ನ
ಒಂದು ಭಯಪ್ರದ ಒಂದು ಅಭಯಪ್ರದ

ಒಂದು ಅಣುವಾಗಿ ಪುನಃ ಒಂದೊಂದೆ ಮಹತ್ತಹ
ಒಂದು ಕುಳಿತಿಪ್ಪದು ಒಂದು ನಿಂತಿಪ್ಪದು
ಒಂದು ಕೆಲವು ಮಲಗಿ ಒಂದು ಕೆಲವು ಓಡ್ಯಾಟ
ಒಂದು ಕಡೆ ಸಂಹಾರ ಒಂದು ಕಡೆ ಸೃಷ್ಟಿಯು
ಒಂದು ಕಡೆ ಪಾಲಣೆ ಒಂದೆ ರೂಪದಲ್ಲಿನ್ನು
ನಿಂದು ನಾನಾ ವೈಚಿತ್ರನಾಗಿ ತೋರುವ ದೈವ
ಸುಂದರ ಮೂರುತಿ ಗೋಪಾಲವಿಠ್ಠಲ
ಒಂದಾನಂತಾನಂತ ರೂಪ ಅನಂತ ಒಂದೇರೂಪ ॥ 1 ॥

ಮಟ್ಟತಾಳ

ಒಂದು ರವಿಯ ತೇಜ ಒಂದು ದ್ವಿರವಿತೇಜ
ಒಂದಕ್ಕೊಂದು ಅಧಿಕ ಹತ್ತು ರವಿಯತೇಜ
ಒಂದೊಂದೆ ಬಲ ವಿಜ್ಞಾನ ಪೂರ್ಣವಾದ ರೂಪ
ನಿಂದಿವೆ ಮಲಗುವ ಮಲಗಿ ತಿರುಗುವ
ಪೊಂದಿ ಕೊಡುವ ಏಕ ಇಂದ್ರಿಯ ಭೇದಗಳಿಲ್ಲ
ಮಂದ ಜನರ ಮನಕೆ ಮಹ ಅಲೌಕಿಕ
ಗಂಧಾದಿ ಶಬ್ದವೆಲ್ಲ ಸ್ವರೂಪ ಭೂತಾ
ಇಂದ್ರಿಯಂಗಳೆಲ್ಲ ಒಂದೊಂದೆ ಪೂರ್ಣವು
ಪೊಂದಿಪ್ಪವು ನೋಡಾನಂತ ಬೊಮ್ಮಾಂಡಗಳು
ಹಿಂದಿನ ಅತಿತ ಅನಾಗತವೆಲ್ಲಾ
ಒಂದೊಂದೆ ರೂಪದಿ ಹೊಂದಿ ಕೊಂಡಿಪ್ಪವು
ಒಂದು ಆದರೆ ಅಂತೆ ಕಂಡೆ ನೆಂಬವರಾರು
ನಂದ ನಂದನ ಕಂದ ಗೋಪಾಲವಿಠ್ಠಲ
ಬಂದು ತೋರುವ ತತ್ತತ್ಯೋಗ್ಯತೆಅನುಸಾರ ॥ 2 ॥

ರೂಪಕತಾಳ

ಒಂದು ಕಡೆಯಲಿ ರಾವಣನ ಹನನ ಮಾಡುವ
ಒಂದು ಕಡೆಯಲಿ ತತ್ವಜ್ಞಾನ ಬೋಧಿಸುತಿಪ್ಪ
ಒಂದು ಕಡೆಯಲಿ ತುರುವುಗಳನ್ನು ಕಾಯುವನು
ಒಂದು ಕಡೆಯಲಿ ಕ್ರೂರ ಜನರ ಸದ ಬಡಿಯುವ
ಒಂದು ಕಡೆಯಲಿ ಕುರು ಪಾಂಡವರ ಕಡದಾಡಿಸುವ

ಒಂದು ಕಡೆಯಲಿ ಗೋಪ ಸ್ತ್ರೀಯರ ಒಡನಾಟ
ಒಂದು ಕಡೆಯಲಿ ಗೋವರ್ಧನ ಗಿರಿಯನೆತ್ತಿಹ
ಒಂದು ಕಡೆಯಲಿ ಬ್ರಹ್ಮಾದ್ಯರಿಂದ ಪೂಜಿಸಿಕೊಂಬ
ಒಂದು ಕಡೆ ಕಂಸನ ಹನನ ಮಾಡುತಿಪ್ಪ
ಒಂದು ಕಡೆಯಲಿ ಪಾಲು ಬೆಣ್ಣೆ ಕದ್ದದ್ದು ತಿಂದು
ಒಂದು ರೂಪದಿ ಯಶೋದೆ ಮುಂದಾಡುತಿಪ್ಪ
ಇಂದು ಮುಖಿಯರ ಮುಂದೆ ಇಲ್ಲೆಂದು ಆಡುತಿಪ್ಪ
ಒಂದು ರೂಪದಲ್ಲೆ ಈ ಪರಿಪರಿ ರೂಪ
ಛಂದದಿ ತೋರುವ ಒಂದೆರಡು ಎನಸಲ್ಲ
ಕಂದರ್ಪ ಜನಕ ಗೋಪಾಲವಿಠ್ಠಲ ತನ್ನ
ಹೊಂದಿದವರ ಮನಕೆ ಒಂದಾನಂತಾಗಿ ತೋರ್ಪ ॥ 3 ॥

ಝುಂಪಿತಾಳ

ಒಂದು ಕಡೆಯಲಿ ದ್ರೋಣ ಭೀಷ್ಮಾದಿಗಳನ್ನೆಲ್ಲ
ಕೊಂದು ಕೊಂದರ್ಜುನ ಕೊಲ್ಲೊ ನೀಯಂತಿಪ್ಪ
ಒಂದು ಕಡೆಯಲಿ ಅರಿ ಸೈನ್ಯಕ್ಕೆ ಬಲವಾಗಿ
ಮುಂದರಿದ ಮತ್ತವರ ಮೋಹ ಗೊಳಿಸುತಲಿಪ್ಪ
ಒಂದು ರೂಪದಿ ಪಾರ್ಥನಿಗೆ ತತ್ವ ತಿಳಿಸುತ್ತಾ
ಬಂದ ಅರಿಗಳ ಅಸ್ತ್ರತಾನೆ ಧರಿಸುತಲಿಪ್ಪ
ಒಂದು ರೂಪದಿ ಅರ್ಜುನನ್ನ ಆಲಿಂಗಿಸಿ
ಬಂದ ಆಯಾಸಗಳ ಬಡಸದೆ ನಿಂತಿಪ್ಪ
ಒಂದು ರೂಪದಿ ದೇವದತ್ತ ಶಂಖವನೂದಿ
ತಂದೀವ ಬಲವ ಪ್ರತಿಕ್ಷಣಕೆ ಪಾರ್ಥನಿಗೆ ಇನ್ನು
ಮಂದ ಅಸುರರಿಗೆ ಇದೆ ಶಬ್ದದಿಂದ ಅವರ
ಕುಂದು ಮಾಡುವ ಬಲ ಒಂದು ರೂಪದಲಿಲ್ಲಿನ್ನು
ಒಂದೊಂದು ಅನಂತ ರೂಪನುಳಗಿ
ಮುಂದರಿದು ಆ ಕುರುಸೈನ್ಯ ಕೊಂದು ಕೊಂದ್ಹಾಕುತಿಹ
ಮಂದಾಕಿನಿಯ ಜನಕ ಗೋಪಾಲವಿಠ್ಠಲಗೆ ಹೀ
ಗೆಂದು ತಿಳಿದರ್ಚಿಪಗೆ ಬಂಧನವ ಕಡಿವಾ ॥ 4 ॥

ತ್ರಿವಿಡಿತಾಳ

ಮತ್ಸ್ಯಾದಿ ಅಜಾದಿ ಕೇಶವಾದಿ ಚತುರಾದಿ
ವಿಶ್ವಾದಿ ಹಯ ಶಿಂಶುಮಾರ ಕಪಿಲ ವ್ಯಾಸ
ಸ್ವಚ್ಛಾವಾದಾನಂತ ರೂಪಂಗಳೆಲ್ಲವು
ನಿಚ್ಚ ನಿಚ್ಚ ಕೃಷ್ಣನಲ್ಲೇ ನಿತ್ಯವಾಗಿ
ಎಚ್ಚತ್ತಿಹವು ಕಾಣೊ ಲೇಶ ಸಂಶಯ ಸಲ್ಲಾ
ಅಚ್ಚ ನಿಟ್ಟಂತೆ ಮತ್ತೊಂದೆ ಪಟ್ಟದಲ್ಲಿನ್ನೂ
ಅಚ್ಚುತನ ರೂಪ ಒಂದು ದುರ್ಲಭ ಪ್ರಬಲ
ನೀಚ್ಚೋಚ್ಚ ವಿಲ್ಲವೊ ನಿತ್ಯ ವ್ಯಕ್ತಾ
ಅಚ್ಚುಬೆಲ್ಲವು ಒಂದು ಆವಕಡೆ ತಿಂದರು
ಹುಚ್ಚು ಒಂದು ಕಡೆ ಹುಳಿ ಸೀಯು ಎನಿಪದೇ
ಮಚ್ಚರ ಜನರಿಗೆ ಮರುಳು ಗೊಳಿಸಿ ಹೀಗೆ
ನಿಚ್ಚವಾದ ನಿರಯ ಪೊಂದಿಸುವ
ಸ್ವಚ್ಛ ಮೂರುತಿ ನಮ್ಮ ಗೋಪಾಲವಿಠ್ಠಲ
ಅಚ್ಚ ಕರುಣೆ ಕಾಣೊ ಆರ್ತ ಜನಕೆ ನಿತ್ಯ ॥ 5 ॥

ಅಟ್ಟತಾಳ

ಅಣು ಅಣು ಪರಮಾಣು ಅತ್ಯಾಣು ಬಲು ಆಣು
ಘನ ಘನ ಘನ ರೂಪ ಘನ ತಾನು ಘನ ತಾನು
ಅಣುರೂಪದಾ ದ್ರವ್ಯ ಮನಸ್ಸಿಗೆ ವಂದನ್ನ
ಎಣಿಕೆ ಹಿಡಿದೆ ನೆನಲು ಮನಕೆ ನಿಲ್ಲುವದಲ್ಲಾ
ಘನರೂಪದಾದ್ರವ್ಯ ಆಕಾರದೊಳಗಿನ್ನು
ಅಣುವಾಗಿ ತೋರೋದು ಅವ್ಯಾಕೃತ ದ್ರವ್ಯ
ಘನವ್ಯಾಪ್ತಿ ವುಳ್ಳದಾದರು ಸರಿಯೆವೆ
ಘನ ಹರಿ ದ್ರವ್ಯದಲ್ಲಿ ಅಣುವಾಗಿ ತೋರೋದು
ಚಿನುಮಯ ಹರಿ ತಾನು ಚಿದ್ರೂಪಕೆ ಬಿಂಬ
ಎನಸಲ್ಲ ಮನುಜಾ ಘನ ಸೋಜಿಗವುಂಟು
ಅನುವಾದ ಪಂಚ ಮಹಾಭೂತ ಅವ್ಯಕ್ತಕೆ
ಮನಸಿ ಜನಯ್ಯ ತಾ ಬಿಂಬನಾಗಿಪ್ಪನು
ಎಣಿಸಿ ಧೇನಿಸಿಪ್ಪಂಗೆ ಎಲ್ಲಕ್ಕೆ ಹರಿ ಬಿಂಬ

ಘನ ಜಾಗ್ರತನಯ್ಯಾ ಗಣನೆ ಮಾಡನು ಅನ್ಯ
ಸನಕಾದಿಗಳೊಡೆಯಾ ಗೋಪಾಲವಿಠ್ಠಲ
ಅನಿಮಿಷರಿಗೆ ತಿಳಿಯಾ ಅಗೋಚರನಯ್ಯಾ ॥ 6 ॥

ಆದಿತಾಳ

ಚತುರ ವಿಂಶತಿ ತತ್ವ ಸ್ವರೂಪ ಭೂತವು
ಪತಿತ ಪಾವನನಾದ ಹರಿಯಲ್ಲಿ ಯಿಪ್ಪುದು
ತತು ತತುರೂಪ ತದ್ವರ್ಣ ತದಾಕಾರ
ಗತಿಗೆ ನಿಯಾಮಕ ಸತತ ಬಿಂಬನಾಗಿ
ಖತಿ ಗೋಳಗಾಗದ ಖಂಡಾ ಖಂಡನಾಗಿ
ಜಿತವಾದ ತನ್ನ ಸವರೂಪದಿಂದಲೇ
ಇತರಾಪೇಕ್ಷೆಯು ಇಲ್ಲ ಈರ್ವರಿಂದಲಿ ಬಂದ
ಅತಿಶಯ ಬೇಕಿಲ್ಲ ಆಶ್ರಿತ ಜನಪಾಲಾ
ಜಿತವಾದ ಜಡಕ್ಕೆ ಬಿಂಬನಾದ ಬಳಿಕಿನ್ನು
ತತುವ ಜೀವರಿಗೆಲ್ಲ ಬಿಂಬ ನಾಗೋದಾಶ್ಚರ್ಯ
ಇತರ ಜೀವರಿಗೆಲ್ಲ ನಿಶ್ಚಯ ನಿತ್ಯದಿ
ಗತಿ ಬೇಕಾದವನಿಗೆ ಇದೆ ಚಿಂತನೋಪಾಯ
ಇತರ ದೈವರ ಗಂಡ ಗೋಪಾಲವಿಠ್ಠಲ
ಚ್ಯುತದೂರ ನಿತ್ಯ ಆಶ್ರಿತಜನಪಾಲ ॥ 7 ॥

ಜತೆ

ವಿಶ್ವರೂಪ ದರುಶನಾಧಿಕಾರಿಗಳು ಅರಿದು
ವಿಶ್ವನಾಮಕ ಗೋಪಾಲವಿಠ್ಠಲನ ಭಜಿಸಿ ॥ 8 ॥

ಧ್ರುವತಾಳ **ಸುಳಾದಿ 43** ರಾಗ : ಭೈರವಿ

ನಿಲ್ಲು ನಿಲ್ಲಯ್ಯಾ ದೇವ ನೀಲವರ್ನದ ಸ್ವಾಮಿ
ಎಲ್ಲಿ ಪೋಗುತ ಇದ್ದಿ ಎನ್ನ ರಕ್ಕಿಸಿಮುಂದೆ
ಸಲ್ಲದವನೆ ನಾನು ಸಾಕದಿದ್ದರೆ ನೀನು
ಬಲ್ಲಿದನೆ ಬಡವ ಬಡವ ಬಲ್ಲಿದನಯ್ಯಾ
ಎಲ್ಲ ಸಾಧನಗಳು ನಿನ್ನ ಬಳಿಯಲ್ಲುಂಟು

ಇಲ್ಲದೊಂದಿಲ್ಲ ಎನಗೆ ಇತ್ತ ನೀವೊಲಿದ ಮೇಲೆ
ಎಲ್ಲ ನಿನ್ನೊಳಗಡಕ ಯೋಚಿಸಲಾಗಿ ಇನ್ನು
ಕಲ್ಲು ಮೃದು ಆಗುವದು ಕಂಡ ಆಗಲಿ ನಿನ್ನ
ಹುಲ್ಲು ಪರ್ವತ ಭಾರ ಹರಿ ನಿನ್ನ ಕಾಣದಾಗ
ಎಲ್ಲಿ ಕೆಲ್ಲಿಯೊ ಆಗಿ ಎನಗೆ ತೋರುವದಿನ್ನು
ಗಲ್ಲ ಗಲ್ಲವ ಬಡಿದು ಗಂಟಲನೆ ಸೆಳೆದು ಕೊಂಡು
ಗುಲ್ಲು ಎಬ್ಬಿಸ ದೊಡಿ ಪೋದವನಂತೆ ನೀನು
ಮೆಲ್ಲ ಮೆಲ್ಲನೆ ಮನಕೆ ಬಂದು ಸುಳಿದು ಪೋದರೆ
ಎಲ್ಲ ಸಂಪತ್ತು ಪೋಗಲಾಡಿಸಿ ಕೊಂಡವನು
ಎಲ್ಲಿ ತನಕ ಅವಗೆ ಕ್ಲೇಶವು ಆಗುವದೊ
ಇಲ್ಲಿ ಸಾದೃಶ್ಯ ಸ್ವಲ್ಪ ಆ ವಿಷಯದಲ್ಲಿನ್ನು
ಎಲ್ಲ ಸುರರೊಡೆಯ ಗೋಪಾಲವಿಠ್ಠಲ
ಬಲ್ಲಿದ ನಿನ್ನ ಧ್ಯಾನ ಬಲ್ಲವಗನುಭೋಗ ॥ 1 ॥

ಮಟ್ಟತಾಳ

ಧ್ಯಾನಮಾಡಿದವ ಸ್ನಾನ ಮಾಡಿದವ
ಧ್ಯಾನ ಮಾಡಿದವ ದಾನಾ ಮಾಡಿದವ
ಧ್ಯಾನ ಮಾಡಿದವ ಮೌನ ಮಾಡಿದವ
ಧ್ಯಾನ ಮಾಡಿದವ ನಾನಾ ಕರ್ಮಗಳು
ತಾನು ಮಾಡಿದವ ನ್ಯೂನ ಒಂದು ಇಲ್ಲವು
ಧ್ಯಾನಕ್ಕೆ ಹರಿಯೆ ನೀನು ಬಾರದಿರೆ
ನಾನು ಕಂಡ ವಿಷಯವನ್ನು ಧೇನಿಸುವೆ
ಜ್ಞಾನ ಪೂರ್ವಕವಾಗಿ ಧ್ಯಾನ ಮಾಡುವನಿಗೆ
ಕಾಣದೊಂದು ಇಲ್ಲ ಕರ್ಮ ಅದರೊಳಡಕ
ದೀನಜನ ಬಂಧು ಗೋಪಾಲವಿಠ್ಠಲ
ಧ್ಯಾನಕ್ಕೆ ಎನಗೆ ನೀನು ವಿಷಯನಾಗು ॥ 2 ॥

ರೂಪಕತಾಳ

ಆವಾವ ತೀರ್ಥವು ನಿನ್ನ ಬಳಿಯಲುಂಟು
ಆವಾವ ಕ್ಷೇತ್ರವು ನಿನ್ನ ಬಳಿಯಲುಂಟು

ಆವಾವ ತತ್ವವು ನಿನ್ನ ಬಳಿಯಲುಂಟು
ಆವಾವ ಸಜ್ಜನರು ನಿನ್ನ ಬಳಿಯಲುಂಟು
ಯಾವತ್ತು ನಿನ್ನಲ್ಲೆ ಉಂಟು ಯೋಚಿಸಲಾಗಿ
ಈವೇಳ್ಯ ಆವೇಳ್ಯ ಅನ್ನದೆ ಎಲೋದೇವಾ
ಪಾವನ ಪಾಪವು ಎಲ್ಲ ಶಕ್ತಿಗಳು
ದೇವ ನಿನ್ನಲ್ಲಿನ್ನು ತಾ ವಿಪ್ಪವು ನೋಡಾ
ಈ ವೇಳ್ಯ ಯಿತ್ತು ನೀ ನೋಡು ಯೋಚಿಸದೆ
ದೇವ ಒಬ್ಬರು ನಿಮಗೆ ಬೇಡವೆಂಬುವರಿಲ್ಲ
ದೇವಕ್ಕಿ ನಂದನ ಗೋಪಾಲವಿಠ್ಠಲ
ನೀ ವೊಲಿಯಲು ಎನಗಿಲ್ಲ ಒಂದಸಾಧ್ಯ ‖ 3 ‖

ಝುಂಪೆತಾಳ

ಏನು ಬಗೆ ಪೂಜೆಗಳು ನಿನಗೆ ಮಾಡುವೆ ಎಂಬ್ಯಾ
ನೀನಿತ್ತ ಬಂದೆನಗೆ ವೊಲಿದ ಮೇಲಕೆ ದೇವಾ
ನಾನಾ ಜಲಗಳಲ್ಲ ನಾನಾ ಯೋನಿಗಳೈದಿ
ನಾನು ಇದ್ದದನೆಲ್ಲ ಸ್ನಾನಂಗಳೂ ನಿನಗೆ
ನೀನು ಎನ್ನನು ಎಲ್ಲಿ ನಿಲ್ಲಿಸಿದ ಸ್ಥಳವೆಲ್ಲ
ಶ್ರೀನಿವಾಸನೆ ನಿನಗೆ ಅದೆ ಪೀಠವು
ಧೇನು ಜನ್ಮಂಗಳಲ್ಲಿ ಬಂದ ಕರದ ಪಾಲು
ಶ್ರೀನಾರಾಯಣ ನಿನಗೆ ಅಭಿಷೇಕವು
ನಾನಾ ಪರಿಪುಷ್ಪ ಸಿರಿತುಲಸಿ ಶಿರಿ ಗಂಧ ಮರ
ನಾನಾ ಜನುಮಗಳಾಗಿ ನಾನು ಬಂದುದು ಎಲ್ಲ
ಶ್ರೀನಾಥ ನಿನಗೆ ಇವೆ ಪೂಜೆಗೆ ಆದೆನು
ನಾನಾ ವಸನವು ಜಲರುಗ್ಮ ಜನ್ಮಗಳಲ್ಲಿ
ನಾನು ಇದ್ದದನೆಲ್ಲ ನಿನಗೆ ಉಡಿಗಾಭರಣ
ಆನಿ ಕದುರೆ ಅಂಡಜಾದಿ ಯೋನಿಗಳಲ್ಲಿ
ನಾನು ತಿರುಗಿದದೆಲ್ಲ ನಿನಗೆ ವಾಹನವಯ್ಯಾ
ನಾನಾಪದಾರ್ಥ ತಂಡುಲ ಮೊದಲಾದವುಗಳು
ಏನು ಐದಿದವನೆಲ್ಲ ನಿನಗೆ ನೈವೇದ್ಯವು
ಭಾನು ಚಂದರ ಸಾಕ್ಷಿಯಾಗಿ ಮಾಡಿದ್ದೆ ದೀಪ

ನೀನು ಎನ್ನವನಾಗಿ ಇದ್ದು ಇದರೊಳಗೆಲ್ಲ
ಏನೇನು ಪರಿಪರಿ ಕರ್ಮ ಮಾಡಿಸಿದದ್ದು
ಹೇ ನಾರಸಿಂಹ ಕಪ್ಪವು ನಿನಗೆ ಕಾಣೊ
ನೀನು ಮಂಗಳ ಮೂರ್ತಿ ಡಿಂಗರಿಗೆ ಬಲುಸಾರ್ಥಿ
ನೀನಾಗಿ ಮಾಡಿಸಿದುದೆಲ್ಲ ನಿನಗೆ ಆರ್ತಿ
ಜ್ಞಾನಮಯಕಾಯ ಗೋಪಾಲವಿಠ್ಠಲರೇಯ
ನೀನಿತ್ತ ಬಾರೋ ನಿಜ ಭಕ್ತ ಜನರೊಡಿಯಾ ॥ 4 ॥

ತ್ರಿವಿಡಿತಾಳ

ಮಾನವ ಯೋನಿಗಳು ಏನೇನು ಐದಿದವೆಲ್ಲ
ನಾನಾ ಬಗೆಯ ಪೂಜೆ ನಿನಗೆ ಸ್ವಾಮಿ
ನಾನು ನಿನ್ನನು ಬಿಟ್ಟು ಒಂದುಕಾಲದಲಿನ್ನು
ಏನಿದ್ದೆನೇನೊ ಚಲ್ವ ಚಿತ್ರ ಮಹಿಮಾ
ಕಾಣದೆ ಕೆಟ್ಟೆ ನಿನ್ನ ನಾನು ನನ್ನದು ಎಂಬೊ
ಹೀನ ಬುದ್ಧಿಯ ಮಾಯವು ಎನಗೆ ಪಚ್ಚೆ
ನಾನು ನೀನು ಎಂತೆಂಬೊ ಜ್ಞಾನವ ತಿಳಿಯದೆ
ಮಾನಸ ಪಶುವೊ ನಾ ಎನಂಬಿನೊ
ನೀನೇ ಅಲ್ಲವೆ ಎನಗೀ ಮಂದ ಬುದ್ಧಿ ಇತ್ತವ
ಏನು ಎನಗೆ ಕೆಟ್ಟದೊಂದು ಇಲ್ಲ
ಏನಾದದೆಲ್ಲ ಹಿಂದೆ ನಾನಾ ಕರ್ಮಂಗಳೆಲ್ಲ
ಮಾನಸ ವಾಚಾ ಕಾಯಾ ಮಾಡಿದದ್ದು
ಶ್ರೀನಾಥ ನಿನಗೆ ಮತ್ತೀಗ ಒಪ್ಪಿಸುವೆನೊ
ನಾನಲ್ಲ ಇದಕ್ಕೆ ಸ್ವಾತಂತ್ರನೆಂದು
ಏನು ಆದದ್ದು ಎಲ್ಲ ನೀನೆ ತೆಗೆದುಕೊಂಡು
ಹೀನನಾ ನೀನು ಸಾರ್ಥಕನ ಮಾಡು
ಭಾನು ಶತತೇಜ ಗೋಪಾಲವಿಠ್ಠಲ
ಕಾಣಿಸಿಕೊಂಡು ಕರ್ಮಕಾನನ ದಾಟಸೆನ್ನ ॥ 5 ॥

ಅಟ್ಟತಾಳ

ಎನ್ನದಶ ಇಂದ್ರಿಯಗಳು ನಿನ್ನ ವಿಷಯ ಕರಿಸಲಿ
ಎನ್ನ ಮನಸು ಬಂದು ನಿನ್ನಲ್ಲೆ ಎರಗಲಿ

ಅನ್ಯವೆಂದರೆ ಎನಗೆ ವಮನ ಸರಿಯಾಗಲಿ
ನಿನ್ನನೆ ಹುಡುಕುತ ಎನ್ನ ಬುದ್ಧಿಯು ಇರಲಿ
ನಿನ್ನನೋಡಿ ನಲಿದಾಡಲೆನ್ನ ಚಿತ್ತ
ನಿನ್ನಲ್ಲದಿಲ್ಲೆಂಬೊ ಅಹಂಕಾರ ಎನಗಿರಲಿ
ಇನ್ನೇನು ಬೇಡುವುದಿಲ್ಲವೊ ಹೇ ಸ್ವಾಮಿ
ನಿನ್ನದೆಲ್ಲ ಎಂಬುವದು ಪಾಲಿಸು
ಘನ್ನ ದಯಾನಿಧೆ ಗೋಪಾಲವಿಠ್ಠಲ
ನೀನಲ್ಲದರಿಯೆ ನಾ ಇನ್ನೊಂದು ಸುಖವ ॥ 6 ॥

ಆದಿತಾಳ

ಮೂರು ದಿನಕೆ ಓಮ್ಮೆ ಆಹಾರವನ್ನು ಕೊಂಡು
ನೀರುಮಾತ್ರವ ಕೊಟ್ಟು ನಿಲ್ಲಿಸಿ ದೇಹವ
ಆರು ಎನಗೆ ಹತ್ತದಂತಲಾದರು ಏನು
ನಾರಿ ಸುತರು ಸೇರದಂತಲಾದರು ಮಾಡು
ಅರಿವಾರಿವರನ್ಯತ್ರರ ಕೂಡಿಸಧೋಗು
ಊರನೆ ಹೊರಡಿಸಿ ಕಾನನ ಸೇರಿಸು
ನಾರಾಯಣಾ ನಿನ್ನ ನಾನು ಬಿಟ್ಟವನಲ್ಲ
ಈ ರೀತಿ ಯನಗೆ ನೀ ಮಾಡದಿರು ಇನ್ನು
ಆರಾ ಭಾರಕ್ಕೆ ಸರ್ವಕಾರಣ ನೀನೆಂದು
ಶಾರೀರ ಒಪ್ಪಿಸಿ ಕರವ ಮುಗಿದೆ
ಘೋರ ಸಂಸಾರದ ಬೇರು ಕಿತ್ತುವದಕ್ಕೆ
ಭಾರ ಭಾರಿಗೆ ನಿನ್ನ ಸ್ಮರಣೆ ಬಲವಯ್ಯಾ
ಭಾರತೀಶ ನೋಡಿಯ ಗೋಪಾಲವಿಠ್ಠಲ
ದೂರ ನೋಡದೆ ಮನಕೆ ಬಾರೊ ಸರ್ವದ ಸ್ವಾಮಿ ॥ 7 ॥

ಜತೆ

ನೀನುಧ್ಯಾನಕೆ ನಿತ್ಯ ನಿಲಕುತಲಿರು ಏಂದೆ
ಏನು ಅನ್ಯವನೊಲ್ಲೆ ಗೋಪಾಲವಿಠ್ಠಲ ॥ 8 ॥

ಧ್ರುವತಾಳ

## ಸುಳಾದಿ 44

ರಾಗ : ಮಾರವಿ

ಅಪರೋಕ್ಷ ವೆಂಬುವದು ಬಹುದೂರವಿಲ್ಲವಿನ್ನು
ಸ್ವಪರೋಕ್ಷ ದಾರಢ್ಯ ದಂತಲಿ ಇಪ್ಪುವದು
ಅಪವಾದದ ಮಾತಲ್ಲ ಆಲಿಸಿ ತಿಳಿವದು
ಕಪಟ ರಹಿತರಾದ ಕೋವಿದರು
ಶಪಥ ಮಾಡಲಿ ಬೇಕು ಸರ್ವೋತ್ತಮ ಹರಿ ಎಂದು
ಚಪಲ ಸಂದೇಹವನ್ನು ಬಿಟ್ಟು
ತಪಸು ಎಂದು ತಿಳಿದು ತ್ರಿವಿಧ
ತಾಪತ್ರಯವು ಆಪವರ್ಗ ಸುಪವರ್ಗದಾರಿ ಹಿಡಿದು
ಕುಪಿತ ವಾಗದೆ ದುಷ್ಟಉಕ್ತಿ ಸುವಚನಕ್ಕೆ
ಕ್ಲಿಪುತಕ್ಕೆ ಅಧಿಕ ಹ್ರಾಸ ಇಲ್ಲವೆಂದು
ಗುಪಿತಾದಲ್ಲಿ ಹರಿಯ ಗುಣಗಳ ಕೊಂಡಾಡಿ
ಸ್ವಪನ ಜಾಗ್ರತಿ ವ್ಯಾಪರಗಳ ತಿಳಿದು
ರಿಪು ಮಿತ್ರಗಳ ವ್ಯಾಪರ ಹರಿಯೇ ಎಂದು
ಸಪುತ ಧಾತುಗಳನ್ನಯಾದಿ ಕೋಶಗಳು
ಸಪುತ ದಶ ಸಹಸ್ರ ದ್ವಿ ನಾಡಿಯಲಿ
ಗುಪಿತ ನಾಗಿದ್ದ ಹರಿಯ ಗುಣರೂಪ ಕ್ರಿಯೆಗಳು
ಜಪಿಸು ಏಕೀ ಭೂತ ಬಿಂಬದಲ್ಲಿ
ಕಪಿಲ ಮೊದಲಾದ ಭಗವದವತಾರ
ತಪ ಮಾಡಿ ಚಿಂತಿಸು ಬಿಂಬಕ್ರೀಯಾ
ಗುಪಿತ ವ್ಯಕುತ ನಿತ್ಯ ಗೋಪಾಲವಿಠ್ಠಲ
ತಪಸಿಗೆ ಲಭ್ಯನಾಹ ಈ ಪರಿಚಿಂತಿಸೆ ॥ 1 ॥

ಅಟ್ಟತಾಳ

ಒಂದು ಮೂರುತಿ ಒಂದೆರಡು ಮೂರ್ತಿ
ಪೊಂದಿ ಲಿಂಗ ದೇಹ ಇಪ್ಪುವ ಮೂರ್ತಿ
ಒಂದು ಮೂರು ಮೂರ್ತಿ ಅನಿರುದ್ಧ ಕಾಯ
ದಿಂದ ಒಳ ಹೊರಗೆ ವ್ಯಾಪ್ತವಾದ ಮೂರುತಿ
ಛಂದ ಛಂದವಾದ ಹೃದಯ ಸದನದಲ್ಲಿ ಇಪ್ಪುವ ಮೂರುತಿ

ಒಂದೇಳು ದಳದಿ ಬಿಡದೆ ತಿರುಗುವ ಮೂರ್ತಿ
ಒಂದು ಹತ್ತು ಮೂರ್ತಿ ಚತುರ ವಿಂಶತಿ ಮೂರ್ತಿ
ಅಂದವಾದ ಐವತ್ತೊಂದು ಮೂರುತಿಗಳು
ಒಂದು ನವ ಮೂರುತಿ ಮತ್ಸ್ಯಾದಿಗಳನ್ನು
ವಂದಿಸಿರೊ ಕೃದ್ಧೋಲ್ಕಾದಿ ಮೂರುತಿಗಳು
ಒಂದು ಮೂರು ಮೂರ್ತಿ ವಟು ಜಾಮದಗ್ನಿ
ಸಂದಿ ಸಂದಿಗೆ ವ್ಯಾಪ್ತ ಮೂರುತಿಗಳ ತಿಳಿದು
ವಂದಿಸಿದರೆ ಎಲ್ಲ ಒಂದೇ ಮೂರುತಿ ಕಾಣೊ
ಇಂದಿರೆ ಅರಸ ಗೋಪಾಲವಿಠ್ಠಲರೇಯ
ವಂದಿಸಿದಂತೆ ತನ್ನವರಲಿಪ್ಪುವನು ಬಿಡದೆ ॥ 2 ॥

ರೂಪಕತಾಳ

ಸಾಸಿರ ನಾಮಕ್ಕೆ ಸಾಸಿರ ಮೂರುತಿ
ಸಾಸಿರ ದಳದಲ್ಲಿ ವಾಸವಾದ ಮೂರ್ತಿ
ದಾಸೋಹಂ ಎಂದವಗೆ ಬಿಡದೆ ತೋರುವ ಮೂರ್ತಿ
ಲೇಸು ಗ್ರಾಸಗಳಿಗೆ ಹಿಗ್ಗಿ ಕುಗ್ಗದ ಮೂರ್ತಿ
ಕಾಸಿಗೆ ಬೆಲೆಯಾಗಿ ಕ್ರಯವಾಗದ ಮೂರ್ತಿ
ದೇಶ ದೇಶದಿ ವ್ಯಾಪ್ತವಾಗಿದ್ದ ಮೂರುತಿ
ನಾಶರಹಿತ ಸ್ವಪ್ರಕಾಶವಾದ ಮೂರುತಿ
ಶೇಷನ ಹಾಸಿಕೆಯಲಿ ಮಲಗಿಪ್ಪ ಮೂರುತಿ
ಈ ಸರ್ವಜಗವೆಲ್ಲ ವ್ಯಾಪಿಸಿದ ಮೂರುತಿ
ದೋಷರಹಿತ ಮೂರ್ತಿ ಗೋಪಾಲವಿಠ್ಠಲ
ವಾಸವಾಗಿ ಹೃದಯ ದೊಳಗಿಪ್ಪ ಮೂರುತಿ ॥ 3 ॥

ಝುಂಪೆತಾಳ

ಕಂಣಿನೊಳಗೆ ಇದ್ದು ಕಾಣಿಸುವ ಮೂರುತಿ
ಕರ್ನಂಗಳಲ್ಲಿ ನಿಂತು ಭಿನ್ನ ಮೂರ್ತಿ ಬೀಜವಾದ ಮೂರ್ತಿ
ಅನ್ಯೋನ್ಯ ಆಶ್ರಯ ಆಗಿದ್ದ ಮೂರುತಿ
ತನ್ನ ನೆನೆವರಿಗೆ ತಗಲಿ ತೊಲಗದ ಮೂರುತಿ
ನಿನ್ನವನೆಂದವಗೆ ನೆಲೆಯಾದ ಮೂರುತಿ

ಚಿನ್ನುಮಯ ಮೂರುತಿ ಗೋಪಾಲವಿಠ್ಠಲ
ಅನ್ಯ ಜನರಿಗೆ ಅವೇದ್ಯನಾದ ಮೂರ್ತಿ ॥ 4 ॥

ತ್ರಿವಿಡಿತಾಳ

ಏಸು ಜನ್ಮದ ಉಪಾಸನೆ ಮಾಡಲು
ವಾಸನ ರೂಪದಿ ಒಲಿದು ತೋರಿದ ಮೂರ್ತಿ
ಕೇಶವ ಮತ್ಸ್ಯಾದಿ ಅವತಾರ ರೂಪದಿ
ದಾಸ ಜನರಿಗೆ ಒಲಿದು ತೋರುವ ಮೂರುತಿ
ಈ ಶರೀರ ಹೃದಯಾ ಕಾಶದಲ್ಲಿ ನಿಂದು
ಸುಷುಪ್ತಿಲಾತ್ಮಗೆ ಸುಖವ ಉಣಿಸುವ ಮೂರುತಿ
ಭಾಸುರ ಮೂರುತಿ ಭವಗಳ ಕಳೆದಿನ್ನು
ವಾಸವಾಗಿ ನಿತ್ಯ ನಲಿದು ಆಡುವ ಮೂರ್ತಿ
ವಾಸು ದೇವಾಚ್ಯುತ ಗೋಪಾಲಿವಿಠ್ಠಲ
ಶ್ರೀಶ ಕೃಷ್ಣ ಎನ್ನ ಪೋಷಿಪ ಮೂರುತಿ ॥ 5 ॥

ಅಟ್ಟತಾಳ

ಸೃಷ್ಟಿ ಸ್ಥಿತಿಯ ಕಾರಣ ಮೂರುತಿ
ಇಷ್ಟಾನಿಷ್ಟ ಪ್ರದವಾದ ಮೂರುತಿ
ಇಷ್ಟಾರಿಷ್ಟಕ್ಕೆ ತೊಡಕದ ಮೂರುತಿ
ಬಿಟ್ಟನೆಂದರೂ ಬಿಡಲೀಯದ ಮೂರುತಿ
ನಷ್ಟ ಜನರಿಗಿನ್ನು ವಂಚಿಸೊ ಮೂರುತಿ
ಮುಟ್ಟಿ ಭಜಿಸುವರಿಗೆ ಮುಂದೊಲಿದು
ಸ್ಪಷ್ಟವಾಗಿ ಸುಳಿದಾಡುವ ಮೂರುತಿ
ದಿಟ್ಟಿಸಿ ನೋಡಲು ಸರ್ವ ವಸ್ತುಗಳಿಗೂ
ಘಟ್ಟಿಯಾಗಿ ಬಿಂಬವಾಗಿದ್ದ ಮೂರುತಿ
ಇಷ್ಟ ದೈವವು ನಮ್ಮ ಗೋಪಾಲವಿಠ್ಠಲ
ಕಷ್ಟ ಸಂಸಾರದ ಕಡಲು ದಾಡಿಪ ಮೂರುತಿ ॥ 6 ॥

ಆದಿತಾಳ

ತಾರಕ ಕಾರಣವಾದ ಮೂರುತಿ
ತಾರಕ ಮಂತ್ರ ಉಪದೇಶ ಮೂರುತಿ

ಆರಬ್ಧಾಂತ ಗಾಮಿನಿಯಾದ ಮೂರುತಿ
ಭಾರಕರ್ತ ಅನಿಮಿತ್ತ ಬಂಧು ಮೂರುತಿ
ನಾರಿ ದ್ರೌಪದಿ ಅಭಿಮಾನ ಕಾಯ್ದ ಮೂರುತಿ
ನಾರಿಯೆರ ವ್ರತ ಕೊಲಿದಂಥ ಮೂರುತಿ
ಪೋರರ ಒಡ ಗೂಡಿ ಆಡಿದ ಮೂರುತಿ
ನಾರಾಯಣಿ ರೂಪವಾದ ಶ್ರೀ ಮೂರುತಿ
ವಾರಿಜೋದ್ಭವಪಿತ ಗೋಪಾಲವಿಠ್ಠಲ
ಕಾರಣನಾಗೆನ್ನ ಕಾಯ್ವಂಥ ಮೂರುತಿ ॥ 7 ॥

ಜತೆ

ಖಂಡಾಖಂಡ ಧ್ಯಾನ ಬಿಡದೆ ನಿತ್ಯವೂ ಮಾಡಾ
ಖಂಡೇಶ ಗೋಪಾಲವಿಠ್ಠಲ ನಿನಗೆ ಒಲಿವಾ ॥ 8 ॥

ಧ್ರುವತಾಳ

## ಸುಳಾದಿ 45

ರಾಗ : ಭೈರವಿ

ಸೃಷ್ಟಿಗೊಡಿಯ ಕೇಳೆಂದೆಷ್ಟು ನಾ ತುತಿಸಲು
ದೃಷ್ಟಿ ಇಂದಲಿ ಎನ್ನ ಕಡೆಯೆ ನೋಡಲಿವಲ್ಲಿ
ಅಷ್ಟ ಸೌಭಾಗ್ಯವೆಂಬೊ ಎಷ್ಟು ಮದವೊ ನಿನಗೆ
ಘಟ್ಯಾಗಿ ನೀನಲ್ಲಾದನ್ಯರಿಂದ ವೆಂದರೆ
ಸೊಟ್ಟ ತಿರುವಿ ಮೊಗ ಅಟ್ಟಿ ವೇರುತಲದೆ
ಎಷ್ಟಿಲ್ಲವೆಂದು ಬಿಟ್ಟಿರಂಜುವನಲ್ಲಾ
ಘಟ್ಟಿ ಭಕುತಿ ಪಾಶದಲಿ ಕಟ್ಟಿ ಎನ್ನುದರ ದೊ
ಳಿಟ್ಟು ಕೊಂಬೆನಯ್ಯಾ ಜಿಷ್ಣುಸಖನೆ ಕೃಷ್ಣ
ಭ್ರಷ್ಟ ಎಂತೆಂದು ದೂರ ದೃಷ್ಟಿಲಿ ನೋಡಿದರೆ
ಬಿಟ್ಟುಕೊಡೊ ನಿನ್ನ ಭಕ್ತವತ್ಸಲ ನೆಂಬೊಬಿರುದು
ಅಷ್ಟಸಂಪತ್ತು ಮತ್ತಿಷ್ಟುಕೊಡೊ ಎಂತೆಂದು
ಕಷ್ಟ ಬಡಿಸಿ ನಿನ್ನ ಕಾಡಿ ಬೇಡುವದಿಲ್ಲಾ
ಕಷ್ಟ ಸಂಸಾರವೆಂಬ ಸುಳಿಯವಳಗೆ ಎನ್ನ
ಇಷ್ಟು ನೋಡೋದು ನಿನಗೆಷ್ಟು ಸುಖವೊ ಕಾಣೊ
ಮೆಟ್ಟಿ ತುಳಿಯೊ ಬೆನ್ನಟ್ಟಿ ಬಾಹದುರಿತ
ಕುಟ್ಟಿಬೀಸಾಡು ಬಲು ನಷ್ಟಸಂಸಾರ ಬೇರ

ಸೃಷ್ಟ್ಯಾದ್ಯಷ್ಟಕರ್ತಾ ಗೋಪಾಲವಿಠ್ಠಲರೇಯಾ
ಸ್ಪಷ್ಟರೂಪ ತೋರೊ ಮುಟ್ಟಿ ಭಜಿಸಲು ॥ 1 ॥

ಮಟ್ಟತಾಳ

ಭಕುತರಿಗಾಗಿ ನೀ ಜಗವ ಪುಟ್ಟಿಸಿದಯ್ಯಾ
ಭಕುತರಿಗಾಗಿ ನೀ ಅವತಾರ ಮಾಡಿದಯ್ಯಾ
ಭಕುತರು ನಿನ್ನನು ಭಜಿಸದಿದ್ದರೆ ದೇವಾ
ಸಕಲ ಲೋಕರು ನಿನ್ನರುಹುವರೆಂತೊ
ಮುಕುತಿದಾಯಕ ಮೂಲ ದೈವ ವೆಂಬೋದು
ಸಕಲ ಲೋಕಕ್ಕೆ ಕರಿರಾಜ ತೊರಿಸಿದನು
ಉಕುತಿಗಳಿಂದ ಅರಸಲು ಬಾಹೋದು
ಪ್ರಕಟ ಮಾಡಿದಳಯ್ಯಾ ಶಕತಳು ದ್ರೌಪದಿ
ಸಕಲರಲ್ಲಿ ನೀನು ವ್ಯಾಪಕ ನೆಂಬೋದು
ಭಕುತ ಪ್ರಹ್ಲಾದ ಇರುವು ತೋರಿಸಿದನು
ಭಕುತರಿಂದ ನೀನು ಭಕುತರಾಧೀನ ದೇವಾ
ಭಕುತವತ್ಸಲ ನಮ್ಮ ಲಕುಮಿಯ ರಮಣ
ಉಕುತಿ ಪತಿ ನಾಭ ಗೋಪಾಲವಿಠ್ಠಲರೇಯಾ
ಭಕುತರ ಮುಂದೆ ನಿನ್ನ ಯುಕುತಿ ನಡೆಯದಯ್ಯಾ ॥ 2 ॥

ತ್ರಿವಿಡಿತಾಳ

ಶೃಂಗಾರ ಗದ್ದುಗೆ ಭಂಗಾರಾಭರಣಿಟ್ಟು
ರಂಗ ಒಲಿಯೊ ಎಂದು ಅಂಗೀಕರಿಸಲರಿಯೆ
ಮಂಗಳ ಮೂರುತಿ ಮನವೆ ಕುಳ್ಳಿರ ಪೀಠ
ಗಂಗಾ ಜನಕನೆಂದೆನಿಸಿ ಕೊಂಬೊದೆ ಸ್ನಾನ
ಅಂಗನೆ ದ್ರೌಪದಿ ಅಭಿಮಾನ ರಕ್ಷಕನೆಂಬ
ಶೃಂಗಾರ ಬಿರಿದೊ ವಸನಂಗಳು ನಿನಗೆ
ಅಂಗವೆ ಕೊರಡು ಶ್ರೀಗಂಧವೆ ತೇದಿಡುವೆನೊ
ಕಂಗಳೆರಡು ದೀಪ ಕರ ಉಭಯ ಚ್ಯಾಮರ
ಅಂಗದೊಳಿದ್ದಷ್ಟ ಕಮಲವು ಕುಸುಮವೊ
ಹಿಂಗದೆನ್ನ ಕಿಂಚಿತ್ತ ಭಕುತಿಯೆ ನೈವೇದ್ಯ

ರಂಗಾ ದಿನದಿನದಿ ಮಾಡಿಸಿದ ಕರ್ಮವೆ ಕಪ್ಪವು
ತುಂಗ ಮಹಿಮನೆ ಜಠರಾಗ್ನೀಯೆ ಆರುತಿ ತು
ರಂಗವದನ ಸರ್ವಾಂಗ ಸಮರ್ಪಿಸಿ ಕ
ರಂಗಳು ಮುಗಿದೆ ಅಂತರಂಗದಿ ನಿಲ್ಲೊ ಸ್ವಾ
ಯಂಗಾಯನ ನಾಮಾ ಗೋಪಾಲವಿಠ್ಠಲರೇಯಾ
ಸಂಗ ವಿಡಿಸೊ ನಿನ್ನ ಡಿಂಗರಿಗರೊಡನೆ ॥ 3 ॥

ಅಟ್ಟತಾಳ

ಒಡಿಯ ನಿನಗೆ ಮೊರೆಯಿಡುತಲಿದ್ದರೆ ಎನ್ನ
ಕಡಿಯೆ ನೋಡಲುವಲ್ಲಿ ಬಡಿವಾರ ನಿನಗೆಷ್ಟು
ತಡಿಯದೆ ನಾನೊಂದು ನುಡಿಯೆ ನುಡಿವೆನಯ್ಯಾ
ಕಡು ಕುಷ್ಟನಾರುತ ಮಡುವಿನೊಳಗೆ ಸೇರು
ಬಿಡದೆ ಬೆಟ್ಟವ ಪೊತ್ತು ಕಡಲೊಳಗಿರು ಇನ್ನು
ಅಡವಿ ಸೂಕರ ಜನ್ಮ ಬರಲಿ ನಿನಗೆ
ಕೆಡಲಿ ನಿನ್ನ ರೂಪ ಕಡು ಘೋರನಾಗೆಲೊ
ಒಡಲಿಗಿಲ್ಲದೆ ನೀನು ತಿರುಕಿಯನೆ ಬೇಡು
ಕೊಡಲಿಯ ಪಿಡಿದನ್ನು ಅಡವಿ ಸಂಚಾರನಾಗೊ
ಮಡದಿಯ ಕಳಕೊಂಡು ಜಡಿಯ ಧರಿಸೊ ನೀನು
ತುಡುಗ ದನ ಕಾಯೆಂದು ನುಡಿಯಲಿ ಜನರೆಲ್ಲ
ಉಡುವೊ ವಸ್ತ್ರವಿಲ್ಲದೆ ಬತ್ತಲಾಗಿ ನಿಲ್ಲೊ
ಕಡುವೇಗದಲಿ ನೀ ಕಲ್ಕಿ ರೂಪನಾಗೊ
ತಡಿಯದೆ ವರಗಳ ಕೊಡುವವನೆಂತೆಂದು
ನುಡಿದೆನೊ ನಾ ಇಂಥ ಬಿಡಿ ಮಾತುಗಳ
ಕಡುದಯಾಸಾಗರ ಗೋಪಾಲವಿಠ್ಠಲ
ಹಿಡಿದು ಬಿಡೆನೊ ದೇವಾ ಬಡವರಾಧಾರಿ ॥ 4 ॥

ಆದಿತಾಳ

ಈ ಪರಿ ನುಡಿದರೆ ಪಾಪವೆಂಬಿಯಾ ಹರಿಯೆ
ಪಾಪವೆಲ್ಲಾದ್ದೊಂದು ನಿನ್ನ ವ್ಯಾಪಾರ ಇಂಥದೊ
ಪಾಪಗರಳಿನ ಕೂಪಾದೊಳಗೆ ಬಿದ್ದು

ತಾಪಾರಾಗದೆ ನಿನ್ನ ಕೋಪದಿಂದಲಿ ನುಡಿದೆ
ಪಾಪಿ ಎಂತೆಂದು ಎನ್ನ ಹೋಪಾ ನೂಕಿದರೆ
ನೀ ಪತಿತ ಪಾವನ ನೆಂಬೊ ಬಿರುದುಂಟೊ ದೇವಾ
ಮೋಪರಾಗಿಹೆ ನಾನು ಕಾಮ ಕ್ರೋಧದ ಕೆಳಗೆ
ರಾಪು ಮಾಡದೆ ದೋಷ ಊಫ್ ಎಂದುಹಾರಿಸು
ಕುಪಥವ ತಪ್ಪಿಸು ಸುಪಥವ ತೋರಿಸೊ
ಶ್ರೀಪತಿ ಎನ್ನ ಮೇಲೆ ನೀ ಪ್ರೀತಿಯನೆ ಮಾಡು
ಅಪಾರ ನಾಮಂಗಳು ಲೇಪಿಸೆನ್ನ ಜಿಂಹೆಗೆ
ಪಾಪಗಳ ಕಳಿಯೊ ದ್ರೌಪದಿಯ ಮಾನದೊಡಿಯ
ಭಾಪುರೆ ನಮ್ಮ ಗೋಪಾಲವಿಠ್ಠಲರೇಯ
ನೀಪರ ದೈವವೆಂದು ನಾ ಪಾದ ಪಿಡಿವೆನೊ ॥ 5 ॥

ಜತೆ

ಎಂದಿಗಾದೂ ನಿನ್ನ ಬಳಿಗೆ ಬಾಹೋದೆ ಸತ್ಯ
ಇಂದೇ ಮುಂದಕೆ ಕರೆಯೊ ಗೋಪಾಲವಿಠ್ಠಲ ॥ 6 ॥

## ಧ್ರುವತಾಳ ಸುಳಾದಿ 46 ರಾಗ : ಭೈರವಿ

ನಿನ್ನ ನಿರ್ದೋಷನೆಂದು ನಾ ನಿರ್ದೋಷಿ ಆಗುವೆ
ನಿನ್ನ ಸರ್ವಜ್ಞನೆಂದು ಜ್ಞಾನವಂತ ನಾಗುವೆ
ನಿನ್ನ ಬಲವು ಪೂರ್ಣನೆಂದು ನಾ ಬಲಿಷ್ಟನಾಗುವೆ
ನಿನ್ನ ಸುಖ ಪೂರ್ಣನೆಂದು ಇನ್ನು ನಾ ಸುಖಿಸುವೆ
ನಿನ್ನ ವ್ಯಾಪ್ತನೆಂತೆಂದು ಇನ್ನು ಶೋಕ ನೀಗುವೆ
ನಿನ್ನ ಸ್ವಾತಂತ್ರನೆಂದು ಎನ್ನ ಸ್ವಾತಂತ್ರ ಬಲಿಪೆ
ನಿನ್ನ ಅನಾದಿ ಎಂದು ಇನ್ನು ನಿತ್ಯ ನಾನಾಹೆ
ನಿನ್ನ ನಿರ್ಗುಣನೆಂದು ನಾ ನಿರ್ಗುಣ ನಾಗುವೆ
ಭಿನ್ನ ಕಾಮ ರಹಿತ ಗೋಪಾಲವಿಠ್ಠಲ
ನಿನ್ನಾಧೀನವೊ ದೇವಾ ಎನ್ನ ವಿಭವಾತಿಶಯಾ ॥ 1 ॥

ಮಟ್ಟತಾಳ

ಸ್ವಾಮಿ ಎಂದು ನಿನ್ನು ಪಾಸನಿಯನು ಮಾಡಿ
ಸ್ವಾಮಿ ಯಾಗುವೆನಯ್ಯಾ ಎನಗಿಂದವರರಿಗೆ

ಪ್ರೇಮನೆಂದು ನಿನ್ನು ಪಾಸನೆಯನು ಮಾಡಿ
ಪ್ರೇಮ ಪಡೆವೆನಯ್ಯಾ ಎನ್ನಿಂದುತ್ತ ಮರ
ಕಾಮ ಪೂರ್ಣನೆಂದು ನಿನ್ನ ವಂದಿಸಿ ಭಿನ್ನ
ಕಾಮ ರಹಿತ ಆತ್ಮ ಕಾಮ ವುಳ್ಳವ ನಾಹೆ
ಸಾಮಜ ವರದನೆ ಗೋಪಾಲವಿಠ್ಠಲ
ತಾಮಸಜನ ವೈರಿ ಆ ಮಹಾ ಗುಣಪೂರ್ಣ ॥ 2 ॥

ರೂಪಕತಾಳ

ಶುದ್ಧಾತ್ಮನೆಂದು ಅಶುದ್ಧ ಪದಾರ್ಥದಲಿ
ಇದ್ದವ ನಾ ನಿನ್ನ ಬುದ್ಧಿಂದ ಕೊಂಡಾಡಿ
ಅಧ್ಯಾತ್ಮ ಮೊದಲಾದ ತ್ರಿವಿಧ ತಾಪಂಗಳು
ಒದ್ದು ನಾ ಬಿಡುವೆನು ನಿನ್ನ ವಂದಿಸಿ
ಉದ್ಧಾರಕ ಸರ್ವಜಗಕೆ ನೀನೆಂತೆಂದು
ಉದ್ಧರಿತ ನಾಗುವೆ ದಿನದಿನ ನಿನ್ನಿಂದ
ಮಧ್ಯ ಆದಿ ಅಂತ್ಯ ರಹಿತನೆಂದು ನಿನ್ನ ತುತಿಸಿ
ಶುದ್ಧವಾದ ನಿನ್ನ ಲೋಕದಿ ಹೊಂದಿರುವೆ
ಭೇದ್ಯ ಭೇದ್ಯ ರಹಿತನೆಂದು ನಿನ್ನ ತುತಿಸಿ
ಭೇದಾ ಭೇದಗಳಿಗೆ ದೂರ ನಾನಾಗಿರುವೆ
ಭದ್ರ ಮೂರುತಿ ಚಲುವ ಗೋಪಾಲವಿಠ್ಠಲ
ಸಾದೃಶ್ಯ ರಹಿತನೆಂದು ಧನ್ಯ ನಾನಾಗುವೆ ॥ 3 ॥

ಝಂಪೆತಾಳ

ಜನನ ಮರಣರಹಿತ ನಿಂದೆ ನಿನ್ನನು ಭಜಿಸಿ
ಜನನ ಮರಣಗಳಿಂದ ದೂರ ನಾಗುವೆನಯ್ಯಾ
ತನುವು ಅಪ್ರಾಕೃತನೆಂದು ನಿನ್ನ ತಿಳಿದೆನ್ನ
ತನುವಿನ ಭ್ರಮಣತ್ವನೆಲ್ಲ ನೀಗುವೆನಯ್ಯಾ
ನಿನಗೆ ನಿನ್ನವತಾರ ಕ್ಯೈಕ್ಯವನ್ನು ಚಿಂತಿಸಿ
ತೊನಗದಾನಂದದಲ್ಲಿ ನಿನ್ನ ವಿಷಯ ಕರಿಸುವೆ
ನಿನಗೆ ನಿತ್ಯ ತೃಪ್ತ ಅನಿದ್ರನೆಂದರಿದು
ಎನಗಿಪ್ಪ ಹಸಿವಿ ತೃಷಿ ನಿದ್ರಿಗಳ ನೀಗುವೆ

ಅನಿಮಿಷರೊಡೆಯ ಗೋಪಾಲವಿಠ್ಠಲ ಎಂತು
ನೆನವುವರು ನೀನವರ ಗುಣದಂತೆ ಗುಣವೀವೆ ॥ 4 ॥

ತ್ರಿವಿದಿತಾಳ

ತನು ಹೃದಯಾಕಾಶ ವನಜ ಮಂಡಲದಲ್ಲಿ
ದಿನಕರನಂತೆ ತಾ ಹರಿನಿಲ್ಲಿಸಿ
ಘನ ಜ್ಞಾನವೆಂಬ ಕಿರಣಗಳೆಲ್ಲ ಪಸರಿಸಿ
ಮನವೆಂಬ ರಥವೇರಿ ತಿರುಗಾಡುತಾ
ಅನುವಾದ ಬುದ್ಧಿಯನು ಅರುಣನ ಸಾರಥಿ ಮಾಡಿ
ಘನವಾದ ಭವಾಂಬುಧಿ ಒಣಗಿಸುವ
ದಿನದಿನ ತನ್ನ ನೂತನ ಧ್ಯಾನವನ್ನಿತ್ತು
ಜನನಿಯ ಮೊಲೆಹಾಲು ಉಣಿಸನಯ್ಯಾ
ತನು ಸಂಬಂಧಿಗಳಂತೆ ಬಂಧು ಅಲ್ಲವು ಕಾಣೊ
ಅನಿಮಿತ್ತ ಬಾಂಧವ ಅಪ್ರಮೇಯಾ
ಸನಕಾದಿಗಳೊಡಿಯಾ ಗೋಪಾಲವಿಠ್ಠಲ
ಅನುವಾಗಿ ಅವರವರ ಗುಣದಂತೆ ಉಪಾಸ್ಯ ॥ 5 ॥

ಅಟ್ಟತಾಳ

ದುಃಖಿಷ್ಟರಿಗೆ ದುಃಖ ವ್ಯಕ್ತಿ ಮಾಡುವನಾಗಿ
ದುಃಖಿ ಎಂತೆಂದು ತಾ ಕರೆಸಿ ಕೊಂಬುವನಯ್ಯಾ
ರಕ್ಕಸಾರಿಗೆ ನೀಚರ ಮಾಡೋದರಿಂದ
ಚೊಕ್ಕತಾ ಅವರ ನೆಂತೆಂದು ಬಂಧನೆನಿಸಿಕೊಂಬ
ದಿಕ್ಕಾಗಿ ಅವರವರ ಸಾಧ್ಯ ಸಾಧನ ಕರ್ಮ
ವ್ಯಕ್ತಿ ಮಾಡೋದರಿಂದ ಬಾಧ್ಯ ಬಾಧಕನೆಂಬ
ಉಕ್ತಿಲಿ ಕರೆಸಿಕೊಂಬುವ ಹೇಯತ್ವಗಳಿಂದ
ಲಕ್ಕುಮಿಪತಿ ಆವ ದಾವಾ ನಿಷೇಧವಿಲ್ಲ
ಭಕ್ತವತ್ಸಲ ದೇವ ಗೋಪಾಲವಿಠ್ಠಲ
ಸಿಕ್ಕದೆ ಮನೆಮನೆ ತುಕ್ಕುತ ಚರಿಸುವ ॥ 6 ॥

ಆದಿತಾಳ

ತಾರಕಹರಿ ಮುಖ್ಯ ಕಾರಣ ಕರ್ತ
ಮಾರಾರಿ ಬೊಮ್ಮ ಕಾರಣ ನೆನದಿರಿ

ಆರಾರಿ ಗೊರಗಳು ನೀವರು ಇವರೆಲ್ಲ
ಬಾರದಿದ್ದರೆ ಸರಿ ಹರಿ ತರಿ ದೊಟ್ಟುವ
ಮೀರ ಶಕ್ಯರು ಅಲ್ಲ ಈ ಶಕ್ತಿಯು ಒಬ್ಬ
ರಾರಾದರು ವಿಚಾರಿಸಿ ನೋಡಲು
ಭಾರ ನಿಳಹೇ ಭೂ ದೇವಿಯಾ ಗೇಳ್ಯೆವ
ತಾರ ಮಾಡುವ ಜೀವರ ಉದ್ಧರಿಸಲು
ಈರೇಳು ಜಗವ ಸೃಷ್ಟಿಸಿ ಒಡನಿದ್ದು
ಆರಭಾರಕೆ ಎಲ್ಲ ಕಾರಣ ನಾಗಿಹ
ಈ ರೀತಿ ಸೃಷ್ಟಿ ಸ್ಥಿತಿಲಯ ವ್ಯಾಪಾರೆಲ್ಲ
ಮಾರನಯ್ಯಗೆ ಕ್ರೀಡಿ ನಾರಿಗೆ ಸಂಪತ್ತು
ಮೂರುವಿಧ ಜೀವರಿಗೆಲ್ಲ ಭೋಗ
ನಾರಾಯಣನ ವ್ಯಾಪಾರವಯ್ಯಾ
ವಾರಿಜ ಭವನಯ್ಯ ಗೋಪಾಲವಿಠ್ಠಲ
ದೂರಕೆ ದೂರತಿ ಸಾರಿಗೆ ಸಾರ್‍ಯಾ ॥ 7 ॥

ಜತೆ

ಎಂತೆಂತು ತನ್ನನ್ನು ಭಜನಿಯ ಮಾಳ್ಪರಿಗೆ
ಅಂತಂತೆ ಆಗಿ ಪೊಳವಾ ಗೋಪಾಲವಿಠ್ಠಲ ॥ 8 ॥

ಧ್ರುವತಾಳ

## ಸುಳಾದಿ 47

ರಾಗ : ಭೈರವಿ

### ಶ್ರೀರಾಘವೇಂದ್ರಸ್ವಾಮಿ ಸ್ತೋತ್ರ

ಧರಿಯಯವೊಳಗೆ ನಮ್ಮ ಗುರುರಾಘವೇಂದ್ರರಿನ್ನು
ಇರುತಿಪ್ಪ ವಿವರ ಅರಿದಷ್ಟು ವರಣಿಸುವೆ
ಸ್ಥಿರವಾಗಿ ಮಂತ್ರಾಲಯಪುರ ತುಂಗ ತೀರದಿ
ಹರಿಭಕ್ತ ಪ್ರಲ್ಹಾದ ವರಯಾಗ ಇಲ್ಲಿಮಾಡಿ
ಸುರರಿಗಮೃತ ಉಣಿಸಿ ಪರಿಪರಿಯ ಕ್ರೀಯಮಾಡಿ
ಪರಿಸಿದ್ಧ ನಾದೆನೆಂದು ಅರಿದು ಈ ಸ್ಥಳದಲ್ಲಿ
ಗುರುರಾಘವೇಂದ್ರರಾಯ ಶರೀರ ಪೋಗಾಡಿದಿಲ್ಲಿ
ಪರಲೋಕಕ್ಕೆ ಸಾಧನೆ ಪರಿಪೂರ್ತಿಯ ಮಾಡಿಕೊಂಡು
ಸಿರಿ ಕೃಷ್ಣನ್ನ ಚರಣೆಕ್ಕರಗಿ ಸಂತೋಷದಲ್ಲಿ

ಧರಿಯ ಮ್ಯಾಲಿದ್ದ ಜನರ ಪೊರೆಯ ಬೇಕೆಂದೆನುತ
ಹರಿ ನುಡಿದನು ಇವರ ಪರಮ ದಯಾಳು ತಾನು
ಗುರುವಂತರ್ಯಾಮಿಯಾಗಿ ವರವಾ ನೀಯಲಿ ಜಗಕೆ
ನರಹರಿ ತಾನೆನಿಂದು ನಿತ್ಯ ಪೂಜೆಯ ಗೊಂಡು
ಸಿರಿವುಳ್ಳ ಕೀರುತಿಯ ಸುರರಪಾಲಕ ಚಕ್ರ
ಧರ ನಾರಾಯಣ ತಾನೆ ವರಸನ್ನಿಧಾನನಾಗಿ
ವರಿಗೆ ಫಲ ತಂದೀವ ಇಹ ಪರದಲ್ಲಿನ್ನು
ಕರುಣಾಕರ ರಂಗ ಗೋಪಾಲವಿಠ್ಠಲ ತನ್ನ
ಶರಣರ ಪೊರೆವಂಥ ಚರಿಯಾ ಪರಿಪರಿ ಉಂಟೊ ॥ 1 ॥

ಮಟ್ಟತಾಳ

ನರಹರಿ ಕೃಷ್ಣರಾಮ ಸಿರಿ ವೇದವ್ಯಾಸ
ಎರಡೆರಡು ನಾಲ್ಕು ಹರಿಯ ಮೂರ್ತಿಗಳು
ಪರಿವಾರ ಸಹವಾಗಿ ಸಿರಿ ಸಹಿತದಿ ನಿಂದು
ಸುರ ಗುರುವರ್ಯರು ಮಧ್ವಾಚಾರ್ಯರೆ ಮೊದಲಾಗಿ
ತರುವಾಯದಲಿನ್ನು ತರತಮ್ಯನುಸಾರ
ಪರಿಪರಿ ಯತಿಗಳ ಇರುತಿಪ್ಪರು ಇಲ್ಲಿ
ಹರುಷದಿಂದಲಿ ವೇದಗರೆದು ಶಾಸ್ತ್ರಗಳನ್ನು
ಪರಿಪರಿ ಪುರಾಣ ಭಾರತ ಗಾನದಲ್ಲಿ
ಸರಿಸರಿ ಬಂದಂತೆ ಸರಿಗಮ ವೆನುತಲಿ
ಭರದಿಂದಲಿ ಕುಣಿದು ಭಕುತಿಇಂದಲಿ ಇನ್ನು
ಹರಿಯ ಪೂಜಿಸುತ್ತ ಹಗಲಿರಳು ಬಿಡದೆ
ಪರತತ್ವದ ವಿವರ ಪರಿಪರಿ ಪೇಳುವರು
ಗರುಡವಾಹನ ರಂಗ ಗೋಪಾಲವಿಠ್ಠಲ
ಶರಣರ ಪಾಲಿಸುತ ಇರು ತಿಪ್ಪನು ಇಲ್ಲಿ ॥ 2 ॥

ತ್ರಿವಿಡಿತಾಳ

ನರಹರಿ ರೂಪವಾಗಿ ವಾಸವಾಗಿ ಇಲ್ಲಿ
ದುರಿತ ದುಷ್ಕೃತ ಬ್ರಹ್ಮೇತಿಗಳೋಡಿಸುವ
ಸಿರಿ ರಾಮನಾಗಿಲ್ಲಿ ಪರಿ ಪರಿ ಪರಿ ದೇಶಾಂ
ತರ ಅನ್ನ ಕಳಕೊಂಡು ನರರಿಲ್ಲಿ ಬಂದರೆ

ಸ್ಥಿರಪಟ್ಟ ಕಟ್ಟುವ ಸಿರಿಕೃಷ್ಣನಾಗಿಲ್ಲಿ
ಪರಿಪರಿಯಲ್ಲಿ ಬಂದ ಪರಮಾತುರರಿಗೆ
ವರವೀರ ಪುತ್ರೋತ್ಸವ ಮುಂಜಿ ಮದುವೆಯ
ಹರಕೆಗಳ ಕೈ ಕೊಂಡು ಹರುಷ ಬಡಿಸುವವರ
ಸಿರವೇದವ್ಯಾಸನಿಲ್ಲಿ ಭರದಿಂದಲಿ ಬಂದ
ದುರುವಾದಿಗಳನ್ನೆಲ್ಲ ಧುರದಿಂದಲೋಡಿಸಿ
ಮುರಿದು ಅವರ ಶಾಸ್ತ್ರ ಹರಿ ಸರ್ವೋತ್ತಮನೆಂದು
ಇರುವನಿಲ್ಲಿ ತೋರಿ ಶರಣಜನಕ ಇನ್ನು
ವರ ಜ್ಞಾನ ಸುಧಿಯನ್ನು ಕರದು ಕೊಡುತಲಿಪ್ಪ
ಸಿರಿವಂದಿತ ಪಾದ ಗೋಪಾಲವಿಠ್ಠಲ
ಪರಿ ಪರಿಯಲಿ ಇಲ್ಲಿ ವಾಲಗ ಕೈಕೊಂಬ ॥ 3 ॥

ಅಟ್ಟತಾಳ

ರಾಘವೇಂದ್ರನೆಂಬ ರೂಪ ತಾನೆ ಆಗಿ
ರಾಘವೇಂದ್ರನೆಂಬೊ ನಾಮ ಇಡಿಸಿಕೊಂಡು
ರಾಘವೇಂದ್ರರಿನ್ನು ಮಾಡಿದಂಥ ಪುಣ್ಯ
ಭೋಗವರಿತು ತನ್ನ ಭಾಗವತರ ಕೀರ್ತಿ
ಸಾಗಿಸಿ ಸಲಹಲಿ ತ್ರಿಜಗದೊಳಗಿನ್ನು
ಮೇಘ ಸುರದಂತಮೋಘ ಕೀರುತಿಯನು
ರಾಘವ ಇವರಿಗೆ ರಾಜ್ಯದಿ ತಂದೀವ
ರಾಘವೇಂದ್ರ ಮೂರ್ತಿ ಗೋಪಾಲವಿಠ್ಠಲ
ಭಾಗವತರಲ್ಲಿ ಬಹು ಪೂಜೆಯನು ಗೊಂಬ ॥ 4 ॥

ಆದಿತಾಳ

ದಿನದಿನಕಿಲ್ಲಿ ನೂತನ ಪೂಜೆಗಳಾಗ್ವವು
ದಿನದಿನಕಿಲ್ಲಿ ನೂತನ ವಾರ್ತೆಗಳಾಗ್ವವು
ದಿನದಿನಕಿಲ್ಲಿ ನೂತನೋತ್ಸವಗಳಾಗ್ವವು
ಜನರ ಸಂದಣಿ ಪ್ರತಿದಿನ ವಿಪ್ರಭೋಜನ
ಜನರ ಕೈಯಿಂದ ಪ್ರತಿಜನರೀಪ್ಸಿತ ತುಂಬುವರು
ಜನುಮ ಶತಫಲ ತಮ್ಮ ಜನನವ ನೀಗುವರು

ದಿನ ಸಪ್ತವರುಷ ದಿನ ಪರಿಯಂತರ
ದಿನಕರ ಶತತೇಜ ಜಗನಾಥ ತಾನಿಲ್ಲಿ
ಅನುವಾಗಿ ತಾನಿಂದು ಘನಮಹಿಮೆ ಯಿಂದಲಿ
ಜನರ ಪಾಲಿಸುವದಕ್ಕನುಮಾನಸಲ್ಲದೊ
ಗುಣಗಣ ಪರಿಪೂರ್ಣ ಗೋಪಾಲವಿಠ್ಠಲ ಅಣೋ
ರಣೀಯ ಎಂಬುವಗೆ ಎಣೆಯಾರೋ ಜಗದೊಳಗೆ ॥ 5 ॥

ಜತೆ

ಮಂತ್ರ ಸಿದ್ಧಿ ಕ್ಷೇತ್ರ ಇರುನೋಡಿ ಕೋವಿದ
ಮಂತ್ರ ಪ್ರತಿಪಾದ್ಯ ಗೋಪಾಲವಿಠ್ಠಲ ನಿಂದ ॥ 6 ॥

ಧ್ರುವತಾಳ **ಸುಳಾದಿ 48** ರಾಗ : ಭೈರವಿ

ಮುಕುತಿಯು ಬೇಕು ಎಂಬಾಸಕುತಿ ವುಳ್ಳವರೆಲ್ಲ
ಯುಕುತಿಯ ಕೇಳಿ ಎನ್ನ ಶಕುತಿದ್ದಷ್ಟು ಪೇಳುವೆ
ಸಕಲ ಧರ್ಮವು ನೋಡಾ ಪ್ರಕಟಾಗೆ ಬಂದವೆರಡು
ಭಕುತಿ ಜ್ಞಾನವು ಪುಟ್ಟಿ ತಿಳಿಯಬೇಕು
ಸುಖತೀರ್ಥರ ಶಾಸ್ತ್ರದ ಉಕುತಿಯ ಅನುಸರಿಸಿ
ಕಕುಲಾತಿ ಹರಿಯಲ್ಲಿ ಮುಕುರಿ ಬಿದ್ದಿರಬೇಕು
ಲಕುಮಿ ಮೊದಲುಮಾಡಿ ಪುಷ್ಕರ ಪರಿಯಂತ
ಭಕುತರ ತಾರತಮ್ಯ ಯುಕುತಿ ಇಂದ ಅರಿಯಬೇಕು
ಭಕುತರೊಳು ತನ್ನಿಂದಧಿಕರನ್ನು ಕಂಡರಲ್ಲಿ
ಭಕುತಿಯನಿಟ್ಟು ಅವರ ಕೃಪೆಯ ಪಡಿಯಬೇಕು
ಭಕುತರೊಳು ತನ್ನಿಂದ ಸುಖಿಸುತ್ತಲಿರಬೇಕು ಅ
ಶಕತರ ಕಂಡರೆಭಕುತಿ ಪುಟ್ಟುವಂತೆ ಕರುಣಮಿಗಿಲಾಗಿ ಮಾಡಬೇಕು
ಸಕಲ ಪ್ರಾಣಿಗಳೆಲ್ಲ ಸುಖದಲ್ಲಿರಲಿ ಎಂದು
ವಿಕಸಿತವಾಗಿ ಮುಖ ಪ್ರಕಾಶಿಸುತ್ತಿರಬೇಕು
ಭಕುತರೊಳಗೆ ಸಮಾನಿಕರಲ್ಲ್ಯಾದರು ತನಗೆ
ಸಖತ್ವವಾಗಿ ಸತತ ಸಕಲ ಇಂದ್ರಿಯಗಳೆಲ್ಲ
ಪ್ರಕಟಿಸದೆ ಬಂಧಿಸಿ ಬಕನಂತೆ ಭಕುತಿಯಕ್ಕು
ಯುಕುತಿ ಬಿಟ್ಟು ಮುಕುತಿದಾಯಕ ಚಲ್ವ ಗೋಪಾಲವಿಠ್ಠಲನ್ನ
ನಖಶಿಖ ಪರಿಯಂತ ನಿತ್ಯ ಧ್ಯಾನವಮಾಡು ॥ 1 ॥

ಮಟ್ಟತಾಳ

ಕಾಮಕ್ರೋಧ ಲೋಭ ಮೋಹಮದ ಮತ್ಸರ
ನೇಮದಿ ಬಿಡಬೇಕು ನೇಮದಲ್ಲಿಡಬೇಕು
ಸ್ವಾಮಿಯ ಬಿಟ್ಟು ಅನ್ಯವಿಷಯ ಕೇಳುವಂಥ
ಕಾಮವನ್ನು ಹಿಡಿದು ಖಂಡಿಸಲಿಬೇಕು
ಸ್ವಾಮಿಯ ದ್ರೋಹಿಗಳ ಕಂಡವರ ಮೇಲೆ
ಕ್ಷೇಮ ಚಿಂತಿಸದಲ್ಲಿ ಕ್ರೋಧ ಮಾಡಲಿಬೇಕು
ಸ್ವಾಮಿ ವಿಷಯದಲ್ಲಿ ತತ್ವ ಧರ್ಮದ ಮಾರ್ಗ
ನೇಮವು ಬಲ್ಲಾತನಾಗಿದ್ದರು ಸರಿಯೆ
ತಾಮಸ ಜೀವನು ಬಂದು ಕೇಳಿದರೆ
ಪಾಮರ ಗರುವದ ಲೋಶ ಮಾಡಲಿ ಬೇಕು
ತಾಮಸ ಜೀವನ್ನ ತಾ ಮತ್ತೆ ಕಂಡರೆ
ತಮಸಿಗೆ ಹೋಗುವಂತೆ ಮೋಹ ಪುಟ್ಟಸಬೇಕು
ಸ್ವಾಮಿಯ ಧ್ಯಾನಾನಂದ ಭರಿತನಾಗಿ
ಪಾಮರನೆದುರಿಗೆ ಮದದಿ ತಿರುಗಬೇಕು
ಸ್ವಾಮಿಸರ್ವೋತ್ತಮತ್ವ ಬಿಟ್ಟು ಪೇಳುವಂಥ
ತಾಮಸನ್ನ ಕಂಡು ಮತ್ಸರಿಸಲಿಬೇಕು
ಸ್ವಾಮಿಯ ಸೇವಿಯ ಬೇಕು ಎಂಬುವಂಥ
ಕಾಮವು ಸರ್ವದ ಕಕುಲಾತಿಯು ಬೇಕು
ಸ್ವಾಮಿಯದಾಸರ ಕಂಡರಾಯಿತೆ ಇನ್ನು
ಪ್ರೇಮದಿಂದಲಿ ಇನ್ನು ಮೋಹ ಮಾಡಲಿಬೆಕು
ಸಾಮಜವರದ ಶ್ರೀ ಗೋಪಾಲವಿಠ್ಠಲನೆ
ಕಾಮಕ್ರೋದಂಗಳಿಗೆ ನಿಯಾಮಕ ನೆನಬೇಕು ॥ 2 ॥

ರೂಪಕತಾಳ

ಆಡಲಿ ಬೇಕಿನ್ನು ಸರ್ವ ಮಾತುಗಳು
ಆಡಿಸುವ ಬ್ಯಾರೆ ಎಂದು ತಿಳಿಯಬೇಕು
ನೋಡಲಿ ಬೇಕು ಎಲ್ಲ ಜೀವರು ಮಾಡುವಕರ್ಮ
ಮಾಡಿಸುವ ಬೇರೆ ಎಂದು ತಿಳಿಯಲಿ ಬೇಕು

ಮಾಡಬೇಕು ಜಡಗಳಿಂದ ಹರಿಯೆ ಪೂಜೆ
ನೋಡಿ ಚಿಂತಿಸಬೇಕು ಅಲ್ಲಿಪ್ಪ ಮೂರ್ತಿಗಳ
ಆಡಿಸುವ ಮೂರ್ತಿ ಬೇಡಿಸುವ ಮೂರ್ತಿ
ನೋಡಿಸುವ ಮೂರ್ತಿ ಕೂಡಿ ಚಿಂತಿಸಿ ತನ್ನ
ಗೂಡಿನಲ್ಲಿ ನಿತ್ಯ ಮಾಡಬೇಕು ಧ್ಯಾನ
ರೂಢಿಗೊಡೆಯ ರಂಗ ಗೋಪಾಲವಿಠ್ಠಲಂಗೆ
ಈಡಿಲ್ಲವೆಂದು ಕೂಗ್ಯಾಡಬೇಕು ನಿತ್ಯ ॥ 3 ॥

ಝಂಪಿತಾಳ

ಆರುಪರಿಯ ಭೇದ ತಾರತಮ್ಯವಾಗಿ ತಿಳಿದಿರಲಿಬೇಕು
ಕಾರಣ ಅಕಾರಣ ದಾರಿ ವಿಚಾರಿಸುತ್ತ
ಇರಲಿ ಬೇಕು ಸೋಪಾನಗಳನು ನಾರಾಯಣಗೆ
ನಾರಾಯಣನ ರಾಣಿಗೆ ಭೇದ ನಾರಾಯಣಗೆ ಜೀವನಕೆ ಭೇದ
ಆರಾರು ಜೀವರು ತಮ್ಮೊಳು ತಮಗೆ ಭೇದ
ನಾರಾಯಣಗೆ ಜಡಕೆ ನಿತ್ಯ ಭೇದ
ಕಾರಣವಾಗಿಪ್ಪ ಜೀವ ಜಡಕೆ ಭೇದ
ಆರಿಸುವದು ಜಡಕೆ ಜಡಕೆ ಭೇದ
ನಾರಿಯರಿಗೆ ಭೇದ ಪುರುಷರಿಗೆ ಭೇದ
ನಾರಾಯಣ ಲಕುಮಿ ಇವರೆ ಎಂದು
ತಾರತಮ್ಯವು ನಿತ್ಯ ಮೂರೆರಡು ಭೇದ ನಿತ್ಯ
ಸಾರುತಿಪ್ಪವು ಶ್ರುತಿ ಸ್ಮೃತಿ ವಾಕ್ಯವು
ಆರು ಮೂರು ಭಕುತಿಯಿಂದ ಶ್ರೀಹರಿಯನ್ನು
ಆರಾಧಿಸುವಂಥ ಭಕುತರಿಗೆ
ತೋರುತಿಪ್ಪ ತನ್ನಮೂರ್ತಿ ಇಷ್ಟರೊಳಗೆ
ಸೂರಿಯನಂದದಿ ಪೊಳೆವುತಲಿ
ಕಾರುಣ್ಯ ಸಾಗರ ಗೋಪಾಲವಿಠ್ಠಲ
ಈ ರೀತಿ ಅರಿದವರಿಗೆ ಪೊರಿಯದೆ ಬಿಡನು ॥ 4 ॥

ತ್ರಿವಿಡಿತಾಳ

ಭಕುತಿಯಮಾಡಿರಿ ಸಕಲವೆಲ್ಲವ ಬಿಟ್ಟು
ಮುಕುತಿಗೆ ಸೋಪಾನ ಇದೆ ಇದೆ ಎಂದು

ಭಕುತರೆಂಬವರಿಗೆ ಲಕುಮಿ ಪತಿಯೆ ಭಾಗ್ಯ
ಲಕುಮಿ ಪತಿಗೆ ಭಕುತರೇವೆ ಭಾಗ್ಯ
ಲಕುಮಿಯೆನು ಬಿಡುವೆ ಭಕುತರ ಬಿಡೆನೆಂದು
ಉಕುತಿ ಶ್ರೀಹರಿ ತಾನು ಶಪಥ ಮಾಡಿಹನು
ಸಕಲ ಸತಿಸುತರು ಮಿಕಿಲಾದ ದ್ರವ್ಯ ದೇಹ
ಸಕಲವೆಲ್ಲವು ನೋಡಾ ಸ್ನೇಹವು ಅಧಿಕವಾಗಿ
ಮುಕುರಾತಿ ಹರಿಯಲ್ಲೆ ಕಕುಲಾತಿ ಇರಬೇಕು
ಸಕಲ ಗುಣ ಪೂರ್ಣ ಗೋಪಾಲವಿಠ್ಠಲ
ಮಕ್ಕಳ ತಾಯಿ ಆಲಿಸಿದಂತಾಲಿಸುವಾ ॥ 5 ॥

ಅಟ್ಟತಾಳ

ನಿನಗೆ ನಿಜವಸ್ತು ನೀನು ಅರಿತು ನೋಡು
ನಿನಗೆ ಆವದು ಎಂದು ಖೂನವು ಪಿಡಿಯಿನ್ನು
ವನುತೆ ಸುತರು ನಿನ್ನ ಅನುವಿಗೆ ಬಾರದು
ತನು ಸಂಬಂಧಿಗರೆಲ್ಲ ತತ್ಕಾಲದವರೆಲ್ಲ
ನೆನಸದಿರಿವರಿಂದ ನಿನಗೆ ಆಗುವ ಸುಖ
ಕನಸಿನೊಳಾದರು ಕಾಣದಿರೆಲೋ ನೀನು
ನಿನಗೆ ಸುಖ ದುಃಖ ಕ್ಷಣ ಕ್ಷಣಕೆ ಇನ್ನು
ಅನುದಿನ ಬಿಡದಲೆ ಉಣಿಸುವ ಬೇರುಂಟು
ಘನಮಹಿಮೆ ನಮ್ಮ ಗೋಪಾಲವಿಠ್ಠಲನ್ನ
ನೆನವಂಗೆ ಈಸುಖ ಅನುಭವ ವಾಗುವದು ॥ 6 ॥

ಆದಿತಾಳ

ಸುಲಭವಾಹುದು ಆಗಾಧವಾಹುದು
ಗೆಲುವು ಆಹುದು ತಿಳಿಯಬಾರದು
ನಿಲಕ ಆಹುದು ನೆಲಿಯೆ ದೋರದು
ಒಲಿದ ಬಳಿಕ ಚಲಿಸನೆಂದಿಗೂ
ತಲೆಯು ಕೆಳಗೆಮಾಡಿ ಹಲುಬಿದರು
ಹಲವು ಕಾಲ ನೆಲೆಯು ದೋರನವಗೆ ತನ್ನತಳ
ತಿಳಿಯದಂಥ ಮನುಜನಿಗೆ

ಅಳಿದು ವಿಷಯಂಗಳನು ಎಲ್ಲ
ಮಲವು ತೊಳೆದು ತಿಳಿದು ತನ್ನ
ತನ್ನ ಕೆಳಗೆ ಬಿದ್ದನೆಂದ ಬಳಿಕ
ತಿಳಿಯಗೊಟ್ಟು ಪೊರೆವ ನಾಗ
ಕಳೆವ ನಾನಾ ದೋಷರಾಶಿ
ಗಳನ್ನು ಎಲ್ಲನು ಕತ್ತಲೆಲ್ಲ
ಬೆಳಕು ಮಾಡುವನು ತನ್ನ
ಎಳಿಯ ಕರುಣ ನೋಟದಿಂದ
ಸುಲಭ ಭಕ್ತವತ್ಸಲ ಗೋ
ಪಾಲವಿಠ್ಠಲರೇಯ ತನ್ನ
ತಿಳಿದ ಹಾಗೆಲ್ಲ ನಾವು
ತಿಳಿದಿ ಕೊಡುವ ತನ್ನನೂ ॥ 7 ॥

ಜತೆ

ನಂಬಿರೊ ನಂಬಿರೊ ಇಂಬು ಬೇಕೆಂಬೋರು
ಡಂಭವ ಬಿಟ್ಟು ಗೋಪಾಲವಿಠ್ಠಲನ್ನ ॥ 8 ॥

ಧ್ರುವತಾಳ **ಸುಳಾದಿ 49** ರಾಗ : ಭೈರವಿ

ಮೃತ್ತಿಕೆ ದೇಹವಿನ್ನು ವ್ಯರ್ಥಯಾತಕೆ ದಣಿಪೆ
ಅರ್ತುಕೊ ಇದೆ ವ್ಯಾಳ್ಯ ಗುರ್ತುಕೊಡದೆ
ತೀರ್ಥಪಾದನ ಪಾದ ಕೀರ್ತನೆ ಮಾಡು ಮನದಿ
ಸ್ಫೂರ್ತಿಯ ಮಾಡುವನು ಸಾರ್ಥಕಾಗಿ
ರಾತ್ರಿಹಗಲು ನೀ ತ್ರೀ ಮೂರ್ತಿಯ ಮರಿಯದೆ
ಗಾತ್ರ ಉಪಯೋಗದ ಚಿಂತೆ ತೊರೆದು
ಅರ್ಥ ನಿನಗೆ ಮುಖ್ಯ ಅರ್ತುಕೊ ಅವದೆಂದು
ವಾರ್ತಿಯ ಬಿಡು ಪೊಲಿಸಬೇಡ ಅನ್ಯ
ಶ್ರೋತ್ರ ಜಿಹ್ವೆ ನಾಶಿಕ ಮಾತ್ರದಿ ವಿಷಯದಲ್ಲಿ
ಆರ್ತು ಸ್ವಾದಿಸು ಎಲ್ಲ ಶ್ರೀಹರಿಯೆ ಮರತರೆ ಮರಿಯದೆ
ಅರ್ತರೆ ಆದಿರರೆಂಬೊ ಸ್ಫೂರ್ತಿ ಬರುತಿರಲೊ
ಆರ್ತನಾಗಿ ಶಾಸ್ತ್ರ ಪ್ರತಿಪಾದ್ಯವೆ ಮೂರುತಿ ತಿಳಿದು ಮನದಿ

ಸ್ತೋತ್ರವ ಮಾಡು ನೀ ಸತ್ಪಾತ್ರದಿಂದ
ಯಾತ್ರಿಯು ತೀರ್ಥಗಳು ಎಲ್ಲ ಇದರೊಳುಂಟು
ಮರ್ತು ಬಿಡ ಬೇಡವೊ ಶ್ರೀ ಹರಿಯ
ಕ್ಷೇತ್ರಜ್ಞ ನಮ್ಮ ಸಿರಿ ಗೋಪಾಲವಿಠ್ಠಲ
ಮೂರ್ತಿ ಮಂತನಾಗಿರುವೆನೊ ಎಲ್ಲ ಸ್ಥಳದಿ ॥ 1 ॥

ಮಟ್ಟತಾಳ

ಧನವು ಧನವು ಎನ್ನು ಧನದೊಳಗಿಪ್ಪ ನ್ನ
ನೆನೆದು ತೆಗೆದುಕೋ ಶೋಧನವು ಮಾಡಿ ನೋಡಿ
ತನಿವಿಗೆ ಕೆಲಸ ವೀಡು ತನು ಬಂಧಿಗಳ ನೋಡು
ಎಣಿಕೆ ತಟ್ಟು ಭಾಗವನು ಮಾಡು ನಾಲ್ಕು
ಎಣಿಸುತ ಅಲ್ಲಲ್ಲಿ ಇರು ಎಲ್ಲ ಸ್ಥಳದಿ
ಗುಣ ಹರಿಯದೆಂದು ಗುಪ್ತವಾಗಿ ಯಿನ್ನು
ಅಣು ಘನ ಪರಿಪೂರ್ಣ ಗೋಪಾಲವಿಠ್ಠಲ
ಅನಿಮಿತ್ತ ಬಂಧೆಂಬೋ ಗುಣವುಳ್ಳವ ನಾಗೊ ॥ 2 ॥

ರೂಪಕತಾಳ

ಒಂದು ಅರ್ಥವು ನಿನಗೆ ದೊರಕಿದರಾಯಿತೆ
ಚಂದಾದಿ ಚಿಂತಿಸು ಅನಂತ ಪರಿಯಲ್ಲಿ
ಒಂದು ಭಾಗ ದೇವ ಸಮುದಾಯಕ್ಕೆ ಕೊಡು
ಒಂದು ಭಾಗ ಪಿತುರುಗಳಿಗೆ ಇನ್ನು ಮಾಡು
ಒಂದು ಭಾಗ ಪರಿವಾರ ಬಂಧುಗಳಿಗೆ
ಚಂದಾದಿ ಕೊಟ್ಟು ಆನಂದವ ವುಣು ಕಂಡ್ಯಾ
ನಂದ ಗೊಪಿಯ ಕಂದ ಗೋಪಾಲ ವಿಠ್ಠಲನ್ನ
ಚಂದಾದಿ ನಿನ್ನ ಮಂದಿರ ದೊಳು ತಿಳಿ ॥ 3 ॥

ಝಂಪಿತಾಳ

ಜ್ಞಾನವೆ ಮುಖ್ಯ ಸಾಧನೆ ನಿನಗೆ ನೋಡು
ಏನು ಧನದಿಂದಾಗೆ ಕರ್ಮ ಅದರೊಳಗುಂಟು
ಪ್ರಾಣಹಿಂಸ ರಹಿತ ಕರ್ಮ ಮಾಡು ನಿತ್ಯ
ಶ್ರೀನಿವಾಸ ಅದಕೆ ಮೆಚ್ಚುವನು

ಜ್ಞಾನಮಯ ಕಾಯ ಗೋಪಾಲ ವಿಠ್ಠಲರೇಯ
ಕಾಣಿಸುವ ನಿನಗೆ ಕರುಣವು ಮಾಡಿ ನಿರುತಾ ॥ 4 ॥

ತ್ರಿವಿಡಿತಾಳ

ತನುವು ಮಂಟಪ ಮಾಡು ಮನವೇ ಪೀಠವ ಯಿಡು
ನೆನೆದು ಕುಳಿಸು ನಿನ್ನ ವೊಳಗಿದ್ದ ಮೂರ್ತಿಯಾ
ಧ್ಯಾನ ಅವಹನಾದಿಗಳನೆನೆದು ಅಲ್ಲೆ ಯಿಪ್ಪ
ಅಣು ಮಹಾ ಮೂರ್ತಿಗೆ ಅಭಿಷೇಕವ ಮಾಡಿಸು
ಗುಣ ಮೂರರೊಳಗಿದ್ದಾ ಯೆನಿತಾವಾಹಿಸಿ ನೆನೆದು
ಜಿನಸು ವಸನಾಭರಣೆ ಧೂಪ ದೀಪವು ಮಾಡು
ನೆನಸು ಗಂಧ ಪುಷ್ಪವನು ಮಿಕ್ಕಾದದ್ದೆಲ್ಲ
ಗುಣಮೂರರಿಂದಾಹ ಪದಾರ್ಥಗಳನ್ನೆಲ್ಲ
ನಿನಗೆ ಒಂದು ಉದಕ ಮಾತ್ರ ದೊರಕಿದರೆ
ಇನಿತು ಪರಿಯು ಎಲ್ಲ ಅದರಿಂದ ಚಿಂತಿಸೋ
ಧನದ ಪೂಜೆಗೆ ಅತ್ಯಾಯಾಸ ಮಾಡಲಿ ಬೇಡ
ಘನದೈವ ನಮ್ಮ ಗೋಪಾಲವಿಠ್ಠಲ ರೇಯ
ನಿನಗೆಷ್ಟು ಪರಿಯಲ್ಲಿ ಪೊರೆವ ಅವನ ತಿಳಿ ॥ 5 ॥

ಅಟ್ಟತಾಳ

ಒಳಗೆ ಬಂದರೆ ನಿನ್ನ ಒಳಗೆ ಇರುತಲಿಪ್ಪ
ಸುಳುವುತಿಪ್ಪ ನಿನ್ನ ಸುತ್ತು ಬಿಡದೆ ಇನ್ನು
ಹಲವು ಪರಿ ಕರ್ಮ ನಿನಗಾಗಿ ಮಾಡುತ
ಚಲುವ ನಿರ್ಲಿಪ್ತನ ತಿಳಿಯದೆ ಕೆಡುವಿಯಾಕೆ
ಸುಲಭವಾಗಿ ಕರತಳ ತೊಳಗಿದ್ದಂಥ
ಫಲವ ನೀ ಕಾಣದೆ ಬಲು ದಣವದೇನೊ
ಗೆಳೆಯನಾಗಿ ಪಾರ್ಥಗೊಲಿದ ನಮ್ಮ ಸ್ವಾಮಿ
ಚಲುವ ಗೋಪಾಲವಿಠ್ಠಲರೇಯನ ನೀನು
ಘಳಿಗೆ ಮರಿಯ ಬೇಡ ಬಲುಪ್ರಿಯಾ ಬಲುಪ್ರಿಯಾ ॥ 6 ॥

ಆದಿತಾಳ

ಈವಾಗ ಆಗಾವ ಎಂಬೋದು ಬೇಡವೊ
ದೇವನ ಸ್ಮರಣೆಯು ಭಾವದೆ ಕಾಲವು
ಪಾವನ ಜಲದಲ್ಲಿ ಆ ವಾಯು ವಿಪ್ರರು
ಆವ ಸೂರ್ಯ ಅಧಿಷ್ಠಾನದಲಿದ್ದು
ದೇವನ ಸ್ಮರಣೆಯು ಬರುತ ಇರಲಿಕಂಡ್ಯಾ
ಕಾವನ ಬಿಡಿದಿನ್ನು ಗೋಪಾಲವಿಠ್ಠಲ ॥ 7 ॥

ಜತೆ

ಗ್ರಹಮೇಧಿ ಮಾಡಿನಿನ್ನ ಗ್ರಹದೊಳು ಯಿಪ್ಪಂಥ
ಶ್ರೀಹರಿ ಗೋಪಾಲವಿಠ್ಠಲನ್ನ ನೆನಿ ಕಂಡ್ಯಾ ॥ 8 ॥

ಧ್ರುವತಾಳ **ಸುಳಾದಿ 50** ರಾಗ : ಭೈರವಿ

ಮುಕ್ತರ ಸ್ಥಿತಿಯನ್ನು ವರ್ನಿಸಿದೆ ಪೇಳುವದಕ್ಕೆ
ಶಕ್ತರಾರಿನ್ನು ಎನ್ನ ಶಕ್ತ್ಯಾನುಸಾರ ಪೇಳ್ವ
ಉತ್ತಮ ಮಧ್ಯಮ ಅಧಮ ತರತಮ್ಯದಿಂದ ಜೀವ
ಮುಕ್ತಿಲಿ ಇಪ್ಪುವರು ಬಿಡದೆಂದೆಂದು
ಮತ್ತೆ ತ್ರಿಗುಣಾತ್ಮಕ ಲಿಂಗ ರಹಿತರಾಗಿ
ಚಿತ್ಸ್ವರೂಪದಿಂದಲೇ ಸಂಚರಿಸುತ್ತ
ಮತ್ತೆ ಸಾಕಾರ ಸರ್ವ ಅಂಗಾಭರಣ ಭೂಷಿತ
ವಸ್ತ್ರ ಮಾಲಿಕೆ ಗಂಧ ಪರಿಮಳದಿ
ಎತ್ತಿ ಪಿಡಿದ ಶಂಖ ಚಕ್ರ ಆಯುಧ ಧರಿಸಿ
ನಿತ್ಯ ಆನಂದ ಅನುಭೋಗಿಸುತ್ತ
ಅತ್ಯಂತಾಭೇದ ಎಲ್ಲ ಸ್ವರೂಪ ಭೂತವಿನ್ನು
ಎತ್ತಲಾದರನಿತ್ಯವೆಂಬುವದಿಲ್ಲ
ನಿತ್ಯ ಸೇವಿಯು ತಮಗಿಂದುತ್ತಮ ರಾದರವಿಗೆ
ಛತ್ರ ಚಾಮರ ನಾನಾ ಮುಂತಾದದ್ದು
ಭೃತ್ಯ ಕೆಲಸಕ್ಕಿನ್ನು ಕೈ ಜೋಡಿಸಿಕೊಂಡು
ಜತ್ತಾಗಿ ನಿಂತಿಪ್ಪರು ಕೆಡಕ್ಕಿಲ್ಲದೆ

ಚಿತ್ತ ಶುದ್ಧರೈ ಎಲ್ಲ ಚಂಚಲೀರಿಷಗಳಿಲ್ಲ
ಮತ್ತೆ ಕವಲ ಬುದ್ಧಿ ಮಾಂದ್ಯವಿಲ್ಲಾ
ಪತ್ನಿ ಉಳ್ಳವರು ಕೆಲರು ಪತ್ನಿರಹಿತರು ಕೆಲರು
ಅತ್ಯಂತ ಸುಖಗಳನ್ಯ ಪೇಕ್ಷವಿಲ್ಲಾ
ಪತ್ನಿ ಉಳ್ಳವರು ತಮ್ಮ ಸತಿಯರಿಂದಲಿ ಕ್ರೀಡಿ
ನಿತ್ಯ ಮಾಳ್ಪರು ನೀತವಾಗಿ ಇನ್ನು
ಪತ್ನಿ ರಹಿತರಾದವರು ಅತ್ಯಂತ ಸ್ವರೂಪ
ಚಿತ್ತಿನಿಂದೆವೇ ತಜ್ಜನ್ಯ ಸುಖ
ಮತ್ತೆ ಆಗದು ರೇತೋ ಸ್ಖಲನೆ
ಮುಕ್ತರಿಗೆ ಅಭಿವ್ಯಕ್ತ ತಜ್ಯನ್ಯಾನಂದಾ
ಚಿತ್ತಿನೊಳಗೆ ನಿತ್ಯ ಒದಗಿಸುವಾನಂದ ಗೋಪಾಲವಿಠ್ಠಲ
ಉತ್ತಮ ಪುರುಷ ಬಿಂಬನಾಗಿ ಇದ್ದು ॥ 1 ॥

ಮಟ್ಟತಾಳ

ಉದರ ಹಸಿವಿಇಲ್ಲ ಮೆಲುವರು ಫಲಗಳು
ಒದಗೋದು ತಜ್ಯನ್ಯ ಆನಂದವು ವಳಗ
ಮಧುಫಲಾದಿಗಳು ಮೆದುವ ಮನಸಿಲ್ಲಾ
ಮುದದಿ ತಾವಿದ್ದಲ್ಲಿ ಮತ್ತೆ ಸೇರುವವು
ಉದುಕ ಕುಡುವರಿಗೆ ಒಂದರೆಡೆನಸಲ್ಲಾ
ಕ್ಷುಧೆ ಪಿಪಾಸ ನಿದ್ರಿ ದಶ ಇಂದ್ರಿಯಗಳಿಂದ
ಒದಗಿ ಬಾಹುವ ಸುಖಯೆಲ್ಲ ಆನಂದವು
ವಿಧಿಸೆ ಜೀವನಿಗೆ ಸ್ವರೂಪ ದೊಳಗೆ
ಒದಗಿ ಇಪ್ಪುವದೆಲ್ಲ ಎಲ್ಲ ಅಭೇದವಾಗಿ
ವಿಧಿಸೆ ಹೀಗೆ ಒಂದೇ ಜೀವಕ್ಕೆ ಎನಸಲ್ಲಾ
ವಿಧಿ ಆದಿ ತೃಣ ಅಂತ್ಯ ಎಲ್ಲ ಜೀವನಕೆ ಹೀಗೆ
ಮದನನಯ್ಯಾ ಚಲುವ ಗೋಪಾಲವಿಠ್ಠಲ
ಒದಗಿಸುವಾನಂದ ತಾರತಮ್ಯದಿಂದ ॥ 2 ॥

ರೂಪಕತಾಳ

ಚಿತ್ತಿನಿಂದಲಿ ಹೀಗೆ ಭೋಗ ಬಡುವರು ಸತತ
ಮತ್ತೆ ಶಿದ್ಧ ಸತ್ವದಿಂದ ಕ್ರೀಡೆ

ನಿತ್ಯ ತನ್ನಿಂದಲಿ ಭಿನ್ನವಾದದರಿಂದ
ಅರ್ಥಿ ಬಡುವರು ನಾನಾ ರೂಪವ ತೆಗೆದುಕೊಂಡು
ಹಸ್ತಿ ತುರಗ ನಾನಾ ವಸ್ತ್ರ ವಾಹನಗಳು
ಮತ್ತೆ ಆಗುವರು ಮಹಾ ಮಹಾ ವಿಚಿತ್ರ
ವರ್ತ ಮಾನವು ಕೇಳಿ ಇದರೊಳಗಿನ್ನು ವಿ
ಚಿತ್ರ ವಾಗುವದುಂಟು ಜೀವರ ಸ್ಥಿತಿಗಳು
ಉತ್ತಮ ಸಾಂಶ ಜೀವರು ಇಲ್ಲಿ
ಮತ್ತೇಕ ಕಾಲದಿ ತಮ್ಮ ಅಂಶಗಳಿಂದ
ಸತ್ವ ಪ್ರಕೃತಿಗೊಂಡು ಚಿತ್ತ ಬಂದಂತೆ ತಾವು
ಹತ್ತೆಂಟು ಇಪ್ಪತ್ತು ನೂರಾರು ಸಾಸಿರ
ಮತ್ತೆ ನಾನಾರೂಪ ಛತ್ರ ಚಾಮರ ಸರ್ವ
ವಸ್ತ್ರಾಭರಣ ಫಲಪುಷ್ಪ ಗಂಧ ಮಾಲೆ
ಹತ್ತೆಂಟು ಪರಿ ವಾಹನರಾಗಿ ತಮಗಿಂದಲು
ಉತ್ತಮರಾದವರ ಹೊತ್ತಾಡುವರು ಕ್ರೀಡಾ
ಮತ್ತೆ ಈಪರಿ ಹರಿಯ ಸೇವಿಸಿ ಪುನಃ
ಮತ್ತೆ ತಮ್ಮ ಸ್ವರೂಪ ಚಿತ್ತನೊಳು ಕೂಡುವರು
ಅತ್ಯಾಯಾಸವು ಅಲ್ಲ ಎಲ್ಲ ಸುಲಭವು ನೋಡಿ
ತುತ್ತು ಮಾಡಿದಂತೆ ಎಲ್ಲ ನೋಡಿ
ಬತ್ತಿಗಿಂದಲಿ ಜ್ಯೋತಿ ಬತ್ತಿಗ್ಹಚ್ಚಿದಂತೆ
ವ್ಯಕ್ತವೆಲ್ಲವು ಅವರ ಸಾಧನಗಳು
ಇತ್ತ ಕೇಳಿನ್ನು ನಿರಂಶ ಜೀವರ ಗತಿಯು
ಪ್ರತ್ಯೇಕ ಒಂದೊಂದು ಅಂಶದಿಂದ
ಸತ್ವ ಪ್ರಕೃತಿ ಗೊಂಡು ಒಂದೊಂದೆ ರೂಪದಿ
ಮತ್ತೆ ಸೇವಿಸುವರು ಸಿರಿ ಹರಿಯ
ಎತ್ತ ನೋಡಿದರು ಬಲು ರೂಪವಾಗುವ ಶಕ್ತಿ
ಮತ್ತಿಲ್ಲ ನಿರಂಶ ಜೀವರಿಗೆ
ಮುಕ್ತರೊಳಗಿರುತ್ತಿಪ್ಪ ಗೋಪಾಲವಿಠ್ಠಲನ್ನ
ಭಕ್ತರಾನಂದ ಬಲ್ಲವರು ಯಾರೊ ॥ 3 ॥

ಝಂಪಿತಾಳ

ಜ್ಞಾನಭಕ್ತಿ ವಿರಕಿ ಮೂರು ಮುಕುತರಿಗೆ
ನ್ಯೂನವಿಲ್ಲವು ನೋಡು ಒಂದು ಕ್ಷಣವಾದರೂ
ಜ್ಞಾನಕ್ಕೆ ಎಲ್ಲ ಕಾಣಿಸುವದೆ ಫಲವು
ಏನು ಬೇಡಿದ್ದು ಒದಗುವದೆ ಭಕ್ತಿಯ ಫಲ
ಕಾಣದೆ ಆಧಿಕ್ಯ ಇಚ್ಛೈಸದಿಪ್ಪುವದೆ
ತಾನು ವಿರಕ್ತಿ ಎಂಬೊದೆ ಇದುವೇ
ಆನಂದ ಮಯವೆಲ್ಲ ಆಡುವ ವಚನಗಳು
ಯೋನಿ ಯಂಭತ್ತು ನಾಲ್ಕು ಲಕ್ಷ ಜೀವರಗಳು
ಗೇಣು ಮೊಳವು ಇಲ್ಲ ಎಲ್ಲ ಅಣುರೂಪವು
ತಾನು ಕಿರಿದುಯೆಂಬ ಕ್ಲೇಶವಿಲ್ಲಾ
ನಾನಾ ಜೀವರು ಪರಸ್ಪರ ವಿರೋಧಗಳಿಲ್ಲ
ಆನಿ ಸಿಂಹಗೆ ಅಲ್ಲಿ ವೈರವಿಲ್ಲ
ಹೇನು ವೃಶ್ಚಿಕಗಳು ಮೇಲೆ ಓಡಾಡಿದರೂ
ಆನಂದಮಯವೆಲ್ಲ ಅವುಗಳನ್ನು
ಕಾಣರೆಂಬದು ಇಲ್ಲ ಹರಿಯನ್ನು ಸರ್ವರು
ತಾನು ಸಂದಳಿ ಎಂಬ ಚಿಂತೆ ಇಲ್ಲಾ
ಕಾಣಿಸುವ ಹರಿತಾನು ಅವರಯೋಗ್ಯತೆ
ಯಾನುಸಾರವಾಗಿ ತೋರುತಲಿ ಯಿನ್ನು
ಧ್ಯಾನವೆಂಬದು ಇಲ್ಲ ತಮ್ಮ ಸ್ವರೂಪದಿ .
ಧೇನಿಪರು ತಮಗಿಂದ ಉತ್ತಮರ ಅನೇಕವಾಗಿ
ಧ್ಯಾನವ ಮಾಳ್ಪುವರು ಹರಿಯ
ತಾನು ದಿನದಿನ ನೂತನನಾಗಿ ಇನ್ನು
ಆನಂದಮಯ ಮೂರ್ತಿ ಗೋಪಾಲವಿಠ್ಠಲನ್ನ
ಕಾಣುವರು ಪ್ರತಿಕ್ಷಣವು ಕೆಡಕಿಲ್ಲದೆ ॥ 4 ॥

ತ್ರಿವಿಡಿತಾಳ

ಸೃಷ್ಟ್ಯಾದಿ ಅಷ್ಟಕರ್ತೃತ್ವವು ಜೀವನ ಸ್ವರೂಪಕ್ಕೆ
ಘಟ್ಟಿಯಾಗಿಪ್ಪವು ಎಂದೆಂದಿಗು ಬಿಡದೆ
ಪುಟ್ಟಿಸಿ ಕೊಡುವ ಪ್ರತಿಕ್ಷಣಕೆ ಆನಂದ ಹರಿ

ಸ್ಪಷ್ಟದಿ ಅಭಿವ್ಯಕ್ತಿ ಸೃಷ್ಟಿ ನೋಡು
ಬಿಟ್ಟು ಜೀವನಾ ನೆಂದು ಪೊಗದೆ ಇಪ್ಪುವದೆ
ಘಟ್ಯಾಗಿ ಇದೆ ಪಾಲಣಿಯೊ
ನಷ್ಟಮಾಡಿ ಜಗವ ಮುಕ್ತ ಅಮುಕ್ತ ಜೀವ
ಪೊಟ್ಟಿಯೊಳಗೆ ಇಪ್ಪುವದೆ ಲಯವು ನೋಡು
ಅಷ್ಟು ಕಾರ್ಯಕ್ಕೆ ಜೀವರೆ ದುಡಿವದಿನ್ನು
ಘಟ್ಟಿಯಾಗಿದೆ ಹರಿ ನೇಮನ ಕಾಣೊ
ನಷ್ಟವಾಗದೆ ಜೀವ ನಿಜವಾಗಿ ಇಪ್ಪುವದೆ
ಘಟ್ಯಾಗಿ ಜ್ಞಾನ ಹರಿ ಕೊಟ್ಟಿದ್ದನ್ನಿ
ಸ್ಪಷ್ಟಾದಿ ತನಗಿಂದ ಉತ್ತಮರ ಗುಣಗಳು
ಘಟ್ಯಾಗಿ ತಿಳಿಯದೆ ಅಜ್ಞಾನವೊ
ಕಟ್ಟುಮಾಡಿ ಅಧಿಕ ಆನಂದ ಕೊಡದಿಪ್ಪಾ
ವರ್ಕ ಮಾಡಿಪ್ಪುದೆ ಬಂಧ ಕಾಣೊ
ಪುಟ್ಟಲೀಸಾದೆ ಪುನಃ ಸಂಸಾರ ಬಿಡಿಸಿದೆ
ಘಟ್ಟಿಯಾಗಿ ಇದೆ ಮೋಕ್ಷ ಕಾಣೋ
ಅಷ್ಟ ಕರ್ತೃತ್ವವು ಸ್ವರೂಪ ದೊಳಗಾಗಿ
ಘಟ್ಯಾಗಿ ನಿಂತು ಮಾಡಿಸಲು
ಇಷ್ಟರಿಂದ ಜೀವ ಮುಕ್ತರುಗಳಾನಂದಾ
ಸ್ಪಷ್ಟದಿಂದ ಹರಿಯು ಅಭಿವ್ಯಕ್ತಿ ಮಾಳ್ಪಾ
ಇಷ್ಟ ಮೂರುತಿರಂಗ ಗೋಪಾಲವಿಠ್ಠಲನು
ಘಟ್ಟಿಯಾಗಿ ಮುಕ್ತರೊಡನಾಡುವಾ ॥ 5 ॥

ಅಟ್ಟತಾಳ

ವರಣಾಶ್ರಮಗಳುಂಟು ವರಣ ಬಾಹ್ಯರು ಉಂಟು
ಪರಿಪರಿ ಸ್ಥಾವರ ಜೀವರುಗಳು ಉಂಟು
ಇರುವರು ಇದ್ದಲ್ಲೆ ಸ್ಥಾವರ ಜೇವರು
ತಿರುಗಿ ಆಡುವರಲ್ಲ ಇದ್ದಲ್ಲೆ ಆನಂದ
ಹರುಷ ಬಡುವರಿನ್ನು ಸ್ವರೂಪದಿಂದಲೆ
ತರತಮ್ಯದಿಂದ ಜೀವರು ಅಲ್ಲಿ ಉಂಟು
ಪರಿಪರಿ ಶುದ್ಧ ಸತ್ವಗಳನೆ ಕೊಂಡು

ಮರಗಳು ನಾನಾಕುಲತೆಯ ರೂಪವಾಗಿ
ಪರಿವಾರ ಸುರರಿಂದ ಬೆರೆದು ಹರಿಯುತಾನು
ಹೊರಗೆ ಪೊರಟುತಾನು ಸಂಚರಿಸುತ್ತ
ಸಿರಿಇಂದ ಸುರರುಗಳಿಂದಾಡೊ ಪರಿ ಕ್ರೀಡಿಗನುಕೂಲ
ಪರಿಪರಿ ಪುಷ್ಪ ಫಲವು ರಸಗಂಧವು
ಹರಿಯ ಕ್ರೀಡಿಗೆ ಅನುಕೂಲವಾಗಿ ನಾನಾ ಕುಸುಮ
ಸಿರಿ ತುಲಸಿ ಮುಂತಾದ ಮರಗಳು ಆಗಿದ್ದು
ಹರಿಯ ಸೇವಿಸಿ ಪುನಃ ಇರುವರು ಇದ್ದಲ್ಲೆ
ಸಿರಿ ಶಂಖ ಚಕ್ರಧಾರಿಗಳು ಮತ್ತಿವರಲ್ಲ
ಮರಗಳು ನಿರುತ ತತ್ತದಾಕಾರರು
ಎರಡು ವಿಧರು ಉಂಟು ಸಾಂಶ ನಿರಂಶ
ಇರುತಿಪ್ಪರು ಸ್ಥಾವರರು ಜೀವಿಗಳೆನ್ನು
ಹರಿಯೆ ಸೇವಿಸುತಲಿ ತಮ್ಮ ಶಕ್ತ್ಯಾನುಸಾರ
ಪರಿಪರಿ ಆನಂದ ಅನುಭೋಗಿಸುತಲಿ
ಸಿರಿ ಮಹಾರಾಜ ಗೋಪಾಲವಿಠ್ಠಲರೇಯ
ಪರಿಪರಿ ರೂಪನಾಗ್ಯೆವರ ಪಾಲಿಸುವ ‖ 6 ‖

ಆದಿತಾಳ

ಬಿಂಬನಾಗಿ ಪ್ರತಿಬಿಂಬಗಳಂತೆ ರೂಪ
ಎಂಭತ್ತು ನಾಲ್ಕುಲಕ್ಷ ಯೋನಿ ಜೀವರಾಶಿಗೆ
ಬಿಂಬನಾಗಿ ಶ್ರೀಹರಿ ಇಂಬಾಗಿ ತದಾಕಾರ
ಬಿಂಬನಾಗಿ ಒಳಗೆ ಇದ್ದು ಅವರು ಏನು
ಹಂಬಲಿಪರಾನಂದ ಸಂಭ್ರಮ ಒದಗಿಪ್ಪ
ಗಂಭೀರ ಗುಣಪೂರ್ಣ ಭಕ್ತರ ಪೊರವಕು
ಟುಂಬಿ ಎನಿಪಾನಂದಾಂಬುಧಿಯು
ಡಂಬ ಜೀವರಿಗತಿ ಸಂಭ್ರಮವು ಮತ್ತೆ
ಉಂಬೊ ಅಪಾರ ಸುಖ ಜ್ಞಾನ ಮುಕ್ತರಿಗುಂಟು
ಬಿಂಬನಾದ ಶ್ರೀಹರಿಯೇ ತಿಳಿಸಿ ಕೊಡುವ
ಕಾಂಬೋದೆ ಮಾತ್ರ ಭೋಗವೆಂಬನು ಭಾವರಲ್ಲಾ
ತುಂಬಿದಾನಂದಾ ಪೂರ್ಣರಿವರು ನೋಡು

ಹೊಂಬಣ್ಣ ವಸ್ತ್ರ ಕಂಬಳಿ ಕಟ್ಟಿದಾಕ್ಷಣ
ಕಂಬಳಿಯ ಬಣ್ಣವು ಹೊಂಬಣ ಸೇರುವದೆ
ಕುಂಭಿಣಿಯಲ್ಲಿ ವೃತ್ತಿ ಸುಖ ದುಃಖ ಅ
ನುಭವವೆಂಬ ಜ್ಞಾನ ಉಂಟು ಭೋಗವು ಇಲ್ಲ
ಬಿಂಬ ಹರಿಗಿಲ್ಲ ವೆಂಬೋದೇನಾಶ್ಚರ್ಯ
ಸಂಭ್ರಮಪ್ರದ ಮೂರ್ತಿ ಗೋಪಾಲವಿಠ್ಠಲ
ಅಂಬುಜನಾಭನ ಪಾದಕ್ಕೆ ನಮೊನಮೊ ॥ 7 ॥

ಜತೆ

ಚಿತ್ರವಿಚಿತ್ರ ಮುಕ್ತರ ಕ್ರೀಡ್ಯಾವನು ಬಲ್ಲ
ಮುಕ್ತಿದಾಯಕ ಗೋಪಾಲವಿಠ್ಠಲ ಬಲ್ಲ ॥ 8 ॥

ಧ್ರುವತಾಳ **ಸುಳಾದಿ 51** ರಾಗ : ಭೈರವಿ

ಎಲೊಎಲೊ ಸರ್ವಜ್ಞ ಸರ್ವೋತ್ತಮ ಶ್ರೀ ಹರಿ
ಚಲುವ ಸಾಕಾರ ಸಚ್ಚಿದಾನಂದ ಸಗುಣ ರಹಿತ
ಇಳಿಯ ನೆಲ್ಲವ ನುಂಗಿ ಇನಿತು ಈಡಾದೆ ನಿನ್ನ
ಬಲು ಉದರದಿ ಎಲ್ಲರನ್ನು ಅಡಗಿಸಿ
ಲಲನೆ ಲಕುಮಿ ತಾನೆ ಮೂರು ಬಗೆಯು ಅಗಿ
ಚಲುವಾ ನಿನ್ನ ಸೇವಿಪಳಾ ಕಾಲದಿ
ಪ್ರಳಯೋದಕ ಸಿರಿ ವಟದೆಲೆಯು ಭೂರೂಪಳಾಗಿ
ಬೆಳಕು ತೋರದೆ ದುರ್ಗೆ ತಮರೂಪಳಾಗೆ ಇನ್ನು
ಸುಲಭ ರೂಪದಿ ನೀನು ಎಲಿಯು ವಟದಮೇಲೆ
ಮಲಗಿ ಬಾಲಕನಾಗಿ ಮತ್ತೆ ಎಲ್ಲವ ಬಿಟ್ಟು
ಕಿಲಿಕಲಿ ನಗುತಲಿ ಕಾಲ್ಬೆರಳು ಬಾಯೊಳಗಿಟ್ಟು
ನಲಿದು ಚಪ್ಪರಿಸುವೆ ತಿಳಿದು ತಿಳಿದು ಇನ್ನು
ಕಲಕಾಲವು ಭಕ್ತರು ಮಾಡಿದ ಸತ್ಕರ್ಮಂಗಳು
ಹಲವು ಪರಿ ಭಕ್ತಿಯು ಮಾಡಿ ಅರ್ಪಿಸಿದದೆಲ್ಲ
ಕೊಳುತ ಅವರ ರುಚಿಗಳನೆಲ್ಲವು ನೋಡಿ
ನಿಲಿಸುವಿ ಅವರವರ ನಿಜ ಪದವಿಯಲ್ಲಿ ಸ್ವಾಮಿ

ಭಳಿರೆ ಭಕ್ತವತ್ಸಲ ಗೋಪಾಲವಿಠ್ಠಲ
ನಿಲಿಸಿ ಎನ್ನಲಿ ನಿರುತ ಲೀಲೆಯ ತೋರಿಸು ಧೊರಿಯೆ ॥ 1 ॥

ಮಟ್ಟತಾಳ

ಏಕಾಂತದಿ ಇಪ್ಪ ಲೋಕನೆಲ್ಲವ ನಿನ್ನ
ಆ ಕುಕ್ಷಿಯೊಳಿಟ್ಟು ಸಾಕುತ್ತ ಸರ್ವರ
ನೀ ಕರುಣಿಸಿ ಮುಖ್ಯ ಪ್ರಾಣನೊಬ್ಬಗಿನ್ನು
ಬೇಕಾದ ಎಚ್ಚರಿಕೆ ನಿತ್ತು ಸಕಲ ಜೀವ
ಜೋಕೆ ಮಾಡುವಿ ಇನ್ನು ಸೃಜ್ಯ ಅಸೃಜ್ಯರನು
ಸಾಕಲ್ಯ ಗುಣ ಪೂರ್ಣ ಗೋಪಾಲವಿಠ್ಠಲ
ನೀ ಕರುಣಿಸುವೆಮ್ಮ ನಿರ್ವ್ಯಾಜದಿ ನಿರುತ ॥ 2 ॥

ರೂಪಕತಾಳ

ಅನಾದಿ ಜೀವಲಿಂಗ ಬದ್ಧರಗಳ ನುಂಗಿ
ತಾನಿಪ್ಪಪಾರು ಸುಪ್ತಾವಸ್ಥಯೋಪಾದಿ
ಜ್ಞಾನ ಅಜ್ಞಾನವು ಎರಡನ್ನು ಅರಿಯದೆ
ಜ್ಞಾನ ಸ್ವರೂಪವೆ ಆಚ್ಛಾದವಾಗಿರೆ
ಪ್ರಾಣಿಗಳನ್ನು ನಿನ್ನ ದೃಷ್ಟಿ ಇಂದಲಿ
ನೀ ನೆಚ್ಚಿಸಿನ್ನು ಉದ್ಧಾರ ಮಾಡುವೆನೆಂದು
ನಾನು ನನ್ನದು ಎಂಬೊ ಅಹಂಮತಿಯನೆ ಕೊಟ್ಟು
ನಾನಾ ಯೋನಿಗಳಲಿ ತಂದ್ಹಾಕುವೆ
ಮಾನವ ಜನುಮದಿ ಮಹಾಸಾಧನವ ತೋರಿ
ಪ್ರಾಣಿಯ ನಿನ್ನ ತಿಳಿವಂತೆ ಮಾಳ್ಪೆ
ಜಾಣ ಚನ್ನಿಗರಾಯ ಗೋಪಾಲವಿಠ್ಠಲ
ಕಾಣಿಸದನಕ ಕಾಣರು ನಿನ್ನ ॥ 3 ॥

ಝಂಪಿತಾಳ

ಅನಂತ ಜನಮದಲ್ಲಿ ಅನಂತ ಕಲ್ಪದಲ್ಲಿ
ಇನ್ನು ಮಾಡಿದೆನಯ್ಯಾ ನಿನ್ನ ಪ್ರೇರಣೆಯಿಂದ
ಕಿನ್ನು ಮಾಡುವನಾಗಿ ಮತ್ತು ಇಪ್ಪುವೆನಯ್ಯಾ
ಅನಂತ ಪಾಪಕ್ಕೆ ಅನಂತ ನಿನ್ನ ನಾಮಾ
ಎನ್ನ ಬಳಿಯಲ್ಲಿ ಈಗ ವಾಸವಾಗೆವೊ ಅಯ್ಯಾ

ಎನ್ನ ದೊಷಗಳೆಂಬೊ ಇನ್ನು ಅರಿಸಿ ಅರಿಸಿ
ನಿನ್ನ ದೊಂದು ಸಾಕು ನಾಮ ಅದರನು ಕೆಡಿಸು
ಇನ್ನು ಅವಕೆ ಅಂಜಿ ಈ ಶಕುತಿ ಎನಗಿರಲಿ
ಘನ್ನ ದಯಾನಿಧೆ ಗೋಪಾಲವಿಠ್ಠಲ
ನಿನ್ನ ಬಿಡೆ ನಿನ್ನ ಬಿಡೆ ನಿತ್ಯ ತೃಪ್ತ ॥ 4 ॥

ತ್ರಿವಿಡಿತಾಳ

ಒಂದು ಶ್ರವಣದಿಂದ ಅವದಾಗುವದೆನಗೆ
ಛಂದದಿ ಪಾಲಿಸು ಆ ಶ್ರವಣವ
ಒಂದೆ ಸ್ನಾನದಿಂದ ಅವದು ಧರಿಪದು
ಛಂದದಿ ಮಾಡಿಸೊ ಅದೆ ಸ್ನಾನವ
ಒಂದೇ ಮಂತ್ರಲಿಂದ ಆವ ಸಿದ್ಧಿಯೊ ಎನಗೆ
ಛಂದದಿಂದಲಿ ಪಾಲಿಸೊ ಅದೆ ಮಂತ್ರವೊ
ಒಂದೇ ಗುರುವಿನಿಂದ ಆವ ಉದ್ಧಾರವೋ
ತಂದು ತೋರಿಸು ಮತ್ತೆ ಅದೆ ಗುರುವಿನ
ಒಂದೆ ನಿನ್ನ ಮೂರುತಿ ಆವದೆನಗೆ ತಿಳಿಯೆ
ತಂದು ತೋರುಸು ಎನ್ನ ಅನುಭವಕ್ಕೆ
ಒಂದೆ ಅರ್ಚನೆ ಇಂದ ಆವದೊ ನಿನ್ನ ಪೂಜೆ
ಛಂದದಿ ತೋರಿಸೊ ಅದೆ ಬಗಿಯ
ಒಂದೇ ಪರಿಯು ಮನಕೆ ಆವದು ನಿಲ್ಲೋದು
ಛಂದದಿ ಪಾಲಿಸು ಅದೆ ಜ್ಞಾನವು
ಸಂದೇಹದ ಕರ್ಮ ಸಾಸಿರ ಕೊಟ್ಟರು
ಮಂದ ಬುದ್ಧಿಯವ ಕಡೆ ಬೀಳೆನೋ
ಒಂದು ಕರ್ಮವು ಮಾಡೆ ಮತ್ತಾನಂತ ಕರ್ಮ
ಬಂದು ಒದಗುತಿವೆ ಸಂದೇಹ ಗೊಳಿಸುತ
ಬಂಧಕವೆ ಮತ್ತೆ ಬಲಿಕೆ ಮಾಡುತಲಿವೆ
ಎಂದಿಗೂ ಕಡೆ ಹಾಯುವದು ಅರಿಯದೆ
ಮಂದರಧರ ನಮ್ಮ ಗೋಪಾಲವಿಠ್ಠಲ
ತಂದೆ ಸಲಹೂ ನಿನ್ನ ಸಂದರುಶನ ಕೊಟ್ಟು ॥ 5 ॥

ಅಟ್ಟತಾಳ

ಎಲ್ಲಿತನಕ ವಿಷಯ ವೆಗ್ಗಳಿಸುವಿ ಇನ್ನು
ಅಲ್ಲಿ ತನಕ ಮನ ನಿಲ್ಲದು ನಿನ್ನಲ್ಲಿ
ಜ್ವಲಿಸುತ ಇಪ್ಪ ಬಲ್ಲಿದಗ್ನಿಯ ಮೇಲೆ
ಹುಲ್ಲು ಹಾಕುತ ಬರೆ ನಿಲ್ಲುವದೆ ತಾಪ
ಎಲ್ಲ ಕಾಲವು ವಿಷಯದಲ್ಲೆ ಮನಸು ಹೋಗಿ
ಸಲ್ಲಿ ಸಲ್ಲಿಸಿ ಸಾಕು ಎಂಬುವಂಥ
ಅಲಂ ಬುದ್ಧಿಯು ಇನ್ನು ಯಳ್ಳಿನಿತು ಇಲ್ಲಾ
ಕೊಲ್ಲುತದೆ ಕೊಂಡು ವೈದು ವಿಷಯಂಗಳಿ
ಗೆಲ್ಲಿ ತನಕ ಹೀಗೆ ಎಳೆದರೆ ನಾನಿನ್ನ
ಗೆಲ್ಲುವ ತೆರನೆಂತು ಬಲ್ಲಿದ ಎಲೆ ದೇವ
ನಿಲ್ಲಿಸಿ ಈ ಪಾಪ ಸಂಚಿತ ಕೆಡಿಸಿನ್ನು
ಮೆಲ್ಲನೆ ಬಾಹೊ ಆಗಾಮಿಯಾ ವೊತ್ತಿನ್ನು
ಸಲ್ಲಿಸು ಪ್ರಾರಬ್ಧ ಇಲ್ಲಿಗೆ ಎಂತಂದು
ಎಲ್ಲ ಮನಕೆ ಅದು ಆರವಿಸಿ ಚೆನ್ನಾಗಿ
ನಿಲ್ಲದೆ ನೀ ಸ್ಮರಣೆಗೆ ಬರುತಲಿದ್ದು
ನಲ್ಲಾ ನೀ ಕಾಯಬೇಕಲ್ಲದೆ ಎನ್ನನು
ಮಲ್ಲ ಮರ್ದನ ಗೋಪಾಲವಿಠ್ಠಲ
ಕೊಲ್ಲೊ ಕಾಯೊ ಬಿಡೊ ನಿನ್ನ ನಂಬಿದೆನೊ ॥ 6 ॥

ಆದಿತಾಳ

ವಿಷಯ ಬಂಧುಗಳೆನಗೆ ವಿಷಯರು ಆದರೆ
ವಶವಾಗುವಿ ಎಂತೊ ಮುಖ್ಯ ವಿಷಯೆ ನೀನು
ಕೆಸರೊಳಗೆ ಬಿದ್ದು ಕೆಸರಿಂದ ತೊಳೆದರೆ
ಹಸನಾಗೊದೆಂತೊ ಅವು ಕುಶಲ ಮೂರ್ತಿ
ಕಸುಗಾಯಿ ಎಂಬುವಂದ ಬಿಸಿಲಿಲಿ ಬಡಿಸಿಕೊಂಡು
ರಸ ಪಕ್ವವಾಗಿನ್ನು ದ್ರವಿಸುತ ಶ್ರೀ ಹರಿಯೆ
ವಿಷಯ ವಾಗೆಲೋ ಮುಖ್ಯ ನಿನಗೆ ನಿರುತ
ವಸುದೇವಸುತ ನಮ್ಮ ಗೋಪಾಲವಿಠ್ಠಲ
ಅಸಮ ದೈವವೆ ನಿನಗೆ ನಮೊ ನಮೊ ಎಂಬೆ ॥ 7 ॥

ಜತೆ

ಎಲ್ಲಿ ತನಕ ಮನಸು ಎರಗು ತಿಪ್ಪುದು ಎನಗೆ
ಎಲ್ಲಲ್ಲಿ ವಿಷಯನಾಗೊ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 52** ರಾಗ : ನಾಟಿ

ಭಾವಾಷ್ಟ ಪುಷ್ಪಂಗಳು ದೇವಗೆ ಅರ್ಪಿಸುವ
ಭಾವನೆಯನು ಕೇಳಿ ಭಕ್ತ ಜನರು
ಜೀವರಿಂದ ಈ ಧರ್ಮ ಎಂದಿಗೆ ಆದದಲ್ಲ
ದೇವನಲ್ಲೆವೆ ಇಂಥ ಗುಣಗಳುಂಟು
ಭಾವಾಷ್ಟ ಪುಷ್ಪಗುಣವ ದೇವನಲ್ಲಿಪ್ಪವೆಂದು
ಜೀವರೆಂಬುವರು ಕರ್ಮ ಬದ್ಧರು ಇನ್ನು
ದೇವನು ಕರ್ಮ ತ್ರಿಗುಣಾದಿ ರಹಿತ
ಜೀವರಿಂದಲಿ ಅತ್ಯಂತ ಭೇದ ಸಾಕಾರ ಹರಿ
ಯಾವತ್ತರಾದಿ ವ್ಯಾಪ್ತ ಎಣಿ ಇಲ್ಲದ ಮೂರ್ತಿ
ಪಾವನಾಂಗ ಪಾಪ ನಾಶ ನಿತ್ಯ ತೃಪ್ತಾ
ಜೀವದ ಜಡದಿ ಎಂದಿಗೆ ಅಗಲದೆ ಇಪ್ಪ
ಈ ವಿಧ ಶಕುತಿಯ ಈಶ ಗೋಪಾಲವಿಠ್ಠಲ
ದೇವರಿ ಗುಂಟೆಂದು ಅರಿವ ಜೀವನೆ ಬಲುಧನ್ಯ ॥ 1 ॥

ಮಟ್ಟತಾಳ

ಬೊಮ್ಮಾಂಡವ ಸೃಜಿಸಿ ಬೊಮ್ಮನೊಳಗೆ ನಿಂತು
ಸುಮ್ಮನಸರನೆಲ್ಲ ನಿರ್ಮಿಸಿ ಪಾಲಿಸಿ
ಬೊಮ್ಮಾಂಡ ಅಳಿಸಿ ಬೊಮ್ಮನ ಕೊಲ್ಲುವ
ಬೊಹ್ಮತಿ ದೋಷವು ಎಮ್ಮಯ್ಯಗಿಲ್ಲ
ಹಮ್ಮಿನಕಂಸಡಿಬಿಕರ್ಯಲ್ಲಾರಾ
ನಿರ್ಮಳದಿ ಕೊಂದ ನಿರ್ಮತ್ಸರದಿಂದ
ಧರ್ಮದಿ ಈ ಪುಷ್ಪ ನಮ್ಮಯ್ಯಗೆಂದು
ಘಮ್ಮನೆ ಅರ್ಪಿಸು ಘನ ಭಕುತಿಯಲ್ಲಿ
ರಮ್ಮೆರಮಣನೆ ಗೋಪಾಲವಿಠ್ಠಲ ಪರ
ಬೊಮ್ಮ ಒಲಿವ ಹೀಗೆ ಧರ್ಮ ಅರಿದವರಿಗೆ ॥ 2 ॥

ರೂಪಕತಾಳ

ಎರಡೆಂಟು ಸಾಸಿರ ಅರಸಿಯರ ಕೂಡ
ಪರಿ ಪರಿ ಕ್ರೀಡಿಯು ಮಾಡಿ ನೋಡಿ ಚಲ್ವ
ತರುಳ ತನದಿ ಹನ್ನೆರಡು ಸಾಸಿರ ಮಂದಿ
ತರುಳರ ಪಡೆದು ತಾ ಪರಿಕ್ಷಿತನಿಗೆ ಇನ್ನು
ಪರಿಣಾಮ ಮಾಡಿದವರ ಬ್ರಹ್ಮಚಾರಿ ಎಂದು
ಸರಿ ಹೋಗುವದೆ ಇಂಥ ಚರಿಯ ಮನುಜರಿಂದ
ಹರಿಗೆ ಇಂದ್ರಿಯ ನಿಗ್ರಹ ಸ್ಥಿರ ಪುಷ್ಟವೆಂತೆಂದು
ಅರಿದು ಅರ್ಪಿಸುವ ಜೀವರಿಗೆ ಲೇಪಿಸದು
ಪರಮದಯಾಳು ಗೋಪಾಲವಿಠ್ಠಲ ತನ್ನ
ಅರಿದಂತೆ ಫಲವೀವಾ ಶರಣರ ಜನಕೆ ॥ 3 ॥

ಝುಂಪಿತಾಳ

ಭೂತದಯಾ ಪುಷ್ಟ ಭೂತೇಶಗಲ್ಲದೆ
ಭೂತಾಧಾರದಿ ಇಪ್ಪ ಭೂತರಿಗೆ ಥರವೆ
ನೀತಿಲಿ ತ್ರಿವಿಧ ಜೀವರಿಗೆ ತಾತಪ್ಪದೆ
ಪ್ರೀತಿಲಿ ಉಣಿಸಿ ಅಜಾತನಾಗಿ ಇಪ್ಪ
ಮಾತು ಮಾತಿಗೆ ಅನಂತ ಕರ್ಮಂಗಳು
ಜ್ಞಾತ ವಿಲ್ಲದೆ ಮಾಳ್ಪ ಜೀವರಿಗೆ ಇದು ಸಲ್ಲ
ಭೂತರುಗಳ ಗತಿ ತಾ ತಿಳಿದು ತ್ರಿವಿಧರಿಗೆ
ನೋತ ಫಲವಿತ್ತು ಸಮನಾಗಿ ಇಪ್ಪುವನೆಂದು
ಈ ತೆರದಿ ತಿಳಿಸು ನೀ ಭೂತ ದಯಾಪುಷ್ಟ
ಪ್ರೀತಿಯಲಿ ಅರ್ಪಿಸನ್ಯಥಾ ಚಿಂತಿಸದೆ
ದಾತ ನಮ್ಮ ಸ್ವಾಮಿ ಗೋಪಾಲವಿಠ್ಠಲ
ಸೋತೆನೆಂದು ಬಳಿಕ ಸಲಹದೆ ಬಿಡನು ॥ 4 ॥

ತ್ರಿವಿಡಿತಾಳ

ಸರ್ವದಾ ಕ್ಷಮೆ ಪುಷ್ಟ ಸರ್ವೇಶಗಲ್ಲದೆ
ಗರ್ವ ತತ್ವದಿ ಬದ್ಧ ಜೀವರಿಗೆ ಸಲ್ಲ
ಶರ್ವ ನಲ್ಲ್ಯಾದರು ಸಹಿಸಲ್ಲ ಈ ಕರ್ಮ

ಪೂರ್ವದ ಅಖ್ಯಾನ ಇದಕುಂಟು
ಸರ್ವ ಉತ್ತಮದೇವನಾರೆಂದು ಭೃಗುಮುನಿ
ಸರ್ವ ಪೂರ್ಣ ಹರಿಯ ಎದಿಯವದ್ದ
ಪರ್ವತದೋಪಾದೊ ಇದ್ದ ಕಾರಣವಾಗಿ
ಸರ್ವೋತ್ತಮ ನೆಂದು ತುತಿಸಿ ನಲಿದಾ
ನಿರ್ವ್ಯಾಜದಿಂದಲಿ ನಿತ್ಯ ಕೋಪದಿ ಖೇದ
ಗರ್ವ ತತ್ವದಿ ಬದ್ಧ ಜನರಿಗೆ ಕೊಡದು
ಸರ್ವಾನಂದ ಪೂರ್ಣ ಗೋಪಾಲವಿಠ್ಠಲ
ಸರ್ವೇಶಗೀ ಪುಷ್ಪ ಅರಿವ ಜೀವನೆ ಧನ್ಯ ॥ 5 ॥

ಅಟ್ಟತಾಳ

ದಮ ಜ್ಞಾನ ಧ್ಯಾನವು ಸಮಿಚೀನ ಪುಷ್ಪವು
ರಮೆ ಈಶಗಲ್ಲದೆ ಶ್ರಮಿಸೊ ಜೀವರಿಗಿಲ್ಲ
ವಮನ ಕಂಡರೆ ಅಂಜೊ ಭ್ರಮಣ ಜೀವರಿಗೆ
ದಮ ಎಂಬ ಪುಷ್ಪವು ಎಂತು ದೊರೆಯುವದಯ್ಯಾ
ಮಮತಿ ಜಡದಿ ನಿಮಿಷ ಬಿಡದೆ ಇದ್ದ
ಹಮ್ಮತಿ ಜೀವನಿಗೆ ಜ್ಞಾನ ಪುಷ್ಪವು ಎಂತೋ
ಕ್ಷಮಿಸಿ ನೋಡಲು ಧ್ಯಾನ ಪುಷ್ಪವೆಂಬೋದು ಅಂತು
ನಿಮಿತ್ತ ಮಾತ್ರವು ಇದು ನೀಚ ಜೀವರಿಗಿಲ್ಲ
ಸಮ್ಮತಿಸಿ ನೋಡಿವು ಸರ್ವೋತ್ತಮ ನಲ್ಲೆವೆ
ನಿಮಿಷ ಬಿಡದೆ ಇಪ್ಪವೆಂದು ಚಿಂತನೆ ಮಾಡೆ
ದಮಜ್ಞಾನ ಧ್ಯಾನವುಳ್ಳವನಾಗುವನಾ ಜೀವ
ಸುಮನಸ ರೊಡಿಯ ಗೋಪಾಲವಿಠ್ಠಲನು
ನಮಿಸಿ ನೆಚ್ಚಿದಂಗೆನರಿಸುವ ನಿದರಾ ॥ 6 ॥

ಆದಿತಾಳ

ಸತ್ಯವೆಂಬುವ ಪುಷ್ಪ ಸರ್ವೇಶಗೆ ಇದು
ನಿತ್ಯ ಅನೃತ ನುಡಿವ ಜೀವಗೆ ಸಲ್ಲ
ಕತ್ತಲೆ ಒಳಗಿದ್ದ ಮತ್ತೆ ಉದಯವೆಂಬೊ
ಮಿಥ್ಯ ವಚನವಾಡಿ ಸುತ್ತುವ ಸಂಸಾರ

ಮತ್ತೆ ಇವಗೀ ಪುಷ್ಪ ಎಂತು ದೊರಿವದಯ್ಯ
ಸತ್ಯ ಸಂಕಲ್ಪ ನಮ್ಮ ಗೋಪಾಲವಿಟ್ಠಲಗೆ
ಮತ್ತೆ ನೀ ಉಂಟೆಂದು ಮನಮುಟ್ಟಿ ತಿಳಿಯೋ ॥ 7 ॥

ಜತೆ

ಭೇದ ವಿಲ್ಲದಿ ಪುಷ್ಪ ಇಪ್ಪವು ಹರಿಯಲ್ಲಿ
ಸಾಧಿಸರ್ಚಿಸು ಗೋಪಾಲವಿಠ್ಠಲ ಒಲಿವಾ ॥ 8 ॥

ಧ್ರುವತಾಳ

## ಸುಳಾದಿ 53

ಎಲಲ್ಲಾ ದೋಷಂಗಳೆ ನಾ ನಿರ್ದೋಷಾನಾಶ್ರಿತನು
ಎಲೆಲೆ ದುರಿತವೆ ನಾನು ಬಲ ಪೂರ್ಣಾಶ್ರಿತನು
ಎಲೆಲೆ ಸುಖವೆ ನಾನು ಪೂರ್ಣಾನಂದನ ಆಳು
ಎಲೆಲ್ಲಾ ಅಜ್ಞಾನವೆ ನಾ ಜ್ಞಾನ ಪೂರ್ಣನಾಶ್ರಿತನು
ಎಲೆಲೆ ಕಾಮವೆ ನಾನು ಪೂರ್ಣ ಕಾಮನ ಆಳು
ಎಲೆಲ್ಲಾ ಕ್ರೋಧವೆ ನಾನು ಅಚ್ಚ ಕರುಣಾಕರನಾಳು
ಎಲೆಲಾ ಮೋಹವೆ ನಾನು ವ್ಯಾಪ್ತ ವಿಷ್ಣುವಿನ ಆಳು
ಎಲೆಲಾ ಲೋಭವೆ ನಾನು ಸಾರ್ವಭೌಮನ ಆಳು
ಎಲೆಲಾ ಮದವೆ ನಾನು ನಿರಹಂಕಾರಿಯಾಶ್ರಿತನು
ಎಲೆಲಾ ಮತ್ಸರವೆ ನಾನು ಕುಟಿಲರಹಿತನ ಆಳು
ಎಲೆಲಾ ನಿದ್ರಿಯೆ ನಾನು ಅನಿದ್ರಿಯ ನಾಳು
ಎಲೆಲಾ ಹಸಿವಿ ತೃಷಿಗಳೆ ನಾ ನಿತ್ಯತೃಪ್ತನ ಆಳು
ಸುಳಿಯ ಬೇಡಿನ್ನು ನೀವು ಸುತ್ತಲಾದರು ಎನ್ನ
ಬಲವಂತನಾದ ಹರಿಯ ಬಿಂಬಾಶ್ರಿತ
ಸ್ಥಳವಿಲ್ಲಾ ನಿಮಗೆ ನಿಲ್ಲಾ ಎನ್ನಲ್ಲಿ ನೋಡಲು
ತೊಲಗಿರಿ ತೊಲಗಿತ್ತೆ ಸುಳಿಯದಲೆ
ಮಲತ ಮಲ್ಲರ ಗಂಡ ಗೋಪಾಲವಿಠ್ಠಲ
ಹಲವು ಪರಿಯಲಿ ನಮ್ಮ ಹಲಹೊ ದೇವಾ ॥ 1 ॥

ಮಟ್ಟತಾಳ

ಗುಣಪೂರ್ಣ ಸುಖಪೂರ್ಣ ಅಣುಮಹಾ ದೊಳುವ್ಯಾಪ್ತ
ಕ್ಷಣಲವ ತೃಣಕಾಲ ಕೊರತಿ ಯಿಲ್ಲವು ಕಾಣೆ

ಗುಣ ಬದ್ಧನು ಅಲ್ಲ ಕೇವಲ ನಿರ್ಗುಣಾ
ಅಣುಮಾತುರವನ್ನ ಭಿನ್ನ ವಿಷಯ ರಹಿತಾ
ಅನ್ಯೋನ್ಯವಾಗೆ ಜೀವ ಜಡದಲಿದ್ದು
ಇನ್ನು ಕ್ರಿಡೆಯು ಮಾಳ್ಪ ಚಿನ್ನುಮಯನಾಗಿ
ತನ್ನ ಆನಂದಕ್ಕೆ ಲೇಶ ಕೊರಿತೆ ಇಲ್ಲಾ
ಇನ್ನು ಜೀವರಿಗಾಗಿ ಸಕಲ ಕ್ರೀಡಿಯು ಮಾಳ್ಪಾ
ಪುಣ್ಯ ಪಾಪಗಳಿಂದ ವಿಲಕ್ಷಣನಯ್ಯಾ
ಇನ್ನೇನೋರ್ನಿಸುವೆ ಇವನ ಮಹಾಮಹಿಮೆ
ಅನಂತ ಗುಣಪೂರ್ಣ ಲಕುಮುಗಾಗೋಚರ
ಎನ್ನಾಳುವ ಸ್ವಾಮಿ ಗೋಪಾಲವಿಠ್ಠಲ
ತನ್ನ ನಂಬಿದವರ ತನ್ನ ಸದೃಶರ ಮಾಳ್ಪಾ ॥ 2 ॥

ರೂಪಕತಾಳ

ನಿತ್ಯತ್ವ ನಿರ್ದೋಷ ನಿರ್ಗುಣ ಶ್ರೇಯಸ್ಸು
ಚಿತ್ತಾ ಭೃತ್ಯ ಭಾವವನೆ ಆನಂದ ಬಲ
ಸತ್ವ ಜೀವರಲ್ಲಿ ಬಿಂಬ ಸದೃಶ ಉಂಟು
ನಿತ್ಯ ಸಂಸಾರಿಗೆ ನಿತ್ಯತ್ವದಲ್ಲಿ ಮಾತ್ರ
ಮತ್ತಾವ ತಾಮಸ ಜೀವರ್ಗೆ ಸಾದೃಶ್ಯ
ನಿತ್ಯತ್ವ ನಿರ್ಗುಣ ಎರಡು ವಿಧ ಉಂಟು
ಸತ್ಯಜ್ಞಾನಿಗೆ ಸುಖ ಮಿಥ್ಯಾಜ್ಞಾನಿಗೆ ದುಃಖ
ವ್ಯಕ್ತಿ ಅಹುದು ಕೇವಲ ನಿರ್ಗುಣದಾಗಾ
ಸತ್ಯ ಸಂಕಲ್ಪ ಗೋಪಾಲವಿಠ್ಠಲನ್ನ
ಭಕ್ತರಿಗೆ ಭಯವಿಲ್ಲ ಬಲು ಆನಂದ ॥ 3 ॥

ಝಂಪೆತಾಳ

ದ್ವೇಷ ಎಂತೆಂದು ಉಪಾಸನೆಯ ಮಾಳ್ಪರಿಗೆ
ದ್ವೇಷಿಯಾಗಿ ದುಃಖ ಉಣಿಸುವನು
ದ್ವೇಷ ರಹಿತನೆಂದುಪಾಸನೆಯ ಮಾಳ್ಪರಿಗೆ
ಮೀಸಲಾನಂದ ಸುಖ ಮಿಗಿಲುಣಿಸುವಾ
ದೋಷವಾರದು ನೋಡು ಚೇತನ ಯೋಗ್ಯತೆ

ನಾಶಮಾಡದದರ ಬೀಜ ಮೂಲಾ
ಸಾಸಿವಿಯ ಬಿತ್ತಿನ್ನು ಸಾಸಿವಿಯೆ ಬೆಳೆವ ಕಾ
ರ್ಪಾಸು ಬೆಳೆದರೆ ಇದು ದೋಷವೆಲ್ಲೆ
ವೈಷಮ್ಯ ನೈರ್ಘಣ್ಯ ಈಷನ್ಮಾತ್ರ
ದೋಷ ಚಿಂತನೆ ಜಗದೀಶಗಿಲ್ಲಾ
ವಾಸುದೇವ ಗೋಪಾಲವಿಠ್ಠಲ ನೆಂತು
ವಾಸನೆಯ ಮಾಳ್ಪರಿಗಂತಂತೆ ಫಲವೀವ ॥ 4 ॥

ತ್ರಿವಿಡಿತಾಳ

ಹರಿ ಎಂಬೊವನಧಿಯು ಕರುಣವೆಂಬೊ ಜಲಕ್ಕೆ
ಎರಡು ಧಡವು ಭಕುತಿ ವಿರಕುತಿಯನು ಮಾಡಿ
ವರಜ್ಞಾನವೆಂಬ ನಾವೆಯನು ಆಶ್ರಯಿಸಿ
ಪರಿ ಪರಿ ಗುಣವೆಂಬ ರತುನವ ಹುಡುಕುತ
ನಿರುತ ಅಲ್ಲಿಹ ದಿವ್ಯ ನೆರೆ ಕಥಾಮೃತ ಉಣುತ
ಮೊರೆ ಹೊಕ್ಕೆನ್ನಿರೊ ಕೃಷ್ಣನೆಂಬೊ ಶರಧಿ ಬಿದ್ದು
ಬರಬೇಡಿರೆನ್ನ ಗೂಡಿವೆ ದುರಿತ ಕಾಮಕ್ರೋಧಗಳೆ
ಹರಿದು ಹೋಗುವಿರಿತ್ತ ಬರಲು ಯೋಗ್ಯರಲ್ಲಾ
ಶಿರವ ಚೆಂಡಾಡುವ ಎಮ್ಮರಸ ಕಂಡರೆ ನಿಮ್ಮ
ಸರಿಹೋದ ಸ್ಥಳಗಳಲಿ ಇರಹೋಗಿ ಇರಹೋಗಿ
ಶಿರಿ ಮಹಾರಾಜ ಗೋಪಾಲವಿಠ್ಠಲರೆಯನ
ಪರಿಚಾರಕರಾ ಪರಿಚಾರಕರಾಳು ನಾ ॥ 5 ॥

ಅಟ್ಟತಾಳ

ಕೋಪಂಗಳೆನ್ನ ಸಂತಾಪ ಪಡಿಸಿದಿರಿ
ಶ್ರೀಪತಿ ಗ್ಹೇಳಿನಾ ಕೊಲಿಯ ಕೊಲ್ಲಿಸುವೆನು
ಕೋಪಂಗಳ್ಯಾ ಪುಣ್ಯ ಲೋಪ ಮಾಡಿಸದಿರಿ
ವ್ಯಾಪಕನಾದ ವಿಷ್ಣುವಿಘೋಗಿ ಪೇಳುವೆ
ರೂಪಂಗಳೆ ಅನ್ಯರೂಪ ನೋಡಲಿ ಬೇಡಿ
ಆ ಪುರುಷ ಹೃಷೀಕಪಗೆ ಪೇಳುವೆ
ತಾಪಸರೊಡಿಯ ಗೋಪಾಲವಿಠ್ಠಲ ಎನ್ನ
ಕಾಪಾಡುವನು ನಿಮ್ಮ ವ್ಯಾಪಾರ ನಿಲ್ಲಿಸಿ ॥ 6 ॥

ಆದಿತಾಳ

ಭಕುತ ಸಾರ್ಥ ಭಯನಿವಾರ್ಣಾ
ಮುಕುತಿ ದಾತಾ ಮುಕುಂದಾ ನಂದಾ
ಶಕುತಾ ವ್ಯಕುತಾ ಸಾರ ಭೋಕ್ತಾ
ಸುಖಸಮುದ್ರ ಸುರನದಿ ಜನಕಾ
ಅಕುಟಿಲ ಅಷ್ಟಮುದ ಸಂಪನ್ನ
ಸ್ವಕುಲ ನಾಶಕ ಸ್ವಾರ್ಥರಹಿತಾ
ಸುಖಮಯ ಕಾಯಾ ಸುಲಭ ದೇವಾ
ಸಾಕಾರ ರೂಪ ಸರ್ವಜ್ಞನೆ
ಪ್ರಾಕೃತದೂರಾ ಪರಮ ಪುರುಷ
ನಾಕೇಶವಂದಿತ ಗೋಪಾಲವಿಠ್ಠಲ
ಸಾಕುವ ಸರ್ವದಾ ಸನ್ನಿಧಿಯಲಿದ್ದು ॥ 7 ॥

ಜತೆ

ಹರಿಯು ಸರ್ವೋತ್ತಮನೆಂದು ನಿಶ್ಚಯದಿಪ್ಪ
ನರಗೆ ನಿರಯವಿಲ್ಲಗೋಪಾಲವಿಠ್ಠಲ ಬಲ್ಲಾ ॥ 8 ॥

ಧ್ರುವತಾಳ **ಸುಳಾದಿ 54** ರಾಗ : ಭೈರವಿ

ಅಪಕಾರ ಉಪಕಾರ ಹರಿಯೆ ನಿನ್ನಿಂದಲೇವೆ
ರಿಪು ಮಿತ್ರ ಗಳ್ವ್ಯಾಪಾರ ಹರಿಯೆ ನಿನ್ನದು ನೋಡಾ
ಕಪಟ ನಿಷ್ಕಪಟತ್ವ ನನ್ನಿಂದ ಲಾಗುವದು
ಶಪಥ ಅಶಪಥಗಳು ನಿನ್ನಾಧೀನವು ಸ್ವಾಮಿ
ಕ್ಲಿಪುತ ಅಕ್ಲಿಪುತಗಳು ನಿನ್ನಾಧೀನವು ನೋಡಾ
ಅಪರಾಧ ಸುಪರಾಧ ನಿನ್ನಾಧೀನವು ನೋಡಾ
ಅಪವರ್ಗ ಸುಪವರ್ಗ ನಿನ್ನಾಧೀನ
ಸುಪುತದ್ವಿಲೋಕ ಸಪುತ ದ್ವೀಪ ನಿನ್ನಾಧೀನವು
ಸುಪುತಾವರ್ಣವು ಉಳ್ಳ ಬೊಮ್ಮಾಂಡ ನಿನ್ನಾಧೀನ

ಸ್ವಪನ ಜಾಗ್ರ ಸುಷೆಪ್ತಿ ವ್ಯಾಪಾರ ನಿನ್ನಾಧೀನ
ಸಫಲ ನಿಷ್ಫಲ ಸರ್ವ ಸಾಧನ ನಿನ್ನಾಧೀನ
ಉಪದೇಶಾನುಪದೇಶಗಳು ನಿನ್ನಾಧೀನ
ಗುಪುತ ವ್ಯಾಪುತ ಮೂರ್ತಿ ಗೋಪಾಲವಿಠ್ಠಲ
ತೃಪುತ ನಿತ್ಯ ನಿರ್ಲಿಪ್ತ ನಿರ್ದೋಷ ನಿಜಾನಂದ ॥ 1 ॥

ಮಟ್ಟತಾಳ

ಲೋಕಾಲೋಕಾದಿಗಳಲ್ಲಿ ವ್ಯಾಪ್ತ
ಲೋಕಾಧಿ ಪತಿಗಳಿಗೆ ಒಡಿಯಾ
ಸಾಕಾರನಾಗಿ ಸಾಕುವನು
ಆಕಾರ ಅಂತ್ಯ ಕಂಡವರಿಲ್ಲ
ಜೋಕೆ ಮಾಡುವ ಗತಿಗಳ ಅರಿದು
ನಾಕಾಣೆ ಇನ್ನೊಂದೊಸ್ತ ಸಾದ್ರಿಸ್ಯವೋ
ಶ್ರೀ ಕರುಣಾಕರ ಗೋಪಾಲವಿಠ್ಠಲ
ಏಕ ನಲ್ಲದೆ ಅನ್ಯರ ನಾಕಾಣೆ ಪ್ರಭುವಿನ್ನ ॥ 2 ॥

ರೂಪಕತಾಳ

ಹರಿ ಅರಿವಂತೆ ಪರಿಚಾರಕ ರಾರಿವನಾವ
ಹರಿ ಸೇವೆ ಕೊಡಂತೂಳಿಗವ ಕೊಂಬನಾವ
ಹರಿ ತಿಳಿದಂತೆ ತಿಳಿದು ಸಾಕುವನಾವ
ಹರಿ ನೋಡಿದಂತೆ ಪರಿವಾರ ನೋಡುವನಾವ
ಹರಿ ತಿಳಿದಂತೆ ಪರಿಚಾರಿಕರಾಳುವ ನಾವ
ಹರಿ ಸರ್ವಭೌಮ ಸುರಚಕ್ರವರ್ತಿ ನೋಡು
ಸಿರಿ ರಾಜಾಧಿರಾಜ ಧೋರೆಮಹಾರಾಜ
ಸಿರಿ ಅಜಭವವಂದ್ಯಾ ಗೋಪಾಲ ವಿಠ್ಠಲ
ಧೊರೆ ಒಬ್ಬನಲ್ಲದೆ ನರರು ಪ್ರಭುಗಳೆ ॥ 3 ॥

ಝುಂಪೆತಾಳ

ತನ್ನ ಯೋಗ ಕ್ಷೇಮವನ್ನು ಅರಿಯದ ಪ್ರಭುವು
ಇನ್ನಾವ ಪರಿವಾರ ದಿರವನು ಬಲ್ಲನೆ

ತನ್ನ ಗಾಗೊ ಸುಖ ದುಃಖ ತಾನರಿಯದವ
ಅನ್ಯರಿಗನುಭವ ತಂದೀಯ ಲಾಪನೆ
ಭಿನ್ನ ಕಾಮದಲ್ಲಿ ಬಯಕೆ ಉಳ್ಳವನು
ಚಿನ್ನುಮಯ ಹರಿಯಂತೆ ನಮ್ಮ ಪಾಲಿಸುವನೆ
ಅನಂತ ಗುಣಪೂರ್ಣ ಗೋಪಾಲವಿಠ್ಠಲ
ಇನ್ನಿಂಥ ಪ್ರಭುವಿರಲು ಅನ್ಯರ ಗೊಡಿವ್ಯಾಕೆ ॥ 4 ॥

ತ್ರಿವಿಡಿತಾಳ

ಬೊಮ್ಮಾಂಡವೆ ಪುರವು ಬೊಮ್ಮನಯ್ಯನೆ ಪಿತನು
ರಮ್ಮೆದೇವಿಯೆ ಮಾತಾ ಸುಮನಸರೆ ಬಂಧು
ಧರ್ಮಾ ಧರ್ಮಗಳೆಂಬ ನಿರ್ಮಳೆಂಬೆರಡು ವೃತ್ತಿ
ಕರ್ಮವೆಂಬ ಭೂಮಿಯಲ್ಲಿ ಬಿತ್ತಿ
ನಮ್ಮ ಯೋಗ್ಯತೆ ತಕ್ಕ ಸಂಬಂಧ ಫಲಗಳು
ಒಮ್ಮಿಗಾದರು ಕೊಡಲು ಕಡಿಮೆ ಇಲ್ಲದಂತೆ
ಎಮ್ಮಯ್ಯ ಸಾಕು ಸಂಬಂಧರದು ಇಲ್ಲ
ಹಮ್ಮು ಸಲ್ಲದು ನರನೆ ಈ ಮಹಿ ನಿನ್ನದೆ
ನಮ್ಮ ಸಾಕುವ ಧೊರೆ ಗೋಪಾಲವಿಠ್ಠಲ
ಅಮ್ಮಹಿಮ ನಿರಲಾಗಿ ನಿಮ್ಮ ನುತಿಸಲ್ಯಾಕೆ ॥ 5 ॥

ಅಟ್ಟತಾಳ

ಜನನಿ ಗರ್ಭದಲಿ ತನುವು ಪೊರೆದವನಾವ
ಜನಕನ ಉದರದು ತಂದು ಇಟ್ಟವ ನಾವ
ಎನಗೆ ಶ್ರೀ ಹರಿಪಾದ ವನಜ ಧ್ಯಾನದ ಬಲ
ಇನಿತಾದ ರೆನ್ನಲ್ಲಿ ಅನುವಾಗಿ ಇತ್ತೆ
ಮನಿಗೆ ಇದ್ದಲ್ಲಿಗೆ ತನಗೆ ತಾನೆ ಸರ್ವ
ಘನಕಾಮ ಕನಕ ವಸನ ಮುಂತಾದವು ಎಲ್ಲ
ಶಡಿಸ್ಯಾಡಿ ಒಲ್ಲೆಂದರೆ ಬಿಡಾವವು ಕಾಣೋ
ಸನಕಾದಿಗಳ ವಂದ್ಯ ಗೋಪಾಲವಿಠ್ಠಲ
ಘನ ದೈವ ಎನಗಿರೆ ಮನುಜರ ಮಾತೇನು ॥ 6 ॥

ಆದಿತಾಳ

ಹರಿಯ ನರಿಯದವನೆ ದಾರಿದ್ರ
ಹರಿಯ ನರಿದ ಬಡವ ಸಂಪನ್ನ
ಹರಿಯು ನೀಯ್ಯದ ವರವು ಅನಿತ್ಯ
ಅರಿಯ ದುಣುವನ ಸಿರಿಯು ಮಿಥ್ಯಾ
ಹರಿಯ ಭಜಿಸದೆ ಬದಿಕಿದ್ದೆ ವ್ಯರ್ಥ
ಹರಿಗೆ ತನ್ನ ಶರಣರೆಲ್ಲೆ ಸ್ವಾರ್ಥಾ
ಹರಿ ಅವತಾರ ಗೋಪಾಲವಿಠ್ಠಲ
ಧೊರೆ ಒಬ್ಬನೆ ಮನವೆರಕ ಎನಗಿನ್ನು ॥ 7 ॥

ಜತೆ

ರಾಜಾಧಿರಾಜ ಗೋಪಾಲವಿಠ್ಠಲ ಮಹಾ
ರಾಜ ನಿರಲು ಅನ್ಯರಾಜರ ಗೊಡಿವ್ಯಾಕೆ ॥ 8 ॥

ಧ್ರುವತಾಳ **ಸುಳಾದಿ 55** ರಾಗ : ಭೈರವಿ

ಸರ್ವಕರ್ತೃ ಶ್ರೀಹರಿ ಅಲ್ಲ ದಿನ್ನಿಲ್ಲವಿನ್ನು
ಸರ್ವ ಜಗತ್ತಿನಲ್ಲಿ ವ್ಯಾಪಿಸಿಹಾ
ಸರ್ವ ಜೀವರಿಗಿನ್ನು ಸಮನಾಗಿ ಇರುತಿಪ್ಪ
ಸರ್ವ ಪುಣ್ಯಪಾಪವು ಮಾಡಿಸುತ್ತ
ನಿರ್ವ್ಯಾಜದಿಂದಲೆ ನಿತ್ಯ ಕರ್ಮವ ಮಾಡಿ
ಸರ್ವ ಜೀವರಿಗಿನ್ನು ಉಣಿಸುವನು
ಸರ್ವ ದೋಷದೂರ ಸರಿಯು ಇಲ್ಲದ ವಸ್ತು
ಸರ್ವಜ್ಞ ಸುಗುಣರಹಿತ ಸರ್ವ ಶಕ್ತಾ
ಸರ್ವ ಗುಣಪೂರ್ಣ ಸಚ್ಚಿದಾನಂದಾತ್ಮಕ
ಸರ್ವಾನಂದ ಪೂರ್ಣ ಸರ್ವೋತ್ತಮ
ಪೂರ್ವಿಕ ದೇವ ನಮ್ಮ ಗೋಪಾಲವಿಠ್ಠಲ
ಸರ್ವ ಜೀವರಲ್ಲಿ ಪೋಷಿಸುವಾ ॥ 1 ॥

ಮಟ್ಟತಾಳ

ವಿಷಯಂಗಳ ಸೃಜಿಸಿ ವಿಷಯದೊಳಗೆ ನಿಂತು
ವಿಷಯ ನಾಮಕವಾಗಿ ವಿಷಯ ಬಯಕೆ ಉಳ್ಳ
ವಿಷಯ ಜೀವರಿಗೆ ವಿಷಯಕೆ ಪ್ರೇರಣೆಮಾಡಿ
ವಿಷಯ ಅನುಭೋಗದ ವಿಷಯ ಮನಕೆ ತಂದು
ವಿಷಯ ಉಣಿಸಿ ದುರು ವಿಷಯೆನು ತಾನಾಗಿ
ವಿಷಯ ಸಂಮಂಧದ ವಿಷಯ ವುಣಿಸಿ ದುಃಖ
ವಿಷಯ ಅಂಬುಧಿಯಲ್ಲೆ ವಿಷಯರಡೂ ಮಾಡುವ
ವಿಷಯ ಬಯಕೆ ಬಿಟ್ಟ ವಿಶೇಷ ಜೀವರಿಗೆ
ವಿಷಯ ಉಣಿಪ ಮುಖ್ಯ ವಿಷಯನು ತಾನಾಗಿ
ವಿಷಯ ಸಂಬಂಧದ ವಿಷಯ ವುಣಿಸಾನು
ವಿಷಯ ರಹಿತ ಸರ್ವಾ ಗೋಪಾಲವಿಠ್ಠಲ
ವಿಷಯ ನಾಗುವ ತನ್ನ ವಿಷಯ ಕರಿಸುವಗೆ ॥ 2 ॥

ರೂಪಕತಾಳ

ಇಂದ್ರಿಯಗಳಲಿ ನಿಂತು ಇಂದ್ರಿಯ ಮಾನಿಗಳಿಗೆ
ಛಂದದಿ ಪ್ರೇರಿಸುವ ಒಂದೊಂದು ಕರ್ಮದಿ
ತಂದೀವ ತಜ್ಜನ್ಯ ಫಲವನು ಅವರಿನ್ನು
ನಿಂದಿಹ ದೇಹದಿ ಉಳ್ಳ ಜೀವನಿಗೆ
ದ್ವಂದ್ವ ಕರ್ಮ ಅವರಿಂದಲೆ ಮಾಡಿಸಿ
ದ್ವಂದ್ವ ಫಲವನು ತಂದು ಈವಾ
ಸಂದೇಹ ವಿಲ್ಲದೆ ಈಪರಿ ಕರ್ಮವು
ನಿಂದಿರದೆ ಮಾಡಿಸುವ ಮಾನಿಗಳಿಂದ
ಗಂಧ ಇವರಿಗೆ ಇಲ್ಲ ದೋಷ ಸಂಬಂಧವ
ಮಂದರಧರಗಂತು ಮೊದಲೆ ಇಲ್ಲ
ಸುಂದರ ವಿಗ್ರಹ ಗೋಪಾಲವಿಠ್ಠಲ
ಬಂಧಕ ಮೋಚಕ ಶಕ್ತನಯ್ಯಾ ॥ 3 ॥

ಝುಂಪೆತಾಳ

ಹರಿಯ ಆಜ್ಞೆ ಇಂದ ಅಗ್ನಿ ತಾ ಜ್ವಲಿಸುತಿಹನು
ಹರಿಯ ಆಜ್ಞೆ ಇಂದ ತರಣಿ ತಾ ತಿರುಗುವನು

ಹರಿಯ ಆಜ್ಞೆ ಯಿಂದ ಮರುತ ತಾ ಬೀಸುವನು
ಹರಿಯ ಆಜ್ಞೆ ಯಿಂದ ಹರಿವವು ಸಲಿಲಗಳು
ಹರಿಯ ಆಜ್ಞೆ ಯಿಂದ ಇರುತಿಹದು ಆಕಾಶ
ಹರಿಯ ಆಜ್ಞೆ ಯಿಂದ ಧರಿಸಿಹಳೀ ಧರಣಿ
ಹರಿಯ ಆಜ್ಞೆ ಯಿಂದ ಪರಿತವಿಸುವ ಚಂದ್ರ
ಹರಿಯ ಆಜ್ಞೆ ಯಿಂದ ಮರಬಳ್ಳಿ ಫಲಿಸುವವು
ಹರಿಯ ಆಜ್ಞೆ ಯಿಂದ ಕರೆವವು ಗೋವುಗಳು
ಹರಿಯ ಆಧೀನ ಇವರರೆಂದು ಮಿತಿಇಲ್ಲ
ಹರಿಯೆ ಸರ್ವವ್ಯಾಪ್ತ ಚೇಷ್ಟೆಗೆ ನಿಯಾಮಕ
ಸರಿ ಇಲ್ಲದ ವಸ್ತು ಗೋಪಾಲವಿಠ್ಠಲ
ಇರುತಿಪ್ಪ ಇಷ್ಟರೊಳು ಅರಿತು ಯೋಗ್ಯತಿಯ ॥ 4 ॥

ತ್ರಿವಿಡಿತಾಳ

ಭೇದವಿಲ್ಲದೆ ಇಪ್ಪ ಎಷ್ಟರೊಳಗೆ ತಾನು
ಭೇದವಾಗಿ ಕಾರ್ಯ ಮಾಡಿಸುತ
ಆದಿಯಲ್ಲಿ ಪೂರ್ಣ ಅಂತಿಯಲ್ಲಿ ಪೂರ್ಣ
ಭೇದ ಜೀವರಲ್ಲಿ ಭೇದ ಕರ್ಮ ಮಾಡಿಪ್ಪ
ಸಾಧು ಅಲ್ಲಿದ್ದ ಕಾರ್ಯ ಕ್ರೋಧರಲ್ಲಿ ಮಾಡಿಸಾ
ಕ್ರೋಧರಲ್ಲಿದ್ದ ಕಾರ್ಯ ಸಾಧು ಅಲ್ಲಿ ಮಾಡಿಸಾ
ಸಾಧು ರೊಳಗೆ ಬೊಮ್ಮನ ಮೊದಲು ಮಾಡಿ
ಕ್ರೋಧರೊಳಗೆ ಇನ್ನು ಆದಿ ಕಲಿಯಮಾಡಿ
ಈ ದಾವ ತಾರತಮ್ಯವಾದ ಜೀವರು ಗಳಿಗೆ
ಮಾಧವ ನಿತ್ಯದಿ ಸುಖ ದುಃಖ ಉಣಿಸುವ
ಶೋಧಿಸಿ ತಿಳಿದರೆ ಜಡ ಚೇತನದಿ ಭಿನ್ನ
ಆದಿ ಮೂರುತಿ ರಾಮ ಗೋಪಾಲವಿಠ್ಠಲ
ಆದರಿಸುವನಯ್ಯ ಆವಲ್ಲಿದ್ದರನ್ನ ॥ 5 ॥

ಅಟ್ಟತಾಳ

ಕರ್ತು ಹರಿಯೆ ಮುಖ್ಯ ಹೊರ್ತಿನ್ನೊಬ್ಬರಿಲ್ಲ
ಅರ್ತಾರೆ  ಅರಿವೆವು ಮರ್ತರೆ ಮರಿವೆವು
ಕೀರ್ತಿಗೆ ಇವನಪಕೀರ್ತಿಗೆ ಇವನೇ

ಅರ್ತು ಜೀವರ ಗತಿ ಸ್ಫೂರ್ತಿಯೆ ಕೊಡುವನು
ವ್ಯರ್ಥವುಮಾಡನು ಹೀಗೆ ಅರ್ತೀವ ಮನುಜಗೆ
ಭರ್ತಿ ಮಾಡಿ ಜ್ಞಾನ ಅರ್ಥಿಯ ತೋರುವ
ಸರ್ತಿ ಇಲ್ಲದ ದೈವ ಗೋಪಾಲವಿಠ್ಠಲ
ಮೂರ್ತಿವಂತ ನಾಗಿರುತಿಹ ನಮ್ಮೊಳು ॥ 6 ॥

ಆದಿತಾಳ

ಮೂರು ಗುಣದೊಳಗೆ ಮೂರುತಿ ಆಗಿದ್ದು
ಮೂರು ಬಗೆಯ ವ್ಯಾಪರವ ಮಾಡುವ
ಮೂರು ವೆಂಬೊದೆ ಮೂಲಕಾರಣ ಸಂಸಾರ
ಮೂರು ಎಂಬೋದು ನಿತ್ಯ ಆರಿಸಿ ನೋಡಲು
ಕಾರಣನಾಗಿ ಹರಿ ಕಾರ್ಯವ ಮಾಡಿಪಾ
ಮೂರರಿಂದಲಿ ಭಿನ್ನ ಮೂರುತಿಯನು ನಿತ್ಯ
ಆರಾಧಿಸುವಗೆ ತೋರುವ ತನ್ನನು
ಮಾರುತವಂದ್ಯಪಾದ ಗೋಪಾಲವಿಠ್ಠಲ
ಭಾರಕರ್ತನು ಭವಭಾರವ ನಿಳುಹುವ ॥ 7 ॥

ಜತೆ

ಸ್ವಾಮಿರಹಿತ ನಾದ ಸ್ವಾಮಿ ಎನಗೆ ಸ್ವಾಮಿ
ಸಾಮಜ ವರದ ಗೋಪಾಲವಿಠ್ಠಲ ಬಂಧು ॥ 8 ॥

## ಸುಳಾದಿ 56

ಧ್ರುವತಾಳ ರಾಗ : ಶಂಕರಾಭರಣ

ಆಡಿ ಆಡಿಸುವನು ನಾಡ ಜೀವನರನ್ನು
ಮಾಡಿ ಮಾಡಿಸುವನು ನಾಡಿ ಜೀವರ ಕೈಯ್ಯಾ
ಬೇಡಿ ಬೇಡಿಸುವನು ನಾಡ ಜೀವರ ಕೈಯ್ಯಾ
ನೋಡಿ ನೋಡಿಸುವನು ನಾಡ ಜೀವರುಗಳ
ಓಡಿ ಓಡಿಸುವನು ನಾಡ ಜೀವರನ್ನು
ನೀಡಿ ನೀಡಿಸುವನು ನಾಡ ಜೀವರ ಕೈಯ್ಯಾ
ಕೇಡು ಲಾಭವು ಎರಡು ಕೂಡಿ ಹರಿ ಆಧೀನ
ಮಾಡಿಸುವ ಯೋಗ್ಯತೆ ಹಿಡುದು ಸಾಧನವಾ
ರೂಢಿ ಒಳಗೆ ಇನ್ನು ಈಡಾದ ವಸ್ತುವಿಲ್ಲಾ

ನಾಡ ದೈವರಿಗೀತ ನಲ್ಲದೆ ಗತಿ ಇಲ್ಲಾ
ಪೀಡೆ ಮನವೆ ನಿನ್ನ ನಾಡಯೋಚನೆ ಹೋಗಾ
ಲಾಡಿ ಹರಿಯ ಪಾದ ನೋಡಿ ಸುಖಿಯಾಗಿರು
ನಾಡ ದೈವರ ಗಂಡ ಗೋಪಾಲವಿಠ್ಠಲಲನ್ನ
ಹಾಡಿ ಪಾಡಿ ಕೊಂಡಾಡಿ ಬೇಡಿಕೊ ಸದ್ಗತಿಯಾ ॥ 1 ॥

ಮಟ್ಟತಾಳ

ನನ್ನದೆಂಬದ ರೊಳಗೆ ನಿನ್ನದೆ ಹರಿಯನ್ನು
ಉಣ್ಣೊ ಊಟವು ಎಲ್ಲಾ ನಿನ್ನದೆ ಹರಿಯನ್ನು
ಚಿನ್ನ ಕಾಪ್ಯಗಳು ಬಣ್ಣ ಬಿಳಿದು ಎಲ್ಲ
ಕಣ್ಣಿಲಿ ಕಂಡದ್ದು ನಿನ್ನದೆ ಹರಿ ಅನ್ನು
ಪುಣ್ಯ ಪಾಪಗಳ ನಿನಗೆ ಮಾಡಲಿಕ್ಕೆ
ಇನ್ನು ಸ್ವಾತಂತ್ರವು ಎಂದೆಂದಿಗೆ ಇಲ್ಲಾ
ಕಣ್ಣು ಇಲ್ಲದವಗೆ ಅನ್ನ ಉಣಿಸಿದಂತೆ
ಪುಣ್ಯಾತ್ಮ ದೇವ ಎನ್ನ ಪಾಲಿಸುವನು
ನಿನ್ನ ಕರ್ತೃತ್ವವು ಹರಿ ಆಧೀನವು
ಮನ್ನಿಸುವನು ತನ್ನ ಮನ ಬಂದಂತಾಡಿ
ಅನ್ಯ ದೈವರ ಗಂಡ ಗೋಪಾಲವಿಠ್ಠಲ
ಅನಂತ ಶಕ್ತನು ಅನಂತ ಗುಣಪೂರ್ಣ ॥ 2 ॥

ರೂಪಕತಾಳ

ಊರ ಒಳಗಿನ ವಸ್ತು ಆರಾದರು ವೈದರೆ
ದೂರು ಹಾಕಿ ತಳವಾರರ ಹೊಡೆದಂತೆ
ಕ್ರೂರವಚನ ನಿಷ್ಠುರ ಜಿಂಹೆ ನುಡಿದರೆ
ಸೇರದೆ ಪರರು ಪಲ್ಲುದರ ಬಡದಂತೆ
ಆರು ಮೆಚ್ಚದ ತಪ್ಪು ಕರಗಳು ಮಾಡಿದರೆ
ಹುರಿ ಬೆನ್ನಾ ಚರ್ಮ ಹಾರ ಹೊಡೆದಂತೆ
ಆರಾರಲಿ ಕರ್ತಾ ಕಾರಯಿತಾ ಪ್ರೇರಕ
ಮಾರಜನಕನೆ ವ್ಯಾಪಾರ ಮಾಡಿಸಿ ಜೀವ
ನರಗೀ ಪ್ರಕಾರ ಕರ್ಮ ಫಲ ಉಣಿಸುವಾ

ಆರು ಈತಗೆ ಒಂದು ಸರಿಯಾದ ವಸ್ತು ವಿಲ್ಲ
ವಾರಿಜನಾಭನೆ ಸರ್ವೋತ್ತಮ ಕಾಣಿರೊ
ಶ್ರೀರಮಣ ನಮ್ಮ ಗೋಪಾಲವಿಠ್ಠಲ
ಧೀರರಿಗೆ ಧೀರ ಕಾರುಣ್ಯ ಸಾಗರ ॥ 3 ॥

ಝುಂಪಿತಾಳ

ದೇವನೆಂದರೆ ನಮ್ಮ ದೇವ ಈತನೆ ಕಾಣೊ
ದೇವಾದಿ ದೇವತೆಗಳಿಗೆ ದೇವದೇವರೆಂಬೊ ಮಿಕ್ಕ
ದೇವತಿಗಳಿಗೆಲ್ಲ ದೇವ ಈತನೆ ಕಾವು ತಾನೆ ನೋಡಿ
ದೇವನಿಲ್ಲದ ಸ್ಥಳವು ಅವಲ್ಲಿ ಇಲ್ಲವಿನ್ನು
ದೇವ ಸರ್ವತ್ರದಲ್ಲಿ ವ್ಯಾಪಕ ಭಾವ ಶುದ್ಧದಲಿನ್ನು
ಸೇವಿಸಿದರಿನ್ನು ದೇವ ದೇವಕ್ಕಿಗೆ ಕಂದ ನಾದಾ
ಗೋವಳ ರೊಡಿಯ ನಮ್ಮ ಗೋಪಾಲವಿಠ್ಠಲನ್ನ
ಕಾವೊ ಘನವಯ್ಯಾ ಇನ್ನಾವಲ್ಲಿದ್ದರನ್ನ ॥ 4 ॥

ತ್ರಿವಿಡಿತಾಳ

ಲೋಕಾ ಲೋಕದೊಳು ಅನೇಕ ಜೀವರುಂಟು
ಲೊಕಾ ಲೊಕಾಚಾರ ಅನೇಕ ಕರ್ಮಗಳುಂಟು
ಲೊಕ ಲೋಕ ದೊಳಗೆ ತ್ರಿವಿಧ ಜೀವರುಂಟು
ಲೊಕ ಲೋಕಕೆ ಎಲ್ಲ ಸಾಕುವ ನೊಬ್ಬನೆ
ಕಾಕು ಗೊಂಡಿನ್ನು ಕಂಡವರಿಗೆ ಬೇಡಿದರೆ
ತಾ ಕೊಡುವರೆಲ್ಲಿಂದ ತಾ ಕಾಣದವರೆಲ್ಲ
ಸಾಕುವನೊಬ್ಬನೆ ಸಕಲ ಜೀವರುಗಳ
ನೇ ಕೇಳು ಮನವೆ ನಿನ್ವ್ಯಾಕುಲವನು ಬಿಡು
ಏಕ ಚಿತ್ತದಲಿನ್ನು ಏಕೋದೇವನ ಭಜಿಸು
ಸಾಕಲ್ಯ ಗುಣ ಪೂರ್ಣ ಗೋಪಾಲವಿಠ್ಠಲ
ಲೋಕದಿಂದಲಿ ಭಿನ್ನ ಲೋಕರ ಪಾಲಕ ॥ 5 ॥

ಅಟ್ಟತಾಳ

ತ್ರಿವಿಧ ಜೀವರು ಉಂಟು ತ್ರಿವಿಧ ಕರ್ಮಗಳುಂಟು
ತ್ರಿವಿಧ ಗುಣಗಳುಂಟು ತ್ರಿವಿಧ ಕಾರ್ಯಗಳುಂಟು

ತ್ರಿವಿಧ ರೊಳೊಂದೊಂದು ತ್ರಿವಿಧ ಬಗೆಯ ಉಂಟು
ತ್ರಿವಿಧ ಜೀವರ ಕಾರ್ಯ ಶ್ರೀಹರಿ ಆದೀನ
ತ್ರಿವಿಧ ರಿಂದಲಿ ಭಿನ್ನ ತ್ರಿವಿಧರ ಪಾಲಕ
ತ್ರಿವಿಕ್ರಮ ಮೂರುತಿ ಗೋಪಾಲವಿಠ್ಠಲನ್ನ
ತಿಳಿದು ಸಾಕಲ್ಯದಿ ತಿಳಿಯಲಿ ವಶವಲ್ಲ ॥ 6 ॥

ಆದಿತಾಳ

ಈತನೆ ನಮ್ಮ ದೇವ ಈತನೆ ನಮ್ಮ ಕಾವಾ
ಈತನೆ ನಮ್ಮ ತಂದಿ ಈತನೆ ನಮ್ಮ ತಾಯಿ
ಈತನೆ ನಮ್ಮ ಬಂಧು ಈತನೆ ನಮ್ಮ ಬಳಗ
ಈತನೆ ಇಹ ನಮಗೀತನೆ ಪರವೋ
ಈತನೆ ದೇಶವು ಈತನೆ ದಿಕ್ಕಿನ್ನು
ಈತನೆ ಗತಿ ಇನ್ನೊಂದು ದೈವವಿಲ್ಲ
ವಾತಜಾತನ ಪಿತ ಗೋಪಾಲವಿಠ್ಠಲ
ಸೋತೆನೆಂದವರ ಬೆನ್ಹತ್ತಿ ಪಾಲಿಸುವನು ॥ 7 ॥

ಜತೆ

ಬಿಡೆನು ಬಿಡೆನು ಇನ್ನು ಮುಂದೆ ಇದೆ ದೈವ
ಪಿಡಿದೆ ಗೋಪಾಲವಿಠ್ಠಲನ ಅಡಿಗಳ ಅನುದಿನ ॥ 8 ॥

## ಧ್ರುವತಾಳ **ಸುಳಾದಿ 57** ರಾಗ : ಭೈರವಿ

ಎನ್ನ ಜ್ಞಾನಗಳೆಲ್ಲ ಎನ್ನ ಧ್ಯಾನಗಳೆಲ್ಲ
ಎನ್ನ ಮಾನಗಳೆಲ್ಲ ಎನ್ನ ಸ್ನಾನಗಳೆಲ್ಲ
ಎನ್ನ ಮಂತ್ರಗಳೆಲ್ಲ ಎನ್ನ ತಂತುಗಳೆಲ್ಲ
ಎನ್ನ ದಾನಂಗಳೆಲ್ಲ ಎನ್ನ ಧರ್ಮಂಗಳೆಲ್ಲ
ಎನ್ನ ತೀರ್ಥ ಯಾತ್ರಯೆಲ್ಲ ಎನ್ನ ಯಾಗಂಗಳೆಲ್ಲ
ಎನ್ನ ಪುಣ್ಯಗಳೆಲ್ಲ ಎನ್ನ ಕೌಶಲ್ಯವೆಲ್ಲ
ಇನ್ನಿದರೊಳಗಿನ್ನು ಎನ್ನಿಂದಾದ ಸಾಧನ
ವನ್ನು ಲೇಶವಾದರು ಕಂಣ್ಣಿಲಿ ಕಂಡಿದ್ದಿಲ್ಲ
ನಿನ್ನ ಸ್ವಭಾವವಯ್ಯಾ ನಿನ್ನ ಕರುಣಾರಸಕಿನ್ನು

ಅನನೆಂಬೆ ಎನ್ನೊಡಿಯನೆ ಕೇಳು
ಎನ್ನ ಕರ್ತೃತ್ವಗಳು ಇನ್ನು ಮುನ್ನಾದದಲ್ಲ
ನಿನ್ನ ಆದೀನವಯ್ಯಾ ಎನ್ನ ಫಲಾ ಫಲವು
ಮನ್ನಣಿ ಮಾಡಿಸುವಿ ಅನ್ಯರಲಿಂದ ನೀನು
ಮನ್ನಣಿಯನು ಕೊಂಬೇ ಎನ್ನಲ್ಲಿ ನಿಂತುಕೊಂಡು
ನಿನ್ನ ಭಕ್ತರವರನ್ನು ಪಾಲಿಸೊ ಬಗೆ
ನಿನ್ನವರ ಮಹಿಮೆ ನೀನೆ ಬಲ್ಲಿಯೊ ದೇವ
ನಿನ್ನನೆ ಗತಿಎಂದು ಬಿನ್ನಪ ಚಿತ್ತೈಸು
ಘನ್ನ ದಯಾನಿಧಿಯೆ ಪನ್ನಗಶಯನ ಗೋಪಾಲವಿಠ್ಠಲರೇಯಾ
ನಿನ್ನನೆ ನಿನ್ನನೆ ನಿನ್ನನೆ ಮೊರೆಹೊಕ್ಕೆ ॥ 1 ॥

ಮಟ್ಟತಾಳ

ಸಿರಿ ಅಜಭವ ಸುರ ಸನಕಾದಿಗಳಿಗೆ
ಹರಿ ನೀ ಚಲಿಸದಿರೆ ಬೆರಳು ಆಡಿಸಲಿನ್ನು
ಥರವಲ್ಲ ವೆಂತೆಂದು ವರ ಶ್ರುತಿ ಸ್ಮೃತಿಗಳು
ಪರಿ ಪರಿಯಲಿ ಸ್ತುತಿಸಿ ಆರಸಿ ಕೊಂಡಾಡಲು
ಅರಿಯದೆ ನಾ ವ್ಯರ್ಥ ಮರಳು ಕತ್ರ್ಯೃತ್ವ
ಧರಿಸಿಕೊಂಡು ಇನ್ನು ಬರಿದೆ ದಣಿದೆನಯ್ಯಾ
ಪರಮ ಮೂರ್ಖ ನಾನು ಮೆರೆಹೊಕ್ಕೆ ಮೊರೆಹೊಕ್ಕೆ
ಮರದದ್ದೆಲ್ಲ ನೀನು ಅರವು ಮಾಡೆನಗೀಗ
ಕರುಣಾಕರ ರಂಗ ಗೋಪಾಲವಿಠ್ಠಲ
ಕರುಣಾಳೆಂಬುವದು ಅರಿಯದಾದೆ ನಿನ್ನ ॥ 2 ॥

ರೂಪಕತಾಳ

ಕರ ಚರಣಂಗಳ ಚೇಷ್ಠಿ ಪರಿ ವ್ಯಾಪಾರವು ಎನ್ನಿಂ
ದರಿದು ಮಾಡಿದ್ದರೆ ಅರಿಯದಲೇ ಎನ್ನ
ಬೆರಳಿಂದ ಕಣ್ಣನು ಇರಿದು ಕೊ ಬಲ್ಲಿನೆ ಚರಣದಿಂದಲಿ ಮುಳ್ಳು
ಭರದಿಂದ ತುಳಿವೆನೆ ಮರಳಿ ಎನ್ನ ಜಿಂಹ್ವೆ
ಮರದು ನಾ ಕಡೆವೆನೆ
ತೆರಿವೆನೆ ನೀ ಬಾಯನು ತೆರಿಸದಿದ್ದರೆ ನಾನು

ಹರಿಯೆ ನೀ ಕರ್ತನಿರೆ ಬರಿದೆ ನಾ ಕರ್ತೆಂದು
ಉರಲು ಹಾಕಿಸಿಕೊಂಡು ಗುರು ಗುರು ಗುಟ್ಟುವೆನೆ
ಶರಣರ ಪಾಲಕ ಗೋಪಾಲವಿಠ್ಠಲ
ಪೊರಿಯೆನ್ನ ಧೊರಿಯೆ ನೀ ಪರಿಪರಿಯಿಂದಲಿ ॥ 3 ॥

ಝಂಪೆತಾಳ

ಸರ್ವರಿಗೆ ಪ್ರೇರಕ ಸರ್ವಕರ್ತಾ ಭೋಕ್ತಾ
ಸರ್ವತ್ರದಲಿ ವ್ಯಾಪ್ತ ಸರ್ವ ಶಬ್ದ ವಾಚ್ಯಾ
ಸರ್ವ ಗುಣ ಪರಿಪೂರ್ಣ ಸರ್ವ ದೋಷದೂರ
ಸರ್ವ ಜ್ಞಾನಗಮ್ಯ ಸರ್ವ ಶಕ್ತಿ ಮೂರ್ತಿ
ಸರ್ವೇಶ ಚಲುವ ಗೋಪಾಲವಿಠ್ಠಲರೇಯಾ
ಸರ್ವಂತರಿಯಾಮಿ ಸಾರ್ವ ಭೌಮ ನಮೋ ॥ 4 ॥

ತ್ರಿವಿಡಿತಾಳ

ಬಂದವನು ನೀನೆ ಭಕ್ತರ ಮನದಲ್ಲಿ
ನಿಂದವನು ನೀನೆ ಪಂಢರ ಪುರದಲ್ಲಿ
ತಂದೆಯಾಗಿ ಎನಗೆ ತಾಯಿಯಾಗಿ ಎನಗೆ
ಬಂಧುವಾಗಿ ಎಮಗೆ ಸಂದೇಹವಿಲ್ಲದೆ
ಹಿಂದೆ ಮುಂದೆ ಏಕಾಗಿ ಒಂದೆ ಪರಿಯಲ್ಲಿನ್ನು ಸಕಲ ಕಾಲಿನ್ನು
ಛಂದದಿ ಪಾಲಿಸಲಾನಂದದಿ ಎನ್ನ ಮನ
ಮಂದಿರದಿ ಪೊಳೆದು ನಿಂದು ಆಡುವರಂಗ
ಒಂದೆ ದೈವವೆ ನಮ್ಮ ಗೋಪಾಲವಿಠ್ಠಲ
ಕಂದನ ತಾಯಿಸಲಹಿದಂದದಿ ಸಲಹುವಿ ॥ 5 ॥

ಅಟ್ಟತಾಳ

ಬೇಡೆನ್ನ ಬಾರದೆ ನಾಡವಿಷಯಕೆ ಮನ
ಓಡಿದರೆ ನೀನು ಓಡುತಲಿಹರೆ
ಮಾಡಿಕೊಂಡ ಪತಿ ನೋಡುತಿರಲು ಸತಿ
ಈಡ ಒಬ್ಬನ ಬೇರೆ ನೋಡಿಕೊಂಡರೆ ಇನ್ನು
ಮಾಚುವನೊ ಕೃಪೆ ಕೇಡಾಗೋದಲ್ಲದೆ

ನಾಡ ದೈವದ ಗಂಡ ಗೋಪಾಲವಿಠ್ಠಲ
ಝೋಡಿ ವಿಷಯಕ್ಕೆ ಮನ ಓಡಾಡದಂತೆ ಮಾಡೋ ॥ 6 ॥

ಆದಿತಾಳ

ಗರತಿಯ ಲಕ್ಷಣ ದೊರಕಿಸು ಎನಗೆ
ಗರಳ ಎನಿಸು ಪರ ಅರಸಿಯಲಿ
ಕುರುಹು ತಿಳಿಹಿಸು ನಿನ್ನ ತತ್ವಗಳಲ್ಲಿ
ಮರುಳು ಬಿಡಿಸು ಮನ ಮಮತೆಗಳಲ್ಲಿ
ತಿರುಗಿಸೆನ್ನನ್ನು ತೀರ್ಥ ಯಾತ್ರಿಗಳಲ್ಲಿ
ಹರಟೆ ಮಾಡಿಸು ಹರಿ ವಾರ್ತೆಗಳಲ್ಲಿ
ಕರವ ಮುಗಿಸು ನಿನ್ನ ರೂಪಂಗಳಲ್ಲಿ
ಕರವ ಪಿಡಿಸು ನಿನ್ನ ಶರಣರಲ್ಲಿ
ಪರಮ ದಯಾಳು ಗೋಪಾಲವಿರ್ಠಲರೇಯಾ
ಕರೆವ ವಚನಗಳಲ್ಲಿ ಅರುವಂತೆ ಮಾಡು ನಿನ್ನ ॥ 7 ॥

ಜತೆ

ನಾನಾಡುವ ಮಾತೆಲ್ಲ ನಿನ್ನದೆ ವಯ್ಯಾ
ನಾನರಿಯೆ ನೀನೆ ಗತಿ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 58** ರಾಗ : ವಸಂತ ಭೈರವಿ

ಕಾಯಾ ಕ್ಲೇಶವ ಬಡಿಸಿ ಕಂಡವರಿಗೆ ಹಾರ್ಯೆಸಿ
ಸಾಯಾಸ ಬಿಟ್ಟು ನಾನಾ ಸಾಧನವನ್ನು ಮಾಡಿ
ಕಾಯಾ ನಿನ್ನ ಪ್ರೀತಿ ಆಯಿತೊ ಎಂದು ಎನ್ನ
ಸಾಯಾಸಕ್ಕೆ ಇನ್ನಾರು ಸರಿ ಇಲ್ಲ ಎಂದು ಕೊಂಬೆ
ನ್ಯಾಯವೊ ಅನ್ಯಾಯವೊ ನಾನರಿತವನಲ್ಲ
ಆಯಾವ ನೀನೆ ಬಲ್ಲಿ ಅವರವರದು
ಜ್ಯೋಯಿಸಿಯ ಧರ್ಮವು ಆಗುವದ್ಹ್ಯಾಗೊ ಕಡಿಗೆ
ಮಾಯಾ ಮಾಡಲಿಬೇಡ ಮಾರಮಣ ಎನ್ನೊಡನೆ
ನ್ಯಾಯ ವೆಂದು ತಿಳಿದಿಪ್ಪೆ ನಾನುಮಾಡುವಧರ್ಮ
ನ್ಯಾಯವೆಂಬೋದು ನೀನನ್ಯಾಯವ ಮಾಡುವಿನ್ನು

ನಾಯಕ ಕೇಳು ನಾ ಅನ್ಯಾಯ ಒಂದಾದ್ದೆಲ್ಲ
ನ್ಯಾಯವಾಗಿ ತೋರೋದು ನಿನ್ನ ಚಿತ್ತದಲ್ಲಿ
ಮಾಯ ರಹಿತ ನಮ್ಮ ಗೋಪಾಲವಿಠ್ಠಲ
ದಾಯಿಗರಿ ಗೊಪ್ಪಿಸದೆ ಆಯವರಿತು ಪೊರಿಯೊ ॥ 1 ॥

ಮಟ್ಟತಾಳ

ನಿನ್ನವ ನೆಂತೆಂದು ಪೇಳಿ ಕೊಂಬುವದಕ್ಕೆ
ಇನ್ನಿತಾದರು ಸಾಧನ ವೆನ್ನಲಿಲ್ಲ
ನಿನ್ನವರಲ್ಲಿ ಭಕುತಿ ಇನ್ನು ಮೊದಲಿಗೆ ಇಲ್ಲಾ
ನಿನ್ನ ವಾರುತಿಯಲ್ಲಿ ನಿನ್ನ ಕೀರುತಿಯಲ್ಲಿ
ನಿನ್ನ ದಾಸರು ಎಲ್ಲಿ ಆನೆಲ್ಲಿ ನರಗುರಿಯು
ಬಣ್ಣ ಗೆಟ್ಟವನಯ್ಯಾ ಬರಿದೆ ನಿನ್ನವನೆಂದು
ನನ್ನೊಳಗೆ ನಾನು ಮದ ಸೊಕ್ಕಿ ತಿರುಗಿ
ಧನ್ಯನೆಂದು ಕೊಂಡು ಧೈರ್ಯದಲ್ಲಿ ಇಪ್ಪೆ
ನಿನ್ನ ಚಿತ್ತದಲಿ ಹೊಂದಿನ್ನು ನೀನೆ ಬಲ್ಲೆ
ಅನ್ಯ ದೈವರ ಗಂಡ ಗೋಪಾಲವಿಠ್ಠಲ
ನಿನ್ನ ದಯಾ ರಸವೊ ಇನ್ನೊಂದನರಿಯೆ ॥ 2 ॥

ರೂಪಕತಾಳ

ಹಾಡಿ ಸುಖಿಪರು ಕೆಲರು ಬೇಡಿ ಸುಖಿಪರು ಕೆಲರು
ಮಾಡಿ ಸುಖಿಪರು ಕೆಲರು ನೀಡಿ ಸುಖಿಪರು ಕೆಲರು
ನೋಡಿ ಸುಖಿಪರು ಕಲೆರು ಒಡನಾಡಿ ಸುಖಿಪರು ಕೆಲರು
ನಾಡ ಜೀವರಿಗೆ ನಾನಾಕು ಸಾಧನೆ ಉಂಟು
ಆಡುವ ನಾನಲ್ಲ ಬೇಡುವ ನಾನಲ್ಲ
ಪಾಡುವ ನಾನಲ್ಲ ಕಾಡುವ ನಾನಲ್ಲ
ನೀಡುವ ನಾನಲ್ಲ ಮಾಡುವ ನಾನಲ್ಲ
ಮಾಡಿಸಿ ಮಾಡುವ ಸಾಧು ಜೀವರ ಸಂಗ
ಕೂಡಿ ವೊಡನಾಡಿನ್ನು ನೋಡುವ ಭಾಗ್ಯವು
ಬೇಡಿ ಹಾರೈಸಿ ನಾ ಬೆನ್ನು ಬಿದ್ದೆನು ದೇವಾ
ರೂಡಿಗಧಿಕ ನಮ್ಮ ಗೋಪಾಲವಿಠ್ಠಲ
ಈಡು ಇಲ್ಲದ ದೈವ ಮಾಡು ಎನಗೆ ಕೃಪೆಯಾ ॥ 3 ॥

ಝುಂಪೆತಾಳ

ಸ್ನಾನ ಸಂಧ್ಯಾನ ಜಪ ತಪದಿ ಅನುಷ್ಠಾನ
ದಾನ ಸತ್ಕರ್ಮಂಗಳಲ್ಲಿ ಎನಗೆ
ಏನಾಯಿತು ಇಷ್ಟೆ ಸಾಕೆಂಬ ವೈರಾಗ್ಯ
ವಾನು ಕೊಡದಿರು ಎನೆಗೆ ಕರ್ಮಂಗಳಲ್ಲಿ
ಹೀನರ ಸಂಗದಲಿ ಇಟ್ಟು ಎನ್ನನ್ನು ಬಹು
ದಿನಗಳ ಬದುಕುಸೊಕಿಂತ ಹರಿಯೆ
ಜ್ಞಾನಿಗಳೊಡನೊಂದು ದಿನ ಬದುಕುದದಕೆ ಸ
ಮಾನ ಉಂಟೆನಯ್ಯಾ ಸರ್ವೋತ್ತಮಾ
ಮಾನಿಸ ಜನ್ಮವು ಮೇಲೆ ವೈಷ್ಣವನಾಗಿ
ಶ್ರೀನಾಥ ಸೃಜಿಸಿದೆಯೋ ಅವನಿಯೊಳಗೆ
ಕಾಣೆನೋ ನಾನಿದಕೆ ತಕ್ಕ ಸಾಧನಗಳು
ನೀನೆ ಗತಿ ಎನಗೆ ಮುಂಕುದನಂದಾ
ನೀನು ಕರುಣಿಸಿದರೆ ಸಕಲ ಸಾಧನ ತನ್ನಿಂ
ತಾನೆ ಆಗುವದಯ್ಯಾ ತಪ್ಪಿಸದಲೆ
ಹಾನಿ ಲಾಭವು ಎರಡು ಎನಗೆ ಬಂದರು ನೀ
ಧಾನಿಸಿ ನಿನ್ನ ತಿಳಿವೊ ಜ್ಞಾನ ನೀಯೋ
ದೀನ ರಕ್ಷಕ ರಂಗ ಗೋಪಾಳವಿಠ್ಠಲ
ನೀನೆ ಗತಿ ನಿನ್ನ ಬಿಡೆ ನಿತ್ಯ ತೃಪ್ತಾ ॥ 4 ॥

ತ್ರಿವಿಡಿತಾಳ

ನಾನು ದೊಷಕಾರಿಯೋ ನೀ ನಿರ್ದೋಷನು ದೇವಾ
ನಾನು ದುಃಖ ಭರಿತ ನೀನು ಸುಖಪೂರ್ಣ
ನಾನು ಅಜ್ಞಾನಿಯೊ ನೀನು ಜ್ಞಾನ ಪೂರ್ಣ
ನಾಣು ಅಲ್ಪಗುಣನೋ ನೀನು ಗುಣಪೂರ್ಣ
ನಾನು ಅಸ್ವತಂತ್ರ ನೀನು ಸ್ವಾತಂತ್ರನೋ
ನಾನು ನಾಶವು ಇಲ್ಲ ನೀನು ನಾಶವು ಇಲ್ಲ
ನೀನು ಅನಾದಿ ನಿತ್ಯ ನಾನು ಅನಾದಿ ಭೃತ್ಯ
ನೀನು ಎನಗೆ ಬೇಕು ನಾನು ನಿನಗೆ ಬೇಕು
ನಾನೆಂಬುವರು ಬೇರೆ ಇಲ್ಲದಿದ್ದರಾಯಿತೆ

ನೀನೆಂಬುವದು ಇನ್ನು ಆರು ಬಲ್ಲರುದೇವ
ಜ್ಞಾನಿ ಇವನೆಂದರೆ ಅಜ್ಞಾನಿ ಬ್ಯಾರುಂಟು
ದಾನಿ ಇವನೆಂದರೆ ದೀನನು ಬ್ಯಾರುಂಟು
ಜಾಣ ಇವನೆಂದರೆ ಜಡಮತಿ ವೆಂಬರು ಉಂಟು
ಮಾನಿತಾನೆನೆ ಅಪಮಾನಿ ತಾ ಬ್ಯಾರುಂಟು
ಹೀನ ಎಂಬೋ ಅಹಂಕಾರವನು ಎನಗೆ ಇರಲಿ
ನಾನೆ ಕರ್ತ ನೆಂಬೋದೆನಗೆ ಎಂದಿಗೆ ಬೇಡ
ನಾನೆಂಬ ಅಸ್ವಾತಂತ್ರ ವಸ್ತು ಽದ್ದ ಕಾರಣ
ನೀನೆಂಬ ಸ್ವಾತಂತ್ರ ಪ್ರಕಟವಾಯಿತು ರಂಗ
ಏನೆಷ್ಟು ಸೌಭಾಗ್ಯ ಇದ್ದ ಕಾಲಕು ನಿನಗೆ
ದಾನ ಬೇಡುವ ಜೀವರಿಂದಲೆ ಶೋಭಿತಾ
ನೀನೆ ನಿನಗೆ ಬೇರೆ ಕೊಟ್ಟು ಕೊಂಡಾಡಿಯಾ
ನೀನು ನಿನಗೆ ತುತಿ ಮಾಡಿಕೊಂಡಿಯಾ ದೇವ
ಶ್ರೀನಾಥ ಬಾರಯ್ಯ ಗೋಪಾಲ ವಿಠ್ಠಲ
ಏನಾದರು ನಿನಗೆ ಎನಗೆ ಬಿಟ್ಟದ್ದು ಅಲ್ಲಾ ॥ 5 ॥

ಅಟ್ಟತಾಳ

ಎಂಟು ಶೇರಿನ ದೊಂದು ಘಂಟಿಯ ನಿರ್ಮಿಸಿ
ಒಂಟೀಲಿ ಇಟ್ಟನ್ನು ಹಿಡಿದು ಬಾರಿಸಿದರೆ
ಘಂಟೆಯಲ್ಲಿದ್ದ ನಾದ ಘಂಟಿ ಇಂದದ ತಿಳಿವದೆ
ಎಂಟು ತೊಲಿಯದೊಂದು ಸೊಂಟ ನಾಲಿಗೆಯನ್ನು
ಉಂಟಾದರಾಯಿತೆ ಘಂಟಿ ಶೋಭಿಸುವದು
ಘಂಟಿಯಂತೆ ನೀನು ನಾಲಿಗಿಯಂತೆ ನಾನು
ಘಂಟಿ ಯೊಳಗೆ ನಾಲಿಗಡಕವಾಗಿಪ್ಪೋದು
ಬಂಟಿ ನಾನಿನ್ನೊಳು ಅಡಕ ವಾಗಿಪ್ಪೆನು
ನೆಂಟತನವು ನಿನಗೆನಗೆ ಹೀಗುಂಟು ವೈ
ಕುಂಠ ಮೂರುತಿ ರಂಗ ಗೋಪಾಲವಿಠ್ಠಲ
ಬಂಟರಿಂದಲೆ ನಿನ್ನ ಭಾಗ್ಯ ಶೋಭಿಸುವದು ॥ 6 ॥

ಆದಿತಾಳ

ಸಿರಿವಂತ ನೀನೆಂದು ಧರಿಯೊಳು ತೊರಿದ
ಪರಮ ಭಕುತನಾದ ದರಿದ್ರ ಸುದಾಮನೆ
ಹರಿ ನಿರ್ದೋಷ ನೀನೆಂದು ಸ್ಮರಿಸಿ ಜಗದೊಳಗೆ
ಹರಹಿದ ಅಜಮಿಳ ಪರಮ ದೋಷ ಕಾರಿಯೆ
ಹರಿ ಸರ್ವೋತ್ತಮನೆಂದು ನರಗೆ ಅಂಜದಲಿದ್ದ
ತರುಳ ಪ್ರಲ್ಹಾದ ಪರಮ ಛಲ ಪಾತಕಿಯೆ
ಹರಿ ಕಾರ್ಯವ ಅರಿತು ಅಸುರಿಗೆ ರಾಜ್ಯವ ಸೋತು
ಧರಿ ಚರಿಸಿದ ಪಾಂಡವರು ಅಜ್ಞಾನಿಗಳೆ
ಹರಿ ನೀ ಭಕ್ತರ ವಶಕರನು ಎಂಬುವದಕ್ಕೆ
ಪಿರಿದು ಕಾಲ ಕಟ್ಟಿದ ದುರುಳಳೇನಾ ಯಶೋದೆ
ಹರಿ ನಿನ್ನ ಶರಣರಾ ಸಿರಿಯಾ ಇನ್ನೆಂತೆಂತು
ಸರಿಗಾಣೆ ನಾ ನಿನ್ನ ಶರಣರಿಗೆ ನಮೊ ಎಂಬೆ
ಪರಮ ದಯಾಳು ವೆ ಗೋಪಾಲವಿಠ್ಠಲ
ಮೊರೆಹೊಕ್ಕೆ ನಿನಗಿನ್ನು ನೆರೆ ಬದುಕುಸನು ಗಾಲಾ ॥ 7 ॥

ಜತೆ

ನಿನ್ನ ಚಿತ್ತದಲಿದ್ದ ದೆನಗೆ ಮಾಡಿಸು ದೇವ
ಇನ್ನೊಂದು ಅನೊಲ್ಲೆ ಗೋಪಾಲವಿಠ್ಠಲ ॥ 8 ॥

## ಸುಳಾದಿ 59

ಧ್ರುವತಾಳ ರಾಗ : ಶಂಕರಾಭರಣ

ಆಪತ್ತು ಕಾಲ ಈಗ ಬಂದಿದೆ ಅಯ್ಯಾ
ಶ್ರೀಪತಿ ಕಾಯೋ ಆಶ್ರಿತ ಜನಬಂಧು
ನೀ ಪರಮ ಪುರುಷ ನಿತ್ಯ ತೃಪುತ ದೇವಾ
ನಾ ಪರ ದೇಶಿಯೊ ಹೇ ನಳಿನನಾಭಾ
ಅಪಾರ ದೊಷಿ ಇನ್ನು ಆನಹುದಯ್ಯಾ ಅಯ್ಯಾ
ನೀ ಪೂರ್ಣ ಗುಣನಿಧಿ ನಿರ್ದೋಷ ನಲ್ಲೆ
ಲೇಪರಹಿತ ನೀನು ಬಿಂಬನಾದ ಬಳಿಕ
ತಾಪ ಉಂಟೆನೋ ಪ್ರತಿ ಬಿಂಬಗಳಿಗೆ

ಭೂಪಾಲಕನು ಸುಖದಲ್ಲಿ ಇರಲಾಗಿ
ಆಪತ್ತು ಉಂಟೆ ಅವನ ಆಳು ಜನಕೆ
ನೀ ಪರುಪಕಾರಿ ನಿನಗೊಂದಪೇಕ್ಷೆ ಇಲ್ಲ
ಸಾಪಾಟ ಆಧಿಕ ಶೂನ್ಯ ಸರ್ವೋತ್ತಮಾ
ತಾಪತ್ರಯಂಗಳು ತ್ರಿವಿದ ಗುಣದ ಕಾರ್ಯ
ನೀ ಪ್ರೇರಿಸಿದಂತೆ ನಿತ್ಯ ದಣಿಸೋವು
ನಾ ಪ್ರತಿಗಾಣೆ ನಿನಗೆ ವಂದನ್ನ ಮಾಡಿ ತೋರ
ಆಪೂ ಸಾಪಿಗೆ ಮಾತ್ರ ಕರ್ತನಯ್ಯಾ
ಹೋಪ ಬಪ್ಪದು ಏನು ಒಂದಾದರು ಎನ್ನಿಂದ
ಕಾಪಾಲಿವರದ ಕಾರುಣ್ಯೊಂಕಾರಾ
ರಾಪು ಮಾಡುವೆ ನೀ ರಹಸ್ಯಮಾಡಿದ ಕಾರ್ಯ
ಕೋಪ ಸಲ್ಲದಯ್ಯಾ ಕೋದಂಡಪಾಣಿ
ಮಾಪುಪಿಡಿದು ಇನ್ನು ಅಳಿಯ ಕುಳಿತ ಬಳಿಕ
ಲೋಪ ಮಾಡುವದ್ಯಾಕೆ ಲೋಕದೊಳು
ಈ ಪರಿ ಎನ್ನ ಮನದ ಅಭಿಪ್ರಾಯ
ಗೋಪಾಲ ಸರ್ವಪಾಲಾ ಸರ್ವಇಷ್ಟಾ
ದ್ರೌಪದಿ ಮಾನದೊಡೆಯ ಗೋಪಾಲವಿಠ್ಠಲ
ತಾಪಸರ ಮನದಿ ಸಿಲ್ಕಿ ಅಗಲದ ದೇವಾ ॥ 1 ॥

ಮಟ್ಟತಾಳ

ನಿನ್ನದು ನೀ ನಿತ್ಯ ಎನ್ನದು ಅನಿತ್ಯ
ನಿನ್ನದು ಸ್ವಾಧೀನ ಎನ್ನದು ಪರಾಧೀನ
ನಿನ್ನಾನಂದ ನಿನಗೆ ನಿನ್ನಿಂದಾನಂದೆನಗೆ
ನಿನ್ನವನಾ ಆಧಿನಾಗೆ ಎನ್ನವ ನೀ ಎನಗೆ
ಎನ್ನದು ಸಕಾಮಾ ನಿನ್ನದು ನಿಷ್ಕಾಮಾ
ಎನ್ನ ಒಳಗೆ ನೀನೆ ನಿನ್ನ ಒಳಗೆ ನೀನೆ
ಅನ್ಯ ಅಪೇಕ್ಷ ಮಾತ್ರ ವೆಂಬೋದು ಎನಗೆ ದೋಷ
ನಿನ್ನ ಅಪೇಕ್ಷವೆ ಎನ್ನ ಪೋಷಣೆ ಅಲ್ಲೆ
ಎನ್ನ ನೀ ಮರೆದರೆ ನಿನ್ನ ನಾ ಮರೆವುವೆ
ಎನ್ನ ನೀ ತಿಳಿದರೆ ನಿನ್ನ ನಾ ತಿಳಿವುವೆ

ಎನ್ನ ನೀ ಮರದದಕನು ಭೋಗಾ
ಭಿನ್ನ ವಿಷಯದಲ್ಲಿ ಇನ್ನು ಪೋಗೋದೆ ಸಾಕ್ಷಿ
ಎನ್ನ ವ್ಯಾಪಾರವು ನಿನ್ನಾಧೀನ ವಿರಲು
ಅನ್ಯಕೆ ಎಳೆದು ಬನ್ನ ಬಡಿಸಾ ಅವದು
ಅನ್ಯಾಯ ನ್ಯಾನ ಇನ್ನೇನಿನ್ನೆನೊ
ಮನ್ನ ವಾಚ ಕಾಯ ಇನ್ನು ಎನಗೆ ದೇವ
ನಿನ್ನನ್ನೆ ಬೇಕೆಂಬೊ ಘನ್ನ ಆಶೆಯು ಬಹಳ
ಮನ್ನಿಸಿ ಬಿನ್ನಪ ಮನಕೆ ನೀ ತಾವೇಗಾ
ಸನ್ಮುನಿಗಳ ಪ್ರೀಯಾ ಗೋಪಾಲವಿಠ್ಠಲ
ನಿನ್ನ ನಲ್ಲದೆ ಬೇರೆ ಇನ್ನಾರನ ಕೇಳ್ವೆ ॥ 2 ॥

ರೂಪಕತಾಳ

ಎನ್ನ ಯೋಗ್ಯತೆ ಅರಿತು ಉಣಿಸೆನೆಂದರೆ ನೀನು
ನಿನ್ನ ಸಂಕಲ್ಪಕ್ಕೆ ಪ್ರತಿಕೂಲ ನಾನಲ್ಲ
ನಿನ್ನ ಭೃತ್ಯನು ನಾನು ನಿಜವೆಂಬೋದು ಇತ್ತೆ
ಎನ್ನ ಸ್ವರೂಪವು ದುಃಖ ಬ್ಯಾರಲ್ಲಲ್ಲಾ
ಚನ್ನಾಗಿ ಚಿದ್ರೂಪಿ ನಿರ್ಗುಣಿ ಜೀವಕ್ಕೆ
ಇನ್ನು ಶೋಕಂಗಳು ಆವಪರಿ ಉಂಟು
ಭಿನ್ನ ತ್ರಿಗುಣದಿಂದಾ ಘನ್ನ ಶೋಕಗಳೆಂಬ
ಇನ್ನು ಜಡಂಗಳು ಬನ್ನ ಬಡಿಸುವವೋ
ಎನ್ನ ಮನಸಿಗಿದು ನಿಜವು ತೋರುವದಿಲ್ಲ
ಇನ್ನು ಬಿದ್ದಲ್ಲಿಂದ ಚಲಿಸದೆ ಜಡಗಳು
ಮುನ್ನ ಚೇತನಗಳು ದಣಿಸಬಲ್ಲವೆ ದೇವಾ
ಇನ್ನು ಅವಕ್ಕೆ ಬೇರೆ ಅಭಿಮಾನ್ಯ ರುಂಟೆಂಬ್ಯಾ
ಎನ್ನಂತೆ ಅಸ್ವಾತಂತ್ರ ರವರಲ್ಲವೇ
ಇನ್ನೊಬ್ಬ ರಿನ್ನೊಂದು ಜಡ ಚೇತನಗಳಿಂದ
ಎನ್ನ ದಣಿಸುವರ ಕಾಣೆನಯ್ಯಾ ಸ್ವಾಮಿ
ಘನ್ನ ವೈಕುಂಠದಲಿನ್ನಾಗೊ ಸುಖಾ
ಇನ್ನಿಲ್ಲೆ ಕೊಡುವ ಸ್ವಾತಂತ್ರ ನಿನಗುಂಟಯ್ಯಾ
ನಿಂನ್ನಲ್ಲ ದಿನ್ನು ಸುಖ ದುಃಖಂಗಳು ಒಂದು

ಎನ್ನಯ್ಯ ಎನ್ನಯ್ಯ ವುಂಟೆ ಏ ದೇವನೆ
ಕಣ್ಣಿನೊಳಗೆ ಕಂಣ್ಣು ಕರ್ನದೊಳಗೆ ಕರ್ವ
ಬೆನ್ನಿನೊಳಗೆ ಬೆನ್ನು ಇನ್ನು ಕಾಲೊಳು ಕಾಲು
ಎನ್ನ ಆಕಾರ ದೊಳೆಲ್ಲ ವ್ಯಾಪಿಸಿ ಇಪ್ಪ
ಚಿನ್ಮುಮಯ ಜ್ಞಾನಾನಂದ ನಿರ್ದೋಷ ಪೂರ್ಣ
ಭಿನ್ನ ಕಾಮ ರಹಿತ ಗೋಪಾಲ ವಿಠ್ಠಲ
ನಿನ್ನವರನವಯ್ಯಾ ಬಿನ್ನಪ ಚಿತ್ತೈಸು ॥ 3 ॥

ಝುಂಪೆತಾಳ

ಇದೆ ವ್ಯಾಳ್ಯ ಇದೆ ಸಮಯ ಈಗಲೆ ನಿನ್ನಾಟ
ವದಿಗಿ ದೊರಕ್ಯದೆ ನಿನಗೆ ಒಳಿತಾಗಿ ನೋಡು
ಗದಗದನೆ ನಡುಗಿಸು ವುದರ ಹಸಿವೆಯ ಕೊಡಿಸು
ಒದರಿಸು ಎನಗಿನ್ನ ಆರನಾ ಕಾಣೆಂದು
ಕುದರಿಯಂತೆ ಕುಣಿಸು ಕುಟಲ ರೋಗಗಳ್ಹಚ್ಚು
ಒದಗಿ ನಡೆಯಾದಂತೆ ಇದ್ದಲ್ಲೆ ಕುಳ್ಳಿರಸೊ
ಮದುವುಗಳ ಮಾಡಿಸು ನದಿಗಳೊಳ ಮುಣಗಿಸು
ಮಧುರ ಅನ್ನವನುಣಿಸು ಸದಾಚಾರಿ ಎಂದೆನಿಸು
ಇದಕ್ಕೊಂದೆ ಅದಕ್ಕೊಂದೆ ಎನ್ನೊಂದಕೆ ಒಂದೆ
ಇದರ ಭೋಗಗಳೆಲ್ಲ ಭಿನ್ನ ಯನ್ನಿಂದಯ್ಯಾ
ತುದಿಗೆ ನಿರ್ಗುಣನಾಗೆ ವೊದಗೋದಾನಂದ ವ್ಯಕ್ತಿ
ಅದರ ಮೇಲೆ ಇನ್ನು ಎಲ್ಲಿ ಮಾಡಿಸಲಾಪ್ಯಾ
ಬದುಕು ಎನ್ನದು ಏನು ಕೆಟ್ಟು ಪೋಗುವದು
ಪದೋಪದಿಗೆ ವಿಸ್ಮೃತಿಇಂದ ದಣಿವೆ
ಅದೇ ಸಮಯದಲ್ಲಿ ಉದ್ಧರಿಸಬೇಕು
ಹೃದಯದೊಳಕೆ ನಿನ್ನ ನಿದರ್ಶನವನ್ನು
ಸದಾಕಾಲದಲ್ಲಿ ತಾ ಸಾಕುವ ಧೊರಿಯೆ
ಮದನ ಜನಕ ನಮ್ಮ ಗೋಪಾಲವಿಠ್ಠಲ
ಒದಗಿ ಬಪ್ಪ ಹರುಷ ಕ್ಲೇಶದಿ ನಿನ್ನ ತಿಳಿಸೊ ॥ 4 ॥

ತ್ರಿವಿಡಿತಾಳ

ಇಂದ್ರಿಯಗಳಿಂದಲಿ ಆಗುವ ಕರ್ಮವು
ದ್ವಂದ್ವ ವಾಗ್ಯುಂಟು ಕೃಷ್ಣದ್ವೈಪಾಯನ
ಒಂದಾರೊಳಗೆ ಒಂದು ಕೊಂದಿಸುತಲ್ಲೆಲ್ಲಿ
ಸಂದಿ ಸಂದಿಗೆ ಬಿಡದೆ ಎನ್ನ ಎಳೆದು
ಒಂದು ಯಿನ್ನ ವಿಷಯ ನಿಜವಸ್ತು ವಿರಲಾಗಿ
ಹಿಂದೆ ಮಾಡಿ ಅದರ ಹಿತವ ಅರಿಸದೆ
ಬಂಧಕವನು ಮಾಡಿ ಬಯಕಿ ಪುಟ್ಟಿಸಿ ಬಾಹಿರ
ಕುಂದು ವಿಷಯಕಿನ್ನು ಮೋಸಗೊಳಿಸಿ
ಅಂಧಕನ ಪಿಡಿದು ಆಟ ಆಡಿಸಿದಂತೆ
ಸಂದಳಿ ಅಂಗಡಿಗೆನ್ನ ನೂಕಿ
ಬಂಧು ಅಲ್ಲದವರ ಬಂಧು ಎಂದು ತಿಳಿಸಿ
ನಿಂದ್ರಲರಿಯದಾವಸ್ಥೆ ನಾ ನಿತ್ಯ ವೆಂದರಿವಿಸಿ
ಗಂಧ ವಲ್ಲದ್ದು ಎಲ್ಲ ಗಂಧವೆಂದರಿವಿಸಿ
ಛಂದ ವಲ್ಲದ ರಸವು ಛಂದವೆಂದು ತಿಳಿಸಿ
ಹಿಂದೆ ಮುಂದೆ ಕಾಣದಂತೆನ್ನ ಕುಳ್ಳಿರಿಸಿ
ಎಂದಿಗೆ ನಾಶವಿಲ್ಲದ ಜೀವನಿಗೆ
ಬಂದು ಹೋಗುತಿನೆಂಬೊ ಮೃತ್ಯು ಭಯಪುಟ್ಟಿಸಿ
ಅಂದಾಗಿ ನೀ ಬಿಡದೆ ಈ ಪರಿ ಮಾಡಿಸಿ
ಎಂದಿಗಾ ಜೀವರು ಹೊಂದುವರು ನಿನ್ನ
ಗಂಧ ಸುಳುದಂತೆ ಇದರ ಒಳಗೆ ಒಮ್ಮೆ
ತಂದು ಸ್ಮೃತಿಗೆ ನಿಜ ಇಂದ್ರಿಯಿಂದ ನಿನ್ನ
ಛಂದುಳ್ಳ ಗುಣಗಳು ಅನುಭವಕೆ ಬಂತೆ
ಅಂದಿಗೆ ಸಂದೇಹ ನಿವೃತ್ತಿ ಅಹೋದು
ಇಂದನ್ನಕ ನೋಡೋ ಈ ಬಟ್ಟೆ ಹಾಕೆಟ್ಟೆ
ಸಂದಿಲೀ ಇದ್ದನ್ನ ಈ ಪರಿ ಮಾಡಲು
ಅಂದಾವೆ ಅಂದಾವೆ ಅಪ್ಪ ಅಪ್ಪೈತ ಅಪ್ಪಾ
ವಂದಿಸಿ ಮೊರೆ ಇಟ್ಟೆ ಒಂದು ಅದರು ನಿ
ನ್ನಿಂದಿಲ್ಲಾ ದಿಲ್ಲಾ ವೆಂದು ಸಂದೆಹವನು ಬಿಟ್ಟು

ಸುಂದರ ಮೂರುತಿ ಗೋಪಾಲವಿಠ್ಠಲ
ತಂದೆ ನಿನ್ನ ಚಿತ್ತ ಬಂದದೆ ಮಾಡಯ್ಯಾ ॥ 5 ॥

ಅಟ್ಟತಾಳ

ಹೇ ಅಚ್ಚುತನೆ ಹೇ ಅನಂತನೆ
ಹೇ ಅದ್ಭುತನೆ ಹೇ ಅಗೋಚರನೆ
ಹೇ ಅಗಮ್ಯನೆ ಹೆ ಅಹೋರಾಜ
ಹೇ ಅದಿತಿಸುತ ಹೇ ಅಕ್ರೂರಪಾಲಾ
ಹೇ ಅಹಲ್ಯಾ ರಕ್ಷಕ ಹೇ ಅಂಬರೀಷ ಪಾಲಾ
ಹೇ ಅಜಮಿಳ ವರದ ಹೇ ಆರಕಾಣೆಂದ ಗಜರಾಜ ವರದನೆ
ಹೇ ಅನಿಮಿತ್ತ್ಯ ಬಂಧು ನಿತ್ಯ ನಿರಂಜನ
ಹೇ ಅಪ್ಪಾ ಹೇ ಅಯ್ಯಾ ಪೂತುರೆ ಪೂತುರೆ
ಹೇ ಅನಾದಿ ದೇವ ಆನಂದ ಪೂರ್ಣನೆ
ಹೇ ಅಘಟಿತ ಘಟಿತಾನಂತ ಐಶ್ವರ್ಯ
ಹೇ ಅಶ್ಚರ್ಯನೆ ಹೇ ಅಖಂಡಿತಾ
ಹೇ ಅರ್ಧಗರ್ಭ ಹೇ ಅಧೋಕ್ಷಜ
ಹೇ ಅಜ ಹೆದ್ದೈವ ನಾ ಆಜ್ಞಾ ನೀಪೂರ್ಣಾ
ಬಾ ಅಯ್ಯಾ ಕಾಯಯ್ಯಾ ತ್ರಾಹಿ ತ್ರಾಹಿ ಕೃಷ್ಣ
ನಾ ಅಲ್ಪ ನೀ ಪೂರ್ಣ ಭಳಿರೆ ಭಳಿರೆ ರಾಯಾ
ನೀ ಅಲ್ಲ ದಿಲ್ಲಿನ್ನು ಗೋಪಾಲವಿಠ್ಠಲ
ಬಾ ಆಶ್ರಿತಜನ ಬಂಧು ಭಕುತಪಾಲಾ ॥ 6 ॥

ಆದಿತಾಳ

ಪರರಿಗೆ ಹಿತವಾಗಿ ಯನ್ನಿಂದಲಿ ಇತ್ತೆ
ಇರಿಸು ಎನ್ನನು ಇತ್ತ ಧರಿಯ ಮ್ಯಾಲೆ ದೇವಾ
ಶರಣ ಜನರ ಹಿತವೆ ಎನ್ನ ಹಿತವು
ಶರಣರ ಆಪತ್ತೆ ಎನ್ನ ಆಪತ್ತಯ್ಯ
ಹರಿಯೆ ನಾ ನಿನ್ನಗಿನ್ನು ವಂದಿಸಿ ಮೊರೆ ಇಟ್ಟೆ
ತರುಳನ ಬಿನ್ನಪ ಮನಕೆ ತಾರೈ ದೇವಾ
ಧರಿಯ ಮೇಲನ್ನೆಷ್ಟ ಶರಣ ಜನರು ಉಂಟು

ನಿರುತ ಅವರಿಗಿನ್ನು ಎರಡೊಂದು ಗುಣದ
ಕರಕರೆ ಕ್ಲೇಶವೂ ಇರಂದತಲಿ ಮಾಡು
ಧರಣಿಯ ರಮಣ ತರುಳ ಸಲಗಿಯಲ್ಲಿ ಇನ್ನೊಂದು ಬೇಡುವೆ
ಕರುಣಿಸುವದುಚಿತವೆ ಆಗಿತ್ತೆ ಕರುಣಿಸು
ಸ್ಥಿರ ಎನ್ನ ಗುರುವಿನ ಇನ್ನು ಮೊದಲು ಮಾಡಿ
ಪರಿಪರಿ ಪರಿ ಇನ್ನೆಂತು ಉಂಟೋ
ಪರಿಹರಿಸವರಿಗೆ ಹರುಷದಲ್ಲಿ ಇಟ್ಟು
ಹರಹುವೊ ಎನ್ನಲ್ಲಿ ಸ್ಮರಣೆ ಪೂರ್ವಕವಾಗಿ
ದುರಿತ ಗಿರಿ ಕುಲಿಶ ದುಷ್ಟರ ಮರ್ದನ
ಶರಣ ರಕ್ಷಕ ಕರುಣಾಕರ ಸ್ವಾಮಿ
ಮರುದಂತರ್ಗತ ಗೋಪಾಲವಿಠ್ಠಲ
ಸರಿ ಬಂದದು ಮಾಡೊ ಶರೀರ ಒಪ್ಪಿಸಿದೆ ॥ 7 ॥
ಜತೆ
ಸಕಲ ಭಕುತರೆಲ್ಲ ಸುಖದಲ್ಲಿ ಇರಿಲೆಂಬೊ
ಕಕುಲಾತಿ ಎನಿಗೆ ಕರುಣಿಸೊ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 60** ರಾಗ : ಮಾರವಿ

ಚ್ಯುತಿರಹಿತ ವಾದಂಥ ಗತಿಯ ಬೇಕೆಂಬವರಿಗೆ
ಜಿತ ಜ್ಞಾನ ಭಕುತಿ ವಿರಕುತಿಯು ಬೇಕು
ಪತಿವೃತ ತಾನೆಂಬೋದು ಮನಕೆ ಲೇಶ ತಾರದೆ
ಪತಿತ ನಾಗಿರಬೇಕು ಅಂತರದಿ
ಪತಿತ ಬಾಹ್ಯರ ಕಂಡು ಪರವೆ ಮಾಡದೆ ತನ್ನ
ಮತಿಯಲಿ ತಿಳಿದು ಕೊಂಡು ಮೌನಧರಿಸಿ
ಅತಿ ಆಯಾಸವು ಬಡದೆ ಅಲ್ಪ ಬಂದರು ತಾ ಪೂ
ರ್ಣತಿಯನು ಮಾಡಿಕೊಂಡು ತುಷ್ಟನಾಗಿ
ಮತಿ ಎರಡು ಪ್ರಕಾರ ಮಾಡದೆ ಸಗುಣದಿಂದ
ಅತಿ ವೇಗ ಬಿಡಿಸಿ ನಿರ್ಗುಣಕೆ ನಿಲ್ಲಿಸಿ
ಹಿತಾಹಿತದ ದಾರಿ ವಿವರನ್ನೆ ಅರಿದು
ಸತಿಸುತರರ ಮನಕೆ ಸಿಕ್ಕದಲೆ

ವ್ಯಥೆ ಬಂದ ಕಾಲದಲ್ಲಿ ಹರುಷ ಮನಕೆ ತಂದು
ಅತಿಸುಖ ಬಂದಾಗಲೂ ವ್ಯಥಿಯ ತಿಳಿದು
ಸತತ ನಿತ್ಯವಾದ ವಸ್ತ ಆವದು ಅದಕೆ
ಪ್ರತಿಬಿಂಬ ತಾನು ಎಂದು ತಿಳಿದು ಕೊಂಡು
ಸ್ವತಂತ್ರಾಸ್ವತಂತ್ರ ವಿವೇಕವನ್ನೆ ತಿಳಿದು
ಸ್ವಾತಂತ್ರ ಧೃಡವ ತನ್ನಲ್ಲಿರುವ ನೋಡಿ
ಚತುರ ವಿಧವುಪಾಯದಿಂದ ತನ್ನ ಸ್ವರೂಪ
ಚ್ಯುತನಲ್ಲವೆಂದು ತನ್ನ ಸ್ಥಿತಿಯ ನರಿತು
ಪತನಾಗೊದೆಲ್ಲ ತನಗೆ ಬಂದ ದೇಹಗಳೆಂದು
ಹಿತಮಾಡದೆ ಅಲ್ಲಲ್ಲಿ ಮಮತೆ ಬಿಟ್ಟು
ತತುವ ವಿವೇಕ ಜ್ಞಾನವುಳ್ಳವನಾಗಿ ಶಾ
ಶ್ವಿತವೆಂಬ ಜ್ಞಾನ ಸಂಸಾರದಲ್ಲಿ ಬಿಟ್ಟು
ಕೃತು ಮೊದಲಾದ ಕರ್ಮ ಹರಿ ಮಾಡಿ ಮಾಡಿಸಿದ
ಸ್ಥಿತಿಯನರಿದು ತನ್ನ ಕೃತಿಯ ಮರೆದು
ದ್ವಿತಿಯ ತೃತಿಯ ತತ್ವ ಚತುರ ವಿಂಶತಿದಶ
ತೃತಿಯ ಮಂಡಲ ತತ್ವ ಭಾಗವರಿದೂ
ಅತಿದೂರನಾಗಿ ಅದಕ್ಕೆ ತತು ವಿಲಕ್ಷಣ ತನ್ನ ಜಡವಸ್ತುವಿನಕಿಂತ
ಶತಗುಣ ವಿಲಕ್ಷಣನೆಂದು ಮತಿಮಾತ್ರದದರಲ್ಲಿ
ಸತತ ತಾನಗೆ ಶಾಶ್ವತ ವಸ್ತುವಿನ್ನು
ಜಿತವಾಗಿ ಪಿಡಿದು ಕೊಂಡು ಪತಿತ ಪಾವನನಾದ ಗೋಪಾಲವಿಠ್ಠಲನಲ್ಲಿ
ರತಿ ವುಳ್ಳವನಾದರೆ ಪಥ ಪೊಂದುವವನು ಗತಿಗೆ ॥ 1 ॥

ಮಟ್ಟತಾಳ

ಪ್ರಥಮ ಸಾಧನ ಜೀವ ಅಸ್ವತಂತ್ರ
ದ್ವಿತಿಯ ಸಾಧನ ಹರಿ ಸ್ವತಂತ್ರ ಸ್ಮೃತಿ
ತೃತಿಯ ಸಾಧನ ಜಡ ಚೇತನ ಜ್ಞಾನ
ಚತುರಸಾಧನ ಪೂರ್ಣ ಅಪೂರ್ಣವು
ಮತಿ ಇಂದಲಿ ಇದನೆ ಮತ್ತೆ ವಿಸ್ತರಿಸಲು
ಶತ ಸಾಹಸ್ರವು ಆಗಿ ಸಾಧನ ಕಾಣಿಪವು
ಸತುವ ಜೀವ ಮಾತ್ರಕ್ಕೀಸಾಧನ ಹೊರ್ತು

ಗತಿ ಆಗದು ಕಾಣೊ ಎಷ್ಟು ಸಾಧನ ಮಾಡೆ
ಗತಿ ಆಗತಿ ಗಮನ ಸ್ವರ್ಗ ನರಕಗಳಲಿ
ಮಿತಿ ಇಲ್ಲದೆ ಪುನಃ ಸುತ್ತುತಲೆ ಇರುವ
ಚ್ಯುತದೂರ ಚಲುವ ಗೋಪಾಲವಿಠ್ಠಲ
ಸ್ವತಃ ಒಲಿದರೆವೊಲಿವ ಯತನಕ್ಕಗೋಚರಾ ॥ 2 ॥

ರೂಪಕತಾಳ

ಕರ್ತು ನಾನೆಂದರೆ ದೋಷ ಫಲವು ಪ್ರಾಪ್ತಿ
ಕರ್ತು ನಾನಲ್ಲೆಂದರೆ ಸಾಧನಕ್ಕೆ ಫಲವಿಲ್ಲ
ವ್ಯರ್ಥ ಸುಮ್ಮನಿಪ್ಪುವದಕ್ಕಿಂತ ಜಡನಲ್ಲ
ಕರ್ತ ಜೀವೆಂಬುವದು ಶ್ರುತಿ ಸ್ಮೃತಿಗಳಲಿ ಸಿದ್ಧಾ
ಕರ್ತ ಜೀವೆಂಬುವದು ಜೀವ ಸ್ವಾಧೀನಲ್ಲಾ
ಕರ್ತು ನಿಷ್ಠಾ ಧರ್ಮ ಕೊಟ್ಟರಿವರಿಗೆ ಉಂಟು
ಕೊರ್ತೆ ಮಾಡುವನಲ್ಲ ಕೊಟ್ಟ ಕರ್ತುತ್ವಂನ್ಯಾ
ನಿಷ್ಟವಾಗಿ ಜೀವ ಕ್ಷತ್ತಿ ತಾ ಇಪ್ಪದು
ಸ್ಫೂರ್ತಿ ಬಂದರೆ ಅರಿವಾ ಸ್ಫೂರ್ತಿ ಬರದಿರಿ ಮರೆವ
ಗಾತ್ರಹಸಿದರೆ ಆಳುವ ಗಾತ್ರ ತುಂಬಲು ನಲಿವಾ
ಕೀರ್ತಿ ಅಪಕೀರ್ತಿ ತನ್ನ ದೆಂದ್ಹಿಗ್ಗುವಾ
ವ್ಯರ್ಥ ಇದರಿಂದ ಆನಂದ ಆಚರಿಸುವ
ಸ್ವಾರ್ಥ ಸುಖವ ನರಿಯಾ ಹರಿ ಕರ್ತುಕನಾಗಿ
ಸ್ಫೂರ್ತಿ ತಂದಿತ್ತರೆ ಸುಖವೆ ಬಡುವಾ
ಮರ್ತರೆ ಮರೆವುವನು ಸ್ವಾರ್ಥ ಪುಟ್ಟದೊ ಹರಿಯು ತಿಳಿಸದಿರಲು
ಕರ್ತು ಕಾರ್ಯ ತಾ ವಿಷ್ಣು ಗೋಪಾಲವಿಠ್ಠಲ
ಪಾತ್ರಾಪಾತ್ರವರಿತು ಫಲವು ನೀವಾ ॥ 3 ॥

ಝಂಪೆತಾಳ

ಅನಾಧಿ ಇಂದಲೆ ಹರಿ ತನ್ನ ಸ್ವಾತಂತ್ರ್ಯ
ನಾನಾ ಜೀವರಲಿ ವಿವರಮಾಡಿ ಇಟ್ಟಿರುವ
ತಾನು ಅಭೇದನಾಗಿ ಸರ್ವಂತರದಿದ್ದು
ನ್ಯೂನಾಧಿಕ ವೆನಿಪಾ ಅಧಿಕಾರನುಸಾರ
ಶ್ರೀನಾರಿಯಲ್ಲಿ ಶತ ಸಹಸ್ರ ಭಾರವು ನಿಟ್ಟ

ಅನಿಲಾನಲ್ಲಿ ಶತವು ಇಟ್ಟು
ತಾನು ಇಟ್ಟನು ರುದ್ರನಲ್ಲಿ ತದರ್ಧವು
ನ್ಯೂನ ಇದರೊಳಗರ್ಧ ಇಂದ್ರಗಿತ್ತಾ
ಅನಿಮಿಷ ಗಂಧರ್ವ ಋಷಿ ಕ್ಷಿತಿಪರರು ಕ್ರ
ಮಾನುಸಾರವು ಇತ್ತಾ ಮಾನುಷ್ಯರಿಗೆ
ಏನಿತ್ತ ಸ್ವಾತಂತ್ರ ತಾನೆ ಇಟ್ಟು ಕೊಂಡು
ನಾನಾ ಪರಿಯೆ ನಾಟಾ ನಾಡಿಸುವ
ಆನಿಯಲ್ಲಿ ಇದ್ದು ಗೋಣಿಯ ಹೊರಿಸುವ
ಹೇನಿನಲ್ಲಿದ್ದರು ತೃಣವು ಭಾರಾ
ಇನಿತ ಘೆಚ್ಚಿ ಗೊಡ ಅಲ್ಲಲಿ ಸ್ವಾತಂತ್ರ
ತಾನು ಸಮ ಸರ್ವತ್ರ ದ್ರವ್ಯ ಪೂರ್ಣ
ಪ್ರಾಣಿಗಳಿಗೆ ಮಾತ್ರ ತಿಳಿಯಗೊಡದೆ ತನ್ನ
ತಾನು ಬಡಿದಾಡಿಸುವ ಜೀವಿಗಳನ
ತಾನು ಜ್ಞಾನ ಬಲ ಪೂರ್ಣನು ಆದರು
ಪ್ರಾಣಿಗಳ ಸ್ಥಿತಿಯ ಅರಿತು ಚರಿಯ ಮಾಳ್ಪ
ಆನಂದ ಸುಖ ಸಾಂದ್ರ ಗೋಪಾಲವಿಠ್ಠಲ
ಜ್ಞಾನಿಗಳಿಂದೀಗೆ ತಿಳಿಯ ಪಡುವಾ ॥ 4 ॥

ತ್ರಿವಿಡಿತಾಳ

ನೋಡು ಕರ್ಮಗಳಿನ್ನು ಅನಂತವಾಗ್ಯುಂಟು
ಮಾಡಿ ಪೂರೈಪದೆ ಅಂತೆ ಇಲ್ಲ
ಮಾಡಿದೆನೆಂಬ ಅಹಂಕಾರ ಬಂದೊದಗಿದರೆ
ಮಾಡಿದವು ನಷ್ಟ ಮೇಲಿನ್ನು ದೋಷ
ಮಾಡದಿಪ್ಪವೆ ನಡಿಯದ ಕರ್ಮ ಮಾಡೋದಕಿಂತ
ಮೂಢನಾಗಿಪ್ಪುವದೆ ಜಡನು ಲೇಸು
ನೋಡು ಸಕಲ ಕರ್ಮ ಆವಾದರೊಳು
ಅಡಕ ಮಾಡಿದರೆ ಪುರುಷ ಕೊಡುವಂಥದೂ
ಮಾಡು ಹರಿ ಕಥಾಶ್ರವಣಾಖ್ಯ ಕರ್ಮವು ಮನಕೆ
ಕೂಡಿದರೆ ಪುನಹ ಪುನಹ ಮಾಡಬೇಕೊ
ಮಾಡಿದಂತೆ ಮನನಮಾಡಿ ಮನದಲ್ಲಿ ಗುರುತು

ಮಾಡಬೆಕಿನ್ನು ಮಹಾ ಶ್ರದ್ಧೆಯಿಂದ
ಮಾಡಿ ಮಾಡಿಸುವಂಥ ಹರಿಯ ತಿಳಿದರೆ ಕೈಯ್ಯ
ಗೂಡುವದು ಒಂದಕಾನಂತ ತಿಳಿಪಾ
ಮಾಡಿ ಮಾಡಿ ಹೀಗೆ ಅರ್ಪಣ ಬುದ್ಧಿಯಲಿ
ಮಾಡದೆ ಕರ್ಮ ಫಲ ಕೊಡುವವಲ್ಲಾ
ನೋಡು ಒಂದು ಜನ್ಮಶ್ರವಣವ ಮಾಳ್ಪ
ನೋಡು ಒಂದು ಜನ್ಮ ಮನನ ಮಾಳ್ಪ
ನೋಡು ಶತ ಜನ್ಮವು ನಿಧಿ ಧ್ಯಾಸನವು ಮಾಡಿ
ನೋಡುವ ಸಂಪ್ರಜ್ಞಾ ಸ್ಥಿತದಿ ಹರಿಯ
ಮಾಡುವನು ಆ ಮೇಲೆ ಅಸಂಪ್ರಜ್ಞಾ ಸಮಾಧಿ
ಕೂಡುವನು ಅನ್ಯ ಎಚ್ಚರವ ಮರೆದು
ನೋಡುವ ಜನರಿಗೆ ಜಡನಂದದಿ ಕಾಂಬಾ
ಮಾಡನು ಬಾಹಿರ ವಿಷಯದಲ್ಲಿ ಮನವಾ
ಪಾಡಿದವರ ಪ್ರಾಣ ಗೋಪಾಲವಿಠ್ಠಲ
ನೀಡುವನು ಗತಿ ಅವರ ಯೋಗ್ಯತರಿತು ॥ 5 ॥

ಅಟ್ಟತಾಳ

ತಿಳುವನಾಗಲಿಬೇಕು ತನಗಿಂದುತ್ತಮರಿಂದ
ತಿಳಿದಾಡುತಿರಬೇಕು ತನ್ನ ಸಮಾನಿಕರಿಂದ
ತಿಳಿಯ ವೇಳಲಿಬೇಕು ತನಗಿಂದವರಾರಿಗೆ
ತಿಳಿದವರವರ ಸ್ಥಿತಿಗಳು ಅರಿದಿನ್ನು
ತಲೆವಾಗಿ ಸತ್ವರಿಗಭಿಮುಖವಾಗಿ ಸಂಚರಿಸು
ತಲಿರಬೇಕು ಚಲಿಸದೆ ನೀಚರ್ಗೆ
ಆಲ್ಪರಿಯದೆ ಅರ್ಥ ಬಲವಂತರ ಕಂಡು
ಹಳೆದು ತನ್ನ ನಿಜ ಬಡತನ ಪೇಳದೆ
ಘಳಿಸಿ ದ್ರವ್ಯದಿ ಪೂಜೆ ಹರಿಯ ಒಲಿಸೆನೆಂಬ
ಕಳವಳವನು ಬಿಟ್ಟು ಮಲರಹಿತನಾಗಿ
ಸಲಿಲದಿಂದಲೆ ಹರಿ ಸಂತೋಷ ಬಡಿಸಿನ್ನು
ಕಿಲಿಕಿಲಿ ನಗುತಲಿ ದುಷ್ಟರ ಎದುರಿಗೆ
ಶಿಲುಕದೆ ಅವರಿಂದರ್ಚನೆ ಒಮ್ಮೆ ಆದರೂ
ಬಲರಹಿತರ ಬಳಿಯಲಿ ಇದ್ದ ತನ್ನಭಾಗ

ತಿಳಿದುಕೊಂಡು ಹರಿಗೆ ಅರ್ಪಣೆಮಾಡಿ
ಜಲದಲ್ಲಿ ಇದ್ದ ಕಮಲದಂತೆ ಸಂಸಾರ
ಸುಳಿಗೆ ಸಿಕ್ಕದೆ ಬಯಲಿಗೆ ಬೀಳೊ ಬಗೆ ಇದೇ
ಮಲತ ಮಲ್ಲರ ಗಂಡ ಗೋಪಾಲವಿಠ್ಠಲ
ಸುಲಭನು ಈ ಪರಿ ತಿಳಿವಿಕಿದ್ದವಗೆ ॥ 6 ॥

ಆದಿತಾಳ

ದ್ವೇಷಿ ಯಾದವರಿಗೆ ದ್ವೇಷಿಯಾಗಿರುವ
ದಾಸನಾದವರಿಗೆ ಪೊಷಿಯಾಗಿರುವ
ದೋಷರಹಿತ ನೆನ್ನ ದೊಷ ಕೆಡಿಸುವ
ನಾಶರಹಿತ ನೆನ್ನೆ ನಾಶ ದೇಹವ ನೀಯಾ
ದೋಷಕ್ಕೆ ಕ್ಲೇಶ ತಾ ಉಣಿಸಿ ಬಿಡುವದು
ದ್ವೇಷಕ್ಕೆ ದುಃಖ ಶಾಶ್ವಿತೆವೆಂದೆಂದು
ದೋಷಕ್ಕೆ ಪ್ರಭೇದ ನಾನಾ ಬಗೆ ಉಂಟು
ದೋಷವಲ್ಲದೆ ನೋಡು ಅನ್ಯತ ವೆಂಬೋದು
ಈ ಸಮಸ್ತ ಜನ ಬಿಡದಲೆ ಆಡೋದು
ನಾಶವಿಲ್ಲದೆ ಭೇದ್ಯ ಭೇದ್ಯ ಜೀವರಿಗಿತ್ತ
ನಾಶನಾದೆ ನಲ್ಲ ಯೆಂದನುವದು ತಾನು
ಮೃತ ಕಾಣತ್ವಾದಿಗಳನೆಲ್ಲ ತನಗ
ಶಾಶ್ವತ ವೆಂದು ತಾ ಕ್ಲೇಶವ ಬಡುವದು
ನಾಶ ತಿಳಿದು ತನ್ನ ತಾನೆ ಭೇದಿಸಿ ಕೊಂಡು
ಮೋಸ ಹೋಗುವ ತನ್ನ ವಾಸಿಯಾ ಅರಿಯದಾ
ದೋಷ ಇನ್ನಿದರಿಂದೆ ಹೇಶಿ ಸಂಸಾರದಿ
ಬೇಸರದಲೆ ಇದ್ದು ಬೆಂದು ಬೆಂಡಾಗುವ
ಎಸೇಸು ಜನುಮವು ಬಂದರು ದು–
ರ್ವಿಷಯ ದಾಸಿಯ ಬಿಡದಲೆ ಲೇಸುದೊರಿಯದಿನ್ನು
ಶ್ರೀಶನ ಕರುಣವು ಸಂಪಾದಿಸಲಾಯಿತೆ
ಏಸೇಸು ಜನುಮದಿ ಮಾಡಿದಘವು ತೂಲ
ರಾಶಿಗೆ ವನ್ಹಿ ಸ್ಪರ್ಶವಾದಂತೆ, ವಿ
ನಾಶನ ವಾಗೋವು ದೋಷಕಾರ್ಯಗಳೆಲ್ಲ

ಭಾಸುರ ಮೂರುತಿ ಗೋಪಾಲವಿಠ್ಠಲ
ಶಾಶ್ವತನಾಗಿನ್ನು ಸಾಕುವ ಬಿಡದೆ ॥ 7 ॥

ಜತೆ

ಹರಿ ಕರ್ತೃತ್ವ ತಿಳಿದು ತಾರತಮ್ಯ ಪಂಚಭೇದ
ಅರಿದವರಿಗೆ ಒಲಿವ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 61** ರಾಗ : ಭೈರವಿ

ದೀನ ರಕ್ಷಕ ನಿನ್ನಧೀನದವ ನಾನು
ದಾನ ಬೇಡಿದೆ ನಾ ಧರ್ಮವಂತ
ಪ್ರಾಣಿ ಮಾತ್ರಕೆ ಹಿಂಸೆ ಪಾಪವೆನ್ನಿಂದನ ಬೇಡ
ನಾನಾಜೀವರೆಲ್ಲಿ ನಿನ್ನಂತೆ ತಿಳಿಸೊ
ಗೇಣು ಒಡಲಿಗಾಗಿ ಗೆದ್ದು ಪೋಗುವ ಮಾತು
ಏನಾದರೇನು ಎಂದೆಂದಿಗೂ ಬೇಡ
ಗಾಣಿಗ ತಿಲವ ಪಿಡಿದು ಗಟ್ಟಿಸಿ ತೈಲತೆಗೆದು
ದಾನವ ಮಾಡಿದಂತೆ ಧರ್ಮವಲ್ಲೆ
ಮಾನಸದೊಳಗೆ ನಿನ್ನ ಮೂರುತಿ ಎನಗೆ ತೋರಿ
ಹೀನ ಕರ್ಮಗಳೆಲ್ಲ ಹಿಮ್ಮೆಟ್ಟಿಸೋ
ಶ್ರೀನಿವಾಸ ರಂಗ ಗೋಪಾಳವಿಠ್ಠಲ
ಕಾಣೆನೋ ನೀನಲ್ಲದ ರೊಬ್ಬರಿನ್ನೆಂದಿಗೆ ॥ 1 ॥

ಮಟ್ಟತಾಳ

ಮಾಯಾಧಾರನ ಮಾಯಾ ತಿಳಿಯದನಕಾ
ಮಾಯಾವ ನೀಗೋ ಉಪಾಯವ ಬಲ್ಲೆನೆ
ಮಾಯಾ ಪೊಂದಿಸುವದು ನಿನ್ನ ಆದೀನವೊ
ಮಾಯಾ ಬಿಡುವದು ನಿನ್ನ ಆಧೀನವೊ
ಕಾಯಾ ಕ್ಲೇಶವಬಟ್ಟು ಕರ್ಮವು ಮಾಡಿದರೆ
ರಾಯಾ ನಿನ್ನ ಒಲಿಮೆ ಆಯಿತಾಗುವದೇ
ಮಾಯಾರಹಿತ ದೇವ ಗೋಪಾಲವಿಠ್ಠಲನ
ಪಾಯಿಸ ತುಪ್ಪೆನ್ನಂಥ ನಾಯಿಗೆ ದೊರಕುವ್ಯಾ ॥ 2 ॥

ತ್ರಿವಿಡಿತಾಳ

ಗೋದಿಯ ಹೊಲದೊಳಗೆ ಹಾದಿ ದೊರಕಿದರೆ
ಆದರದಿ ಮನೆ ಮನೆಗೆ ಹೋಗಿ ಔತನ ಪೇಳಿ
ಭೂದೇವ ವೇಲೆ ಭಕ್ಷ ಸಂಖ್ಯೆಯ ಬರದು
ಪೋದ ಪೋದ ಜನಕೆ ಉಣಿಸಿದನೋ
ಮಾಧವ ಗಿನ್ನ ಸಾಧಿಸುತ ಸ್ವಲ್ಪ
ಆದಿ ತೆಂತು ಇನ್ನು ತಿಳಿಯದಲೆ
ವಾದಿಸುತಲಿ ತತ್ವ ವರದೊರದು ಪರರಿಗೆ
ಬಾಧಿಸಿ ಬೋಧಿಸ ಪೇಳಿದೆನೋ
ಆದದ್ದು ಇದರೊಳಗೆ ಒಂದಾದರು ಕಾಣಿ
ಓದನಕೆ ಉಪಾಯ ಆಯಿತೆಲ್ಲಾ
ಶ್ರೀದೇವಿ ಅರಸ ಗೋಪಾಲವಿಠ್ಠಲ ನಿನ್ನ
ಪಾದ ಕಮಲ ನಿರುತ ಸ್ವಾದವೆನಗೆ ತೋರೋ ॥ 3 ॥

ಅಟ್ಟತಾಳ

ಇಂದು ಎನ್ನೊಳಗೆ ನೀ ಬಂದು ನಿಂದಿಯೊ ದೇವ
ಅಂದು ನಾ ನಿನ್ನವ ಇಂದು ನಿನ್ನವನೆ
ಒಂದಕೆ ಎನಗೊಂದು ಭೌತಿಕ ದೇಹವ
ಛಂದದಲಿತ್ತು ದೂರದಿಂದ ನೋಡುತಲಿದ್ದು
ಅಂದವು ನಿನಗಿದು ಆಟವಾಗಿದೆ ಒಂದು
ಇಂದಿರ ಪತಿ ಎಮ್ಮ ಕುಂದುಗಳೇನಯ್ಯಾ
ಹಿಂದು ಇಂದು ಮುಂದು ಎಂದೆಂದಿಗೆ ನಿನ್ನ
ಪೊಂದಿದವರ ಮನೆ ಕಂದ ನಾನಯ್ಯ ದೇವಾ
ಕಂದರ್ಪ ಜನಕ ಗೋಪಾಲವಿಠ್ಠಲ ನಿನ್ನ
ಸಂದರುಶನದಿಂದ ನಂದವ ಬಡಿಸು ॥ 4 ॥

ಆದಿತಾಳ

ಬೇಡುವ ದಾನಂತ ನೀಡುವ ನೀನೊಬ್ಬ
ಮಾಡುವಿ ಕರುಣವು ಮಾಡಿದರಿತು ಇನ್ನು
ಬೀಡುವಿ ನೀ ಭಕುತರನ ಭಕುತಿಯನು

ಮಾಡುವ ಸ್ವಾತಂತ್ರ ಕೊಡುವದೆಮಗಿನ್ನು
ನೀಡಿದ ರೆನಗುಂಟು ನೀಡದಿದ್ದರೆ ಇಲ್ಲ
ಕೋಡಗನ ಕೊರವ ಆಡಿಸಿದಂತೆ ನೀ
ನಾಡ ವಿಷಯಂಗಳಿಗೆ ಓಡಿ ಆಡಿಸಿ ಎನ್ನ
ಕೇಡು ಮಾಡಿಸಿ ದೂರ ನೋಡುವಿ ಕರುಣದಿ
ಗಾಢಾ ಅಹಂಹಾರವು ನೀಡದಲೆ ಎನ್ನಲ್ಲಿ
ಕಾಡೋ ದುರಿತ ಹೋಗಲಾಡಿಸಿ ಪೊರೆ ಎನ್ನ
ನಾಡ ದೈವರ ಗಂಡ ಗೋಪಾಲವಿಠ್ಠಲ
ಬೇಡುವೆನಿನ್ನನು ಬೇಡೆನೋ ಅನ್ಯರ ॥ 5 ॥

ಜತೆ

ಸ್ವತಂತ್ರ ನೀನು ಅಸ್ವಾತಂತ್ರತರ ನಾನು
ದಾತರ ದಾತ ಗೋಪಾಲವಿಠ್ಠಲ ಪೊರೆಯೊ ॥ 6 ॥

ಧ್ರುವತಾಳ **ಸುಳಾದಿ 62** ರಾಗ : ಭೈರವಿ

ಹರಿಯೆ ಸರ್ವೋತ್ತಮ ಹರಿಮೆ ಮೂಲದೈವ
ಹರಿ ಕ್ಷರಾಕ್ಷರದಿಂದ ವಿದೂರ ದೂರಾ
ಹರಿ ಜಗದ್ವ್ಯಾಪಕ ಸಕಲರಿಂದಲ್ಲಿ ಭಿನ್ನ
ಹರಿ ಮೂಲರೂಪ ಅವತಾರ ಅತ್ಯಂತ ಐಕ್ಯ
ಹರಿ ಚಿದಾನಂದ ಚಿನುಮಯ ಚಿದ್ರೂಪ
ಹರಿ ಸತ್ಯಸಂಕಲ್ಪ ಉತ್ಪತ್ತಿ ನಾಶ ದೂರ
ಹರಿ ನಿರ್ಜಿತ ಮಾಯಾ ಲೋಕ ಮೋಹಕ ದೇವ
ನಿರಾಶ್ರಯಾನಂದ ಗೋಪಾಲ ವಿಠ್ಠಲ
ಸರಸಿಜ ಜಾಂಡದ ಧೊರೆ ಸುರತರುವೆ ॥ 1 ॥

ಮಟ್ಟತಾಳ

ಪಂಚ ಮುಖನ ಕುರಿತು ಕೃಷ್ಣ ತಪಸುಮಾಡಿ
ಪಂಚ ಬಾಣನ ಪೆತ್ತ ನೆಂಬಿರೆಲಲಾಹಾ
ವಂಚಕ ಶ್ರೀಹರಿ ಪ್ರಳಯದಿ ವಟದೆಲಿಯೆ
ಮಂಚದ ಮೆಲೋರಗಿ ತದನಂತರದಿ ವಿ
ರಿಂಚಿಯನು ಪಡೆದ ವರ ವಾರದು ವೇಳೊ

ಕೆಂಚೆ ಲಕುಮಿಯರಸ ಉಪನಯನವಿಲ್ಲದೆ
ಮುಂಚೆ ಮಕ್ಕಳ ಪಡದದು ಜಗವರಿಯದೆ ಮರಳೇ
ಪಂಚ ಏಕದಶ ಸಾಹಸ್ರ ಸ್ತ್ರೀಯರ ಪತಿ
ಪಾಂಚಾಲಿಯ ವರದ ನಿತ್ಯ ಬ್ರಹ್ಮಚಾರ್ಯೆಂದು
ಪಂಚತ್ವವ ಐದಿದ ತರುಳ ಪರೀಕ್ಷಿತಗೆ
ಪಂಚ ಪ್ರಾಣಗಳಿತ್ತ ಅಪ್ರಾಕೃತ ದ್ವಿ
ಪಂಚೇದ್ರಿಗಳು ಶ್ರೀ ಹರಿಗೆ ಜನನ
ಪಂಚತ್ವವು ನಾಶ ಪ್ರಾರಬ್ಧ ಆಗಾಮಿ
ಸಂಚಿತಗಳ ದೂರ ಶುಕ್ಲ ಶೋಣಿತದ ಪ್ರ
ಪಂಚ ಎಂದಿಗೆ ಇಲ್ಲ ನರ ಪಂಚಾನನ
ಮಿಂಚುತಲಿದೆ ಮಹಿಮೆ ಆನಂತ ವೇದಾವಳಿಗೆ
ವಂಚನೀಯನ ತೋರಿದ ಅಸುರ ಮೋಹನಾರ್ಥ
ಪಂಚಮುಖ ಹನುಮಂತನ ಪಿತಾ ಗೋಪಾಲವಿಠ್ಠಲನ
ವಂಚನಿಲ್ಲದೆ ಸ್ಮರಿಸಲು ಸಂಚಿತಾಗಾಮಿ ತರಿವಾ ॥ 2 ॥

ರೂಪಕತಾಳ

ಶ್ರೀಧವ ಹರಿಯ ಮತ್ಸ್ಯಾವತಾರಗಳು
ಮೇದಿನಿ ವೊಳಗೆ ಪ್ರಾಕೃತ ವೆಂಬರಿ
ಶ್ರೀ ದೇವ ವದನದಿ ವಿಶ್ವ ತೋರಿಸಿದಾಗ
ಛೇದಿಸದೆ ಪ್ರಾಕೃತಿ ಶರೀರ ವಾದರೆ
ಭೇದ ಭೇದವ ತೋರಿದ ಅಸುರ ಮೋಹನಾರ್ಥ
ಭೇದ್ಯ ಭೇದ್ಯ ಆ ದೇಹ ಪ್ರಾಕೃತ ವಾದಡೆ ಅಜ್ಞಾನ
ಖೇದ ಕ್ಕೆ ಕಾರಣ ಪೂರ್ಣತ್ವ ಕ್ಕೆ ಹಾನಿ
ವೇದಾವಳಿಗಳು ಪೂರ್ಣ ನೆಂದು ಪೊಗಳಲಿವಕೊ
ಸಾಧು ಜೀವರಿಗೆ ಈ ಪರಿಜ್ಞಾನ ಸಲ್ಲದು
ಮೋದ ತೀರ್ಥರ ಉಕ್ತಿ ವಿರೋಧ ಈ ಪರಿಜ್ಞಾನ
ಆದಿ ನವವಿಧ ದ್ವೇಷದೊಳು ಇದು ಒಂದನ್ನ
ಯಾದವ ಕೃಷ್ಣನು ತಪಸು ಮಾಡಿದ್ದು ಸತ್ಯ
ವಾದರೆ ಪ್ರಾಕೃತ ಶರೀರ ಆದಂತೆ
ವೇದಾಂತ ವೇದ್ಯ ಗೋಪಾಲವಿಠ್ಠಲರೇಯಾ
ಭೇದ ನಲ್ಲವೊ ಮೂಲ ಅವತಾರಕ್ಕೆ ಐಕ್ಯ ॥ 3 ॥

ಝಂಪೆತಾಳ

ಹಿರಣ್ಯಕಶ್ಯಪನ ಸಂಹಾರ ಮಾಡಿ ನರಸಿಂಹ ಇರು
ತಿರಲು ಆಗ ಹರ ಶರಭರೂಪದಿ ಬಂದು
ನರಹರಿಯ ಕೂಡ ಯುದ್ಧವ ಮಾಡಿ ಜಯಿಸಿದ
ಹರನೆ ಸರ್ವೋತ್ತಮನೆಂದು ನುಡಿವಿ
ಶರಭಂಜೆಯ ಪೇಳುವದು ಒಂದೇ ಪುರಾಣದಲ್ಲಿ
ದುರುಳ ತಾಮಸ ಜೀವರ ಗೋಸುಗ
ನರಸಿಂಹ ಜಯ ಪೇಳುವ ಪುರಾಣವು ಸಪ್ತ
ವರವೇದ ಶಾಸ್ತ್ರ ಸರ್ವತ್ರದಲ್ಲಿ
"ಹರಿಂ ಹರಂತಂ ಮನುಯಂತಿ ದೇವಾ"
ಅರಿಯೊ ಈ ವೇದಾರ್ಥ ಮರಳೆ ಮರಳೆ
ಆರಿಗೆ ಆಪರಿ ಸಮರ್ಥಿಯ ನುಳ್ಳರೆ ತನ್ನ
ಶರಣನ ಕೊಲ್ಲುತಿರೆ ನೋಡುತಿಹನೆ
ನರಹರಿ ಧ್ವನಿಗೆ ನರಸಿಜಾಂಡವು ನಡುಗೆ
ಹರ ಮೌನ ಧರಿಸನೆ ಆಕಾಲದಲ್ಲಿ
ಕರ ಸಾಹಸ್ರವು ಅಷ್ಟೇಚರಣ ಆನನ ಪಂಚ
ಮೆರೆವ ದ್ವಯ ಪಕ್ಷ ಸಾವಿರ ಆಯುಧ
ಧರಿಸಿದ ಘೋರ ಶರಭನ್ನ ನರಹರಿಯು
ಪರಮನಾಯಾಸದಿ ಸಂಹಾರ ಮಾಡಿದ
ಧರಿಯಲ್ಲ ರುಧಿರವು ವ್ಯಾಪಿಸಲು
ದುರುಳ ಜನ ಮರ್ದನ ಗೋಪಾಲವಿಠ್ಠಲರೇಯಗೆ
ಸರಿಯಿಲ್ಲ ಸರಿಇಲ್ಲ ಸರ್ವೋತ್ತಮ ॥ 4 ॥

ತ್ರಿವಿಡಿತಾಳ

ರಾಮ ರಾವಣನ ಕೊಂದ ದೋಷವು ಬರಲಾಗ
ತಾಮಾಡಿದನು ಲಿಂಗಪೂಜೆ ತಸ್ಮಾತ
ಉಮಾಕಾಂತನೆ ಸರ್ವೋತ್ತಮನೆಂದು ನುಡಿವಿ ನೀ
ಪ್ರೇಮದಿ ಇರಿಸಿದ ಶಿವನ ಆಸ್ಥಳದಲ್ಲಿ
ಭೀಮಸೇನನು ಪುರಷಾಮೃಗ ತರಪೋಗುವಾಗ
ರೋಮಗಳು ಹನುಮಂತ ಕೊಡಲು ಒಯ್ದು

ಆ ಮೃಗವು ಅತಿತೀವ್ರದಿ ಬರಲಾಗಲು ಒಂದು
ರೋಮ ಬಿಸಾಟಿ ಕೋಟಿಲಿಂಗ ಕೋಟಿ ತೀರ್ಥ
ರೋಮ ರೋಮಕೆ ಕೋಟಿ ಲಿಂಗಗಳು ಮಾಡಿತು
ಶ್ರೀ ಮಾರುತಾತ್ಮಜನ ರೋಮಂಗಳು ಆ ಮ ।
ಹಾಮಹಿಮ ಶ್ರೀ ರಾಮ ಚಂದ್ರನದೂತಾ
ರಾಮಗೆ ಲಿಂಗ ಪೂಜೆಯ ಮಾಳ್ಪ ಬಗೆಯಂತೊ
ಆ ಮಹಾಕಾಲದಲ್ಲಿ ಈ ಮೂಜಗಂಗಳೆಲ್ಲ
ಸಾಮಸ್ತ ಸುರಮುನಿ ಋಷಿ ಸನಕಾದಿಗಳು ಇಂದ್ರ
ಕಾಮ ಗರುಡ ರುದ್ರ ಫಣಿಪ ಆವಿರಿಂಚಿಯು
ತಾಮುದದಿ ತಿಂದು ಸರ್ವವು ಲಯವು ಮಾಡಿ ಏ
ಕ ಮೇವ ದ್ವಿತೀಯನಾಗಿ ಸ್ವಾಮಿ ಮಲಗಿದ್ದಾಗ
ವ್ಯೋಮಕೇಶನು ಆವ ಕಡೆ ಇದ್ದನೊ
ತಾಮರಸಪೀಠ ಫಣಿಪ ರುದ್ರಾದ್ಯರು
ರಾಮಗೆ ಕಿಂಕರರು ಜಗತ್ತಿಗೆ ಗುರುಗಳು
ರಾಮಚಂದಿರ ಗೋಪಾಲವಿಠ್ಠಲರೇಯಾ
ಕಾಮಾರಿ ವರದ ಕರುಣಾ ಸಾಗರ ॥ 5 ॥

ಅಟ್ಟತಾಳ

ವ್ಯಾಸ ಹಮಗ್ರೀವ ಹರಿ ಪರ ರೆನ್ನುವ
ರಾ ಶಿರ ಬಾಹು ಖಂಡಿಸಿದ ಲೆಂಬರಿ ವೇದ
ವ್ಯಾಸ ಹಯಗ್ರೀವ ಇರುತಿರೆ ಅವರಂತೆ
ವೇಷನ ಧರಿಸಿ ಖಳರು ಇಬ್ಬರು
ಮೋಸದಿ ಸಭೆಯೊಳು ನಿಂತು ಕೂಗಲವರ
ಸಿರ ಬಾಹು ಖಂಡಿಸಿದವು ಅವರಿಗೆ
ಈ ಶಬ್ದ ನುಡಿಯ ಯೋಗ್ಯತೆ ಇಲ್ಲದವರಿಗೆ
ಶ್ರೀಶರಂಗನೆ ಅವರನ್ನು ಛೇದಿಸಿದ
ವ್ಯಾಸ ಹಯಗ್ರೀವ ರಿಬ್ಬರಿವರು ಬೇರೆ
ಈಶನು ಭಜವೆತ್ತಿ ಕುಣಿಯಲೆ ಉ
ಮೇಶಗೆ ಭೃಗುಶಾಪ ಲಿಂಗವಾಗೆಂದುರ
ಮೇಶ ಗೋಪಾಲವಿಠ್ಠಲನೆ ಪರೇಶ ವ್ಯಕ್ತಶಾಶ್ವತ ಶಾತ್ವತನೊ ॥ 6 ॥

(ಆದಿತಾಳ ಉಪಲಬ್ಧವಾಗಿಲ್ಲ)

ಜತೆ

ಮುಖ್ಯ ಕಾರಣ ಅಪ್ರಾಕೃತ ನಿರಂಜನ
ಮುಖ್ಯ ಪ್ರಾಣಾಂತರ್ಗತ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 63** ರಾಗ : ನೀಲಾಂಬರಿ

ತರಣಿ ಕುಲೋತ್ಪನ್ನ ತಪುತ ಕಾಂಚನವರ್ನಾ
ಪರಮ ಮಂಗಳ ಮೂರ್ತಿ ಪಾವನ್ನ ಸೂಕೀರ್ತಿ
ಕ್ಷರ ಅಕ್ಷರ ರಿಂದ ವಂದಿತ ವ್ಯಾಪುತ
ಶರಣ ಜನರ ಪಾಲಾ ಶತಆನಂದ ಜನಕ
ಪರಿಪೂರ್ಣ ಗುಣಭರಿತಾ ವರಜ್ಞಾನಪ್ರದಾತಾ
ಅರಿತು ಫಲವ ತ್ರಿವಿಧರಿಗೆ ಇಪ್ಪುವದಾತ
ಧರೆ ಈರೇಳು ರಕ್ಷಕ ಧರ್ಮ ಪ್ರತಿಪಾಲಕ
ಸರಿಯಿಲ್ಲದ ದೇವ ಸರ್ವೋತ್ತಮ
ದುರುಳ ಜನ ಮರ್ದನ ದುಃಖಾದಿಗಳದೂರಾ
ತರುಣಿ ಇಂದ ಬೆರೆದು ವರಗಳ ನೀವುತ
ನಿರುತದಿ ನಮ್ಮ ವಸುದೇಂದ್ರ ಮುನಿಯ ಚಲ್ವ
ಕರಕಮಲದಲಿ ನಿಂತು ಮೆರೆವ ದಾತಾ
ಪರಮ ದಯಾಳು ರಾಮ ಗೋಪಾಲವಿಠ್ಠಲ ನಿನ್ನ
ದರುಶನವೆ ಇಂದಿನ ದಿನತಿಸುದಿನವೊ ॥ 1 ॥

ಮಟ್ಟತಾಳ

ಆದಿಯಲ್ಲಿ ಆದರದಲ್ಲಿ ನಿನ್ನ ಮೋದದಿ ಅರ್ಚಿಸಿ
ಸಾಧಿಸಿ ಪದವಿಯ ಯೈದೀವಸುಂಧರಿಗೆ
ಸಾಧು ಜೀವರ ಪೊರಿಯೊ ಕ್ರೋಧ ರಹಿತ ನಿನ್ನ
ಮೇದಿನಿ ಓಲಗಿಟ್ಟು ಹಾದಿಯ ತೊರಿದ ಮಹಾಜನ ನಿನ್ನ
ಪಾದಂಗಳ ಸೇವಿಯು ಮೋದಿಸಿ ಮಾಳ್ಪರಿಗೆ
ಬಾಧೆ ಗೆಲಿಸುವುದ ಜನನ ಮರಣಗಳ
ಪಾದ ಸೋಂಕಿದ ಶಿಲೆಯ ಪಾವನ್ನ ಮಾಡಿದ
ಶ್ರೀಧರ ರಾಮ ಗೋಪಾಲ ವಿಠ್ಠಲ
ವಾದೇಂದ್ರ ಸುತರಿ ಗೊಲಿದು ಮೆರೆವ ಪ್ರೀತಾ ॥ 2 ॥

ರೂಪಕತಾಳ

ಛಂದದಿ ಬೊಮ್ಮ ರುದ್ರ ಇಂದ್ರಾದಿಗಳು
ಕುಂದದೆ ಸುರಋಷಿ ಗಂಧರ್ವಾದಿಗಳು
ಒಂದೊಂದಶದಿಂದ ಬಂದು ನಿನ್ನರ್ಚಿಸಿ
ಮಂದ ಬುದ್ಧಿಗಳುಳ್ಳ ಜಗವ ಪಾಲಿಸುವರು
ಮಂದ ಮತಿಗಳು ಇವರ ಮನುಜರೆಂದವರಿಗೆ
ಪೊಂದುವರು ಮಹದಾದಿ ನಿರಯದಲ್ಲಿ
ಸಂದರುಶನದಿಂದೆ ಸಕಲ ದೋಷದೂರ
ಇಂದಿರೆ ಅರಸನು ಇಪ್ಪುವ ಇವರಲ್ಲಿ
ಬಂದ ಬಂದವರ ಅಭೀಷ್ಟವ ಪೂರೈಸಿ
ನಿಂದು ಮೆರೆವ ವಸುದೀಂದ್ರ ಮುನಿಯ ಮನ
ಮಂದಿರ ದೊಪ್ಪುವ ರಾಮ ಗೋಪಾಲವಿಠ್ಠಲ
ಬಂಧಕ ಮೋಚಕ ಮಾಳ್ಪ ಶಕ್ತ ॥ 3 ॥

ಝಂಪೆತಾಳ

ನಿನ್ನ ನಾಮ ಒಮ್ಮೆ ಸ್ಮರಿಸಿದಡಾಯಿತೇ
ಘನ್ನ ದುರಿತಗಳೆಲ್ಲ ದೂರಾಗಿ ಪೋಗುವವು
ನಿನ್ನ ಮೂರುತಿ ಒಮ್ಮೆ ನೋಡಿದರಾಯಿತೆ
ಜನುಮಾದಿಗಳು ಜಡ ಕ್ಲೇಶಗಳು ತರಿವುವದು
ನಿನ್ನ ಅವಯವಂಗಳು ಎಲ್ಲಿ ನೋಡಲು ಪೂರ್ಣ
ನಿನ್ನ ಬಳಿಯಲ್ಲಿ ಸಕಲಾದಿ ತೀರ್ಥಂಗಳುಂಟು
ನಿನ್ನ ವಾಲ್ಗೈಸುತ್ತ ಸುರರಿಪ್ಪುವರು
ಘನ್ನ ಮಹಾಮಹಿಮ ಮೂಲರಾಮ
ನಿನ್ನ ಪರಿವಾರ ಸಹಿತ ಎನ್ನಗುರು ವಸುಧೀಂದ್ರ
ಮುನ್ನೆ ನಿನ್ನರ್ಚಿಸುವ ಭಾಗ್ಯವೆಂತೊ
ಚಿನ್ನುಮಯ ಮೂರುತಿ ಗೋಪಾಲವಿಠ್ಠಲ
ನಿನ್ನ ಭಕುತರು ನಿನ್ನ ಮಹಿಮೆಗೆ ನಮೋ ॥ 4 ॥

ತ್ರಿವಿಡಿತಾಳ

ಶರಣರ ಪಾಲಕ ದುರುಳರ ಶಿಕ್ಷಕ
ಶರಣು ಶರಣು ನಿನ್ನ ಚರಣಕಮಲಕ್ಕೆ

ಪರಮ ಪಾವನ ನಾಮ ಪರಿಪೂರ್ಣ ಗುಣಕಾಮ
ಸ್ಥಿರಯೋಗಿಗಳರಸ ಸ್ಥಿರ ಜೀವಿಯೊ
ದುರಿತಗಿರಿಗೆ ಕುಲಿಶ ದೂರ ಅತಿದೂರ
ಚರಣದಂದುಗೆ ಗೆಜ್ಜೆ ವರ ಜಾನು ಜಂಘ ಕಟಿ
ತರ ಮೇಲೆ ವೂಲಿವ ಕಿಂಕಿಣಿಯ ಘಂಟಿ
ಪರಮ ಶೋಭಿತುದರ ವಕ್ಷ ಕೌಸ್ತುಭ
ಕೊರಳ ಪದಕನಾನಾ ಸರಗಳಿಂದೊಪ್ಪುತ
ಸಿರಿಗಂಧ ಕಸ್ತೂರಿ ಪರಿಮಳ ಭೂಷಿತ
ವರ ಶಾರಂಗ ಪಾಣಿ ಕರನ ಕುಂಡಲಧರ
ಸರಸಿಜ ನಯನ ಸಿರಿಕಿರೀಟಧರ
ಸ್ವರೂಪಾಲಂಕಾರದಿಂದೋಪ್ಪುವ ಶ್ರೀರಾಮ
ಪರಮ ಶೊಬಿತನಾಮ ಗೋಪಾಲವಿಠ್ಠಲ
ನಿರುತ ವಸುಧೀಂದ್ರ ಮುನಿಯ ಮನದಿ ವಾಸಾ ॥ 5 ॥

ಅಟ್ಟತಾಳ

ನಿತ್ಯ ಅನಿತ್ಯ ಜಡದಲ್ಲಿಪ್ಪುವನು ನೀನೆ
ವ್ಯಕ್ತ ಅವ್ಯಕ್ತ ನಾಗಿದ್ದು ಈ ಧರಿಯ
ಭಕ್ತರುಗಳಿಗೆ ನೀ ಬಲ್ಲಂತೆ ತೋರುತ್ತ
ಮರ್ತ್ಯಲೋಕದಿ ಬಂದು ಈ ಪ್ರತಿಮೆ ಅಂತರ್ಗತನಾಗಿದ್ದು
ನಿತ್ಯುತ್ಸಾಹ ಗಳು ಭಕ್ತರಿಂದಲಿ ಕೊಂಡು ಬಹುಧರ್ಮದಿಂದಲಿ
ನಿತ್ಯವಸುಧೀಂದ್ರ ಹೃತ್ಕಮಲದಿ
ತತ್ತಳಿಸುತ ಮೆರೆವ ಸಿರಿ ರಾಮ
ಮುಕ್ತಿ ಪ್ರದಾಯಕ ಗೋಪಾಲ ವಿಠ್ಠಲ
ಚಿತ್ತ ಶುದ್ಧನ ಮಾಡು ಭಕ್ತಿ ಜ್ಞಾನವೆ ನೀಡು ॥ 6 ॥

ಆದಿತಾಳ

ದುರಿತದೂರ ದುಃಖ ನಾಶ
ಕರುಣಾಕರ ಕಪಟ ರಹಿತ
ಶರಣ ಪಾಲ ಸಿರಿ ಅರಸ
ಗರುಡ ಗಮನ ಗರ್ವ ರಹಿತ

ಸರಸಿ ಜಾಕ್ಷ ಸರ್ವೋತ್ತಮ
ಸಾರಭೋಕ್ತ ಸರ್ವ ವ್ಯಾಪ್ತ
ಕಾರಣನೆ ಕರ್ಮರಹಿತಾ
ಭಾರ ಕರ್ತ ಭಯ ನಿವಾರಣ
ತಾರಕನೆ ತ್ರಿಗುಣದೂರ
ಮಾರನಯ್ಯಾ ಮಧುಸೂದನ
ಮಾರುತೇಶ ಮಾಯಾರಹಿತಾ
ಜಾರ ಚೋರ ಜನ್ಮ ರಹಿತಾ
ಧೀರ ಶೂರ ದಿವ್ಯ ವಿಗ್ರಹ
ಪರಮ ಪುಣ್ಯ ಪರಿಪೂರ್ಣ
ಸುರಾದಿ ವಿನುತ ಗೋಪಾಲವಿಠ್ಠಲ
ಗುರು ವಸಧೇಂದ್ರ ಮುನಿಯ ಈಶಾ ॥ 7 ॥

ಜತೆ

ಗುರು ವಸುಧೀಂದ್ರರ ಕರಕಮಲದೊಳು ತೋರ್ಪಾ
ಸಿರಿರಾಮ ಗೋಪಾಲವಿಠ್ಠಲ ಶರಣು ಶರಣು ॥ 8 ॥

ಧ್ರುವತಾಳ **ಸುಳಾದಿ 64** ರಾಗ : ಭೈರವಿ

ಭಕುತರ ಸೃಷ್ಟಿಯೇವೆ ನಿನ್ನ ಸೃಷ್ಟಿಯೋ ದೇವಾ
ಭಕುತರ ಸ್ಥಿತಿಯೇವೆ ನಿನಗೆ ಸ್ಥಿತಿಯು ಸ್ವಾಮಿ
ಭಕುತರ ಲಯವೆ ನೋಡು ನಿನಗೆ ಲಯವು ಇನ್ನು
ಭಕುತರ ಪ್ರೇರಣವೆ ನಿನಗೆ ಪ್ರೇರಣೆ ಕಾಣೋ
ಭಕುತರ ಜ್ಞಾನವೆ ನಿನಗೆ ಜ್ಞಾನವು ನೋಡು
ಭಕುತರ ಅಜ್ಞಾನವೆ ನಿನಗೆ ಸ್ವಾಧೀನವದು
ಭಕುತರ ಬಂಧದಿಂದ ಬಂಧನೆಂದೆನಿಸಿ ಕೊಂಬೆ
ಭಕುತರ ಮೋಚನವೆ ನಿನಗೆ ಮುಖ್ಯ ಮೋಚನ
ಭಕುತರಿಗೆ ನಿನ್ನದು ಒಂದಾದರು ಬಾರದು
ಭಕುತರದು ನಿನ್ನಲ್ಲಿ ಒಂದು ಇಲ್ಲದವಿಲ್ಲಾ
ಭಕುತರು ನಿನ್ನಾಧೀನ ನೀ ಭಕುತರಾಧೀನ

ಭಕುತರಿಗೆ ನೀ ಬೇಕು ನಿನಗೆ ಭಕುತರ ಬೇಕು
ಭಕುತರೆ ನಿನಗಿನ್ನುಬ್ಯಾಡದಿದ್ದರೆ ಸ್ವಾಮಿ
ವ್ಯಕುತಿ ಮಾಡುವರಾರು ಈ ನಿನ್ನ ಗುಣಗಳು
ಸಕಲವುಳ್ಳವ ಶೌರ್ಯ ವಂತನೀನು ಅದರು
ರಿಕತ ನಿಂದಲಿ ಅದು ಪ್ರಕಟ ವಾಗಲಿ ಬೇಕು
ಭಕುತವತ್ಸಲ ನಮ್ಮ ಗೋಪಾಲವಿಠ್ಠಲ
ಭಕುತರೆ ಬಲ್ಲಿದರೋ ನಿನ್ನ ಬಲದಿ ಸ್ವಾಮಿ ॥ 1 ॥

ಮಟ್ಟತಾಳ

ಜಗವು ನಿನ್ನ ಒಳಗೆ ನೀನು ಭಕುತರೊಳಗೆ
ಜಗವ ಪೊತ್ತಿಹೆ ನೀನು ನಿನ್ನ ಪೊತ್ತಿಹರವರು
ಜಗಕ ಮೋಹಕ ನೀನು ನಿನಗೆ ಮೋಹಸೂರವರು
ಜಗದಿ ವ್ಯಾಪ್ತ ನೀನು ನಿನ್ನ ವ್ಯಾಪ್ತರವರು
ಜಗದಿ ಭಿನ್ನನು ನೀನು ನಿನಗೆ ಭಿನ್ನರವರು
ಚಿಗಿದರೆ ಚಿಗಿವರು ನಗಿದರೆ ನಗುವರು
ಹಗಿಯು ಸ್ನೇಹವೆಲ್ಲ ನಿನ್ನಾಧೀನ ವೆಂದು
ಬಿಗಿದು ಕೊಂಡಿಹರು ಬಗಿಯದೆ ಅನ್ಯರನ
ಖಗವಾಹನ ಚಲ್ವ ಗೋಪಾಲ ವಿಠ್ಠಲ
ಅಗಲದೆ ನಿನ್ನನು ಅರ್ಚಿಸುವರು ಬಿಡದೆ ॥ 2 ॥

ರೂಪಕತಾಳ

ಜಗವನೆಲ್ಲ ಸುತ್ತಿಸುವನೆ ನಿನ್ನ ಅವರು
ಮಗನ ಮಾಡಿ ಪಿಡಿದು ಮತ್ತೆ ಆಡಿಸುವರು
ಜಗವನೇಲ್ಲವ ಇಚ್ಛೆಯಲಿ ಕಟ್ಟುವನೆ ನಿನ್ನ
ಬಿಗಿದು ಕಟ್ಟುವರು ಕಾಲನೆ ಹಗ್ಗದಿಂದಲಿ
ಸೊಗಸಾದ ವೈಕುಂಠ ವಾಸವಾಗಿದ್ದನ್ನ
ಜಗದಲ್ಲಿ ನಿಂತು ಬಾ ಎಂದಿಲ್ಲಿ ಕರೆವರು
ಯುಗ ಮಹಾಪ್ರಳಯಕ್ಕೆ ಚಲಿಸದವನ ನಿನ್ನ
ಮಿಗೆ ಕೂಗಿ ಕರೆದು ಘಾಬರಿಗೊಳಿಸಿದರು ನಿನ್ನ
ಜಗದಿ ಜನ್ಮಾದಿಕರ್ತಾ ಗೋಪಾಲ ವಿಠ್ಠಲ
ಬಿಗವು ಬೇರೆ ನಿನ್ನ ಭಕತರ ಭಾಗ್ಯವು ॥ 3 ॥

ಝಂಪೆತಾಳ

ನಿತ್ಯ ತೃಪ್ತನೆ ನಿನಗೆ ಅನ್ನವನೆ ಉಣಿಸಿದರು
ಸತ್ಯವಚನವು ಬಿಡಿಸಿ ಪಿಡಿಸಿದರು ಚಕ್ರವನು
ಭೃತ್ಯರಜಭವ ಮಹಾಮಹಿಮನೆ ಕೈಯ
ಎತ್ತಿ ಹಾಖಿಸಿದರೆಲ್ಲರು ಉಂಡ ಪರ್ನಗಳ
ರಕ್ತ ಶುಕ್ಲರಹಿತ ಕಾಯದವನ ನಿನ್ನ
ಮತ್ತೆ ಬಾಣದಿ ಎಚದು ತೋರಿದರು ನಿನ್ನವರು
ಸ್ತುತ್ಯ ನೀ ಸರ್ವೋತ್ತಮ ಅಹುದೇ ಅಲ್ಲವೊ ಎಂದು
ಎತ್ತಿ ಕಾಲಿಲೆ ಎದಿಗೆ ಒದ್ದರು ನಿನ್ನವರು
ಭಕ್ತ ವಾತ್ಸಲ್ಯತ್ವ ತೋರುವದಕೆ ನಿನ್ನ ಕಚ್ಚಿ
ಸುತ್ತಿದನು ಕಪಟದಲ್ಲಿ ನಿನ್ನವನು
ಮತ್ತೆ ಕಟ್ಟಿದ ಮೀಸೆಯನು ಪಿಡಿದು ಸತ್ಯವೃತ
ನಿತ್ಯ ಬಾಗಿಲ ಕಾಯಿಸಿದನು ಆ ಬಲಿರಾಯಾ
ಕಿತ್ತಿಕೊಂಡೋಡಿದನು ಕಿರೀಟ ನಿನ್ನವನು
ಮತ್ತೆ ಮಳೆಗರೆದು ಪರ್ವತ ಹೋರಿಸಿದರವರು
ಸತ್ಯ ಸಂಕಲ್ಪ ಗೋಪಾಲ ವಿಠ್ಠಲರೆಯಾ
ಭಕ್ತರೊಳು ನಿನ್ ಆಟವ ತಿಳಿವ ಧನ್ಯಾ ॥ 4 ॥

ತ್ರಿವಿಡಿತಾಳ

ನೋಡಿ ನೋಡಿಸಬೇಕು ಓಡಿ ಓಡಿಸಬೇಕು
ನೀಡಿ ನೀಡಿಸಬೇಕು ಆಡಿ ಆಡಿಸಬೇಕು
ಕೂಡಿ ಕೂಡಿಸಬೇಕು ಮಾಡಿ ಮಾಡಿಸಬೇಕು
ಕೇಡು ಲಾಭಂಗಳಿಗೆ ಭಿನ್ನ ವಾಗಿ ನೀನು
ಮಾಡುತ ಈಪರಿ ಶಿಲ್ಕಿ ನಿನ್ನವರೊಳು
ಕೂಡುತ ಮಲಗುತ ಏಳುತ ನಿಂತು ನೀ
ನೋಡುವರಿಗೆ ಬಿಂಬಕ್ರಿಯದ ಮೇಲಿನ್ನು
ಪಾಡಾಗಿ ತಿಳಿದರೆ ಸ್ವಾಮಿ ಭೃತ್ಯ ಕಾರ್ಯ
ಜೋಡೆರಡೊಂದಲ್ಲ ಮಾಡುವನು ಒಬ್ಬ
ಮಾಡಿಸುವ ತತ್ತತ್ಯೋಗ್ಯತೆ ಅನುಸಾರ
ಪ್ರೌಢ ನಿನಗೆ ಒಂದು ಫಲ ಅಪೇಕ್ಷಯು ಇಲ್ಲ

ಮಾಡುವಿ ಈ ಪರಿ ಭಕ್ತರಿಗೆ
ಮೂಢ ಶಂಕೆಯ ಸಲ್ಲ ವೈಷಮ್ಯ ನೈರ್ಘಣ್ಯ
ಕೂಡದು ನಿನ್ನಲ್ಲಿ ಎಂದೆಂದಿಗೂ
ಪಾಡಿದವರ ಪ್ರಾಣ ಗೋಪಾಲವಿಠ್ಠಲ
ಈಡ್ಯಾರೊ ನಿನಗೆ ನೀ ಮಾಡಿದ್ದೆ ಮಹಾಧರ್ಮಾ ॥ 5 ॥

ಅಟ್ಟತಾಳ

ಭಕುತರು ಮಾಡಿದ್ದು ನೀ ಮಾಡಿದುದಯ್ಯಾ
ಭಕುತರು ನೋಡಿದ್ದೆ ನೀನು ನೋಡಿದುದಯ್ಯಾ
ಭಕುತರು ನೀಡಿದ್ದೆ ನೀನು ನೀಡಿದದಯ್ಯಾ
ಭಕುತರ ಕೊಂಡದ್ದೆ ನೀನು ಕೊಂಡದದಯ್ಯಾ
ಭಕುತರು ಆಡಿದ್ದೆ ನೀನು ಆಡಿದದೈಯ್ಯಾ
ಭಕುತರು ಬೇಡೋದು ನೀನ್ನ ಬೇಡುವದಯ್ಯಾ
ಭಕುತರು ಉಂಡರೆ ನೀನು ಉಂಡವನಯ್ಯಾ
ಭಕುತರು ಉಟ್ಟರೆ ನೀನು ಉಟ್ಟವನಯ್ಯಾ
ಭಕುತರು ದಣಿದರೆ ನೀನು ದಣಿದವನಯ್ಯಾ
ಭಕುತರ ಹಿತವೆಲ್ಲ ನಿನ್ನ ಹಿತವು ಸ್ವಾಮಿ
ಭಕುತರಲ್ಲಿ ನಿನ್ನ ರತಿ ಅನುಗಾಲವು
ಭಕುತ ಬ್ಯಾಸತ್ತರು ನೀ ಬೇಸರುವನು ಅಲ್ಲ
ಭಕುತರನು ಮತ್ತೆ ನೀನು ಹುಡುಕುತಿಪ್ಪಿ
ಭಕುತರು ನಿನ್ನ ಸುತ್ತಲೆ ಸಂಚರಿಸೋರು
ಮುಕುತಿದಾಯಕ ಸಿರಿ ಗೋಪಾಲವಿಠ್ಠಲ
ಭಕುತರಲ್ಲೇ ಆಸಕುತಿಯು ನಿನಗೆ ॥ 6 ॥

ಆದಿತಾಳ

ಕಂಡರು ಕಾಣರು ಉಂಡದ್ದೆ ಉಣ್ಣರು
ಕೊಂಡದ್ದೆ ಕೊಳ್ಳರು ಪಂಡಿತರವರು
ಮಂಡಿಯ ತಗ್ಗಿಸಿ ನಿನ್ನ ಕೆಳಗೆ ಬಿದ್ದು
ಮಂಡಲ ದೊಳಗೆಲ್ಲ ಸಂಚರಿಸುವರು
ಪುಂಡರೀಕಾಕ್ಷ ನೀ ಅವರೆಲ್ಲಿ ಪೋದಲ್ಲಿ

ಕಂಡ್ಹಾಗೆ ತಿರುಗಿದಂತೆ ನೀನು ತಿರುಗಿವಿ
ಖಂಡಾ ಖಂಡ ಮೂರ್ತಿ ವ್ಯಾಪ್ತ ನಿರ್ಲಿಪ್ತವು
ದ್ದಂಡ ಉತ್ತಮ ಪುರುಷೋತ್ತಮ ಸರ್ವೋತ್ತಮನೆ
ಪಾಂಡವ ಪಾಲಕ ಗೋಪಾಲವಿಠ್ಠಲ
ಕಂಡ ಮಾತಿಗೆ ಇದಕನುಮಾನವ್ಯಾತಕೆ ॥ 7 ॥

ಜತೆ

ಭಕುತರ ಭಾಗ್ಯವು ಜಗವೆಲ್ಲ ತುಂಬಿದೆ
ರಿಕತ ನೊಬ್ಬನೆ ಕಾಣೊ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 65** ರಾಗ : ಕಾಂಭೋಧಿ

ಹಸಿದು ಉದರ ಗತಿಯ ಹದನವ ನರಿಯದ
ಶಿಶುವಿನ ತಾಯಿ ಪಿಡಿದು ಮೊಸರನ್ನ ಉಣಿಸಿದರೆ
ಕೊಸರಿ ಕೊಳ್ಳುತ ಲಿಪ್ಪದು ವೊಲ್ಲೆನೆನ್ನಲಾ ಜನನಿ
ಶಿಶುವಿಗೆ ಅನ್ನವ ಉಣಿಸಿದಲೆ ಬಿಡುವಳೆ
ವಶವಾಗುದಕೆ ನಾನಾ ಬಣ್ಣಿಗಿ ಯೋಜನಾ
ವ್ಯಸಗಿ ಮಂಡೆಯಾ ವ್ಯಾವರಿಸಿ ಉಣಿಸೊಳಲ್ಲದೆ
ಶಿಶುವಿಗೆನನ್ನ ತನ್ನ ಹಸಿವಿ ಚಿಂತೆ ಮತ್ತುಂಟೆ
ಹಸಿವಿಗೆ ತನಗಿದು ವಿಷಯವೆಂಬ ಜ್ಞಾನ
ಶಿಶುವಿಗುಂಟಾಗಿದ್ದರೆ ಕೊಸರಿ ಕೊಂವನೇನಯ್ಯಾ
ಮಶಕಂಗಳ ಬಾಧೆ ಮುನ್ನೇನಿದ್ದರು
ಶಿಶುವಿಗೇನಾದರ ನಿವಾರಿಸುವ ಬ್ಯಾರಿರಲಾಗಿ
ಅಸುರ ಮರ್ದನ ರಂಗ ಗೋಪಾಲವಿಠ್ಠಲ ನಿನ್ನ
ಶಿಶುವಿನ ಹಸಗೆಡಿಸದಿರು ಪಿಡಿದು ॥ 1 ॥

ಮಟ್ಟತಾಳ

ವಿಹಿತ ಫಲವು ನೀನು ವೊಹಿಸದಿದ್ದಡೆ ದೇವಾ
ಸಾಹಸವು ಬರಿದಾಗೆ ಅಹಿತ ಮತ್ತಾರಿಗೆ
ಆಹಿವದನಕೆ ಮೂಷಕವು ಸಿಲ್ಕಿದರೆ
ವಿಹಿತ ಬಿಡುವದೆ ಅಹಾರವೆಂದು ಅದಕ್ಕೆ

ಅಹಿಗೆ ಅನಿಳಾಹಾರವನು ಇತ್ತು ಮೂಷಕನ ಬಿಡಿಸೋದು
ಅಹಿಗಿತ್ತಂತೆ ಮಾಡು ನೀ ಮಹಿಸುರರಸಮ್ಮತಿಫಲವು ದೇವ
ಒಹಿಸಬೇಕು ಧರ್ಮ ನಡಿಸ ಬೇಕಾಗಿತ್ತೆ
ಬಹಿರ ಅಂತರ ಭರಿತಾ ಗೋಪಾಲವಿಠ್ಠಲ
ಕುಹಕರ ಮರ್ದನ ಕುಜ ಪ್ರದಾತನೆ ॥ 2 ॥

ತ್ರಿವಿಡಿತಾಳ

ಕಂಟಕ ಪರಿಹರಕೆ ರಕ್ಷ ಮೆಟ್ಟಲಿ ಬೇಕು
ಕಂಟಕ ಪಾದರಕ್ಷಗೆ ಕುಂಟುಬೀಳಲು ಧರ್ಮವೆಂಬಪಾದವುಜೀರ್ಣ
ಕಂಟಕಾರಿಯ ಮೆಟ್ಟಿ ಯೇನು ಫಲವೊ
ಒಂಟಡುಬ್ಬದಂತ ಲೌಕಿಕರಿಂದ ಲೇನು
ಬಂಟಜನರು ಇದನು ಬಯಸುವರೆ
ಕುಂಟಲಗಿತ್ತಿಯ ಕೂಡಲಿ ಅನುದಿನ
ಒಂಟಿಲಿಡಿಸ ಬೇಡ ಲೌಕಿಕದಿ
ನೆಂಟರು ಬಹು ಮಂದಿ ಸಹಾಯವಾಗಿ ಬಂದು
ಕಂಟಕಹರ ಚಲ್ವ ಗೋಪಾಲವಿಠ್ಠಲ
ಉಂಟಾದದಕ್ಕೆ ವಲ್ಲೆ ನೆನಲು ಬಿಡದೆ ಉಣಿಪೆ ॥ 3 ॥

ಅಟ್ಟತಾಳ

ಮೂಕನಣಕಿಸಲು ತಾ ಕುಳಿತವನಿಗೆ
ಮೂಕತ್ವದ ಶೋಕ ಅವನಿಗೆ ಆಗುವದು
ತಾಕುರುಡನಲ್ಲ ಪರರ ಅಣಕಿಸುವಂಗೆ
ಶೋಕವ ಬಿಡುವನೆ ಅಂಧಕನಂದದಿ
ವಾಕು ದಂತೋಚ್ಚರಣ ಪರರನಣಕಿಂಪಗೆ
ವಾಕು ಸಂಬಂಧ ಕ್ಲೇಶ ತಾಕುವದೇ ಅವಗೆ
ಶೋಕವಿಟ್ಟು ತಾನು ಪರರಣಕಿಸುವವ
ಶೋಕದ ಅನುಭವ ಅವನಿಗೆ ಇಪ್ಪುವದೆ
ಶ್ರೀ ಕರುಣಾಕರ ನಿನಗೆ ಈಪರಿ ಅಹುದು
ನೀ ಕೇಳೆಲೋ ಸ್ವಾಮಿ ನಿನ್ನ ಭಕ್ತನಿಗೀಗ
ಲೌಕಿಕ ದೊಳಗಿರೆ ಸಾಕುವಿ ಇದರಂತೆ

ಏಕೋ ಮೇವ ದೇವ ಗೋಪಾಲವಿಠ್ಠಲ
ನೀಕರಪಿಡಿದವಗೆ ತಾಕ ಬಲ್ಲದೆ ದುರಿತಾ ॥ 4 ॥

ಆದಿತಾಳ

ನಮೊ ನಮೊ ಕಾರುಣ್ಯಮೂರ್ತಿ ದಯಾಪರ
ನಮೊ ನಮೊ ಸರ್ವಜ್ಞ ನಿತ್ಯ ನಿರಂಜನ
ನಮೊ ನಮೊ ಅಖಂಡ ವ್ಯಾಪ್ತ ನಿರ್ದೋಷನೆ
ನಮೊ ನಮೊ ದುಷ್ಟ ಶಿಕ್ಷಾ ಶಿಷ್ಟರ ಪಾಲಾ
ನಮೊ ನಮೊ ಬ್ರಹ್ಮಣ್ಯ ದೇವ ಭಕ್ತರ ಕಾವ
ನಮಿಸುವೆ ನಮಿಸುವೆ ನಮ್ರೀಭೂತನಾಗಿ
ಶಮಲಮತಿಯ ಕಡಿ ದ್ಯುಮಣಿ ಶತತೇಜ
ಯಮ ನೇಮಗಳಲಿ ಮಮತೆ ನಿರಂತರ
ಸಮ ಆಧಿಕ್ಕೆನಿಸದೆ ನೀ ಎಮಗಿರು ಸದಾ
ಸುಮನಸ ರೊಡಿಯಾ ಶ್ರೀ ಗೋಪಾಲವಿಠ್ಠಲ
ನಮಿಸಿ ಬೇಡುವವರ ನೀನರಿಯಾದದೆಲ್ಲ ॥ 5 ॥

ಜತೆ

ಪತಿವ್ರತಾ ಸ್ತ್ರೀಗೆ ವ್ರತವು ಇಲ್ಲಾ
ಪತಿ ಆಜ್ಞವು ಒಂದೆ ಗೋಪಾಲವಿಠ್ಠಲ ತಂದೆ ॥ 6 ॥

ಧ್ರುವತಾಳ **ಸುಳಾದಿ 66** ರಾಗ : ಭೈರವಿ

ಆದಿ ನಾರಾಯಣ ಅನಿಮಿತ್ಯ ಬಂಧು ದೇವಾ
ಭೇದ ಕಾರ್ಯತೋ ಗುಣವಾನ್ ಜ್ಞಾನಾನಂದ ಪೂರ್ಣ
ವೇದಾಂತ ವೇದ್ಯ ಅವತಾರ ಮೂಲಕ್ಕೆ ಐಕ್ಯ
ನಾದಾ ಬಿಂದು ಘೋಷ ಸರ್ವಾಂತರಲಿ ಪೂರ್ಣ
ಮೇದಿನಿಯೊಳಗಂತರ್ಬಹಿ ನಾರಾಯಣ ವ್ಯಾಪ್ತಾ
ಭೇದ ಭೇದವು ನಾಶ ಜನನ ಮರಣರಹಿತ
ಆದಿಯಲ್ಲಿ ಪೂರ್ಣ ಸಾಧು ಜೀವರಪಾಲ ಸರ್ವಕಾಲದಲ್ಲಿ
ಶೋಧಿಸಿ ತಿಳಿವೋದು ಜಡಚೆತನದಿ ಭಿನ್ನ
ಕ್ರೋಧ ರಹಿತ ಸಕಲ ದೋಷದೂರ ರಂಗ

ಮೋದ ತೀರ್ಥರ ಉಕ್ತಿಸಾಧಿಸಿ ಅರಿದರೆ
ಆದರಿ ಸುಮನು ಹರಿ ಆವಲ್ಲಿದ್ದರನ್ನ
ಮಾಧವನಕೂಡ ವಿರೋಧ ಮಾಡಿದಂತೆ ಅಲ್ಲ
ಖೇದ ಗೊಂಡು ಬರಿದೆ ಏನಾದರು ನೋಡಲಿ
ಖೇದ ಗೊಂಡು ಬರಿದಾಗದೆ ಪೇಳುವದಿಲ್ಲ
ಶ್ರೀಧರ ಸೃಷ್ಟಿ ಸ್ಥಿತಿ ಲಯಕೆ ಕಾರಣ
ಯಾದವರ ಕೂಡಲಿ ಅಜ್ಞ ಜನಮೋಹ
ಈ ಧರಿಯೊಳಿಗಾಡಿ ಬಗೆ ಬಗೆ ತೋರಿದ
ಕಾದಿ ಸೋತು ಬಾಣದಿಂದ ಪೆಟ್ಟನೆ ತಿಂದು
ಆದಾವ ಜನರಿಗೆ ಅಜ್ಞಾನ ತೋರಿದ
ಕಾದನು ಗೋವುಗಳು ಭಕ್ತರ ಪಾಲಿಪ
ಈ ದೇವಕಿಗೆ ತಾ ಸುತನು ಆದಾ
ಓದನಗಳು ಉಂಡು ಉದ್ಧರಿಸಿ ಭಕ್ತರ
ಭೇದ ಭೇದ ತೋರಿದ ಅಸುರರಿಗೆ
ವಾದ ಸಲ್ಲದು ಕೋವಿದರಾದರು ಕೇಳಿ
ವಾದಿಪುವರಿಗೆ ನರಕ ತಪ್ಪದು
ಭೂ ದೇವಿ ಅರಸ ಗೋಪಾಲವಿಠ್ಠಲನ್ನ
ಪಾದ ಸೇವಕರಿಗೆ ಬಾಧೆ ಬಂಧನ ವಿಲ್ಲ ॥ 1 ॥

ಮಟ್ಟತಾಳ

ಒಂದೆ ದೇವನು ತಾನು ಅನಂತ ಅನಂತವತಾರ
ಒಂದೊಂದು ಅವತಾರಕ್ಕೆ ಮೂಲರೂಪದಲಿದ್ದ
ಒಂದೆ ಬಲಜ್ಞಾನ ಆನಂದ ನಿರ್ದೋಷ
ಒಂದಾನಂತೆ ರೂಪವರಿದು ಕಡಿಮೆ ಮಾಡಿ
ಒಂದವತಾರ ನೋಡೆ ಒಂದೆ ಸಮಾನ ವಿನ್ದು
ಕುಂದು ಕೊರತೆ ಇಲ್ಲ ಹರಿಗುಣಬಲ ಜ್ಞಾನ
ಒಂದರೊಳಾನಂತ ಅನಂತಾನಂತ
ಎಂದೆಂದಿಗೆ ತಾನು ಒಂದೆ ಪರಿಯಲಿ ರೂಪ
ಸಂದೇಹವು ಬೇಡಿ ಸಜ್ಜನರೇ ಕೇಳಿ
ಇಂದಿರಾ ದೇವಿ ತಾನು ಚಂದದಿ ಹರಿ ನಖವು

ವೆಂದು ಪಿಡಿದು ತಾನು ಎಣಿಸಲಾರದೆ ರೂಪ
ಅಂದದ್ದೆ ಆನಂದ ಅಬ್ಧಿಯೊಳಗೆ ಮುಳುಗಿ
ಮಂದರ ಧರನ ತಾ ಪೊಂದಿ ಕೊಂಡಾಡಿದಳು
ಮಂದ ಜನರು ಕೇಳಿ ಇಂದಿರೇಶನ ರೂಪ
ಒಂದೆರಡಿಂಬಂಥ ಮಿತಿ ಇಲ್ಲವು ಕಾಣೊ
ಸಿಂಧು ಶಯನ ಗೋಪಾಲವಿಠ್ಠಲರೇಯಾ
ಒಂದೆ ದೈವವೆನ್ನಿ ಚಂದದಿಪಾಲಿಸುವ ॥ 2 ॥

ರೂಪಕತಾಳ

ಪತಿ ಉಪಾಸನೆಯಿನ್ನು ಇಂದಿರಾ ದೇವಿಗೆ
ಪಿತನುಪಾಸನೆ ಯಿನ್ನು ಬೊಮ್ಮದಿಗಳಿಗಯ್ಯಾ
ಪಿತನ ಪಿತನು ಪಾಸನೆಯು ಹರಾದಿಗಳಿಗೆ ಸತತ
ಭೃತ್ಯಬಾವ ಇಂದ್ರ ಕಾಮರಿಗ್ಯೈಯ್ಯಾ
ಇತರ ಜನರಿಗೆಲ್ಲ ಇದರಿಂತೆ ತರುವಾಯ
ಗತಿ ಹೊಂದುವರಿಗೆಲ ಸ್ವಾಮಿ ಭೃತ್ಯ ನ್ಯಾಯ
ಜಿತ ನಿತ್ಯ ಸಂಸಾರಿಗಳ ಉಪಾಸನಿ ಎನ್ನು
ಪಥ ತಪ್ಪಿ ಕಂಡ ದೇವತೆಗಳ ಭಜನೆಯು
ಹಿತ ದೈವ ಒಂದೆ ಅಹಿತ ದೈವ ಒಂದೆ
ಇತರ ದೇವತೆಗಳೆಲ್ಲ ಕರ್ಮಾಂತ ರೆಂದೆಂದು
ಪೃಥಿವಿಯೊಳಗೆ ಸಂಚರಿಸುತಿಪ್ಪರು
ಗತಿಗೇಡಿಗಳೆಲ್ಲ ಹರಿಯನ್ನು ತಮ್ಮ ಸಮಾ
ನಿತನ ಮಾಡಿಕೊಂಡು ಮತಿಗೇಡಿಗಳು ಆಗಿ
ಮಿತಿ ತಪ್ಪಿ ತಮ್ಮ ತಮ್ಮ ಗತಿಗಳ ನೈದೋರು
ಪತಿತ ಪಾವನ ರಂಗ ಕ್ಷಿತಿಯ ಒಳಗೆ ಇನ್ನು
ಕೃತಿಯ ಮಾಡಿಸುವನು ತ್ರಿವಿಧ ಜೀವರ ಕೈಯ
ಅತಿತನಾಗತ ಬಂಧು ಗೋಪಾಲವಿಠ್ಠಲನು
ಗತಿ ಎಂದು ನಂಬಲು ಹಿತದಿ ಪಾಲಿಸುವಾ ॥ 3 ॥

ಝುಂಪೆತಾಳ

ಧರೆಯೋಳು ರಾಮಕೃಷ್ಣಾವತಾರ ಗಳಿನ್ನು
ನರರಂತಾಗಾದೆ ಪ್ರಾಕೃತ ವೆಂಬಿರಿ

ಮರುಳು ಗೊಳ್ಳಲಿಬೇಡ ಹಿರಿಯರಾದರು ಕೇಳಿ
ಅರಿದು ಪೇಳುವೆ ಹರಿ ಪ್ರೇರಣೆಇಂದ
ಹರಿಯೆ ನಾರಾಯಣ ಮೂಲರೂಪದಿ ತಾನು
ಇರಾಲಾಗಿ ಕ್ಷೀರ ಸಾಗರದಲಿನ್ನು
ಪರಮ ಕ್ರೂರ ತನದಿ ಬಲಿಚಕ್ರ ವರ್ತಿ ತಾನು
ಹರಿಯ ಕಿರೀಟ ಎತ್ತಿಕೊಂಡೋಡಲು
ಗರುಡ ವೇಗನೆ ಕಂಡು ಮರಳಿ ತಂದು ಇನ್ನು
ಸರನೆ ಗೋಮಂತ ಪರ್ವತದಲಿದ್ದ
ಸಿರಿಕೃಷ್ಣಗೆ ತಾನು ಹರುಷದಿ ಇಡಲಾಗಿ
ಸರಿ ಹೋಗೋದೆ ಬೇರೆ ಬೇರೆ ಆದರೆ
ಹರಿಮೂಲವು ಇನ್ನು ಅವತಾರಗಳಿಗೆಲ್ಲ
ಎರಡಿಲ್ಲವು ಕಾಣೋ ಜ್ಞಾನಿಗಳ ಕೇಳಿ
ಮರಳಿ ಹಿಂದಾದ್ದು ಮುಂದಾಗುವದಿನ್ನು
ಎರಡುಪರಿ ಅನ್ನವನು ಒಲ್ಲೆನೆಂದು
ದುರುವಾಸ ಮುನಿ ಬಂದು ಹರಿ ರಾಮನ ತಾನು
ತ್ವರಿತದಲಿ ಅನ್ನವನು ಬೇಡಲಾಗಿ
ಸಿರಿ ರಾಮನು ತಾನು ಕರವ ನೆತ್ತೀಯ್ಯಲು
ಹರುಷದಲಿ ಉಂಡು ಸಂತೋಷ ವಾಗನೆ
ಬರಿದೆ ಪ್ರಾಕೃತ ಶರೀರ ವಾದಡೆ ಇನ್ನು
ದೊರಕುವದೆ ಈ ಪರಿ ಸಮ ರತುನವು
ಹರಿಗೆ ಪ್ರಾಕೃತ ಶರೀರ ವೆಂದವನಗೆ ನರಕವು
ಹರಿಪರ ನೆಂದವಗೆ ಇಹಪರ ಸುಖವು
ದುರುಳಜನ ಮರ್ದನ ಗೋಪಾಲವಿಠ್ಠಲಗೆ
ಸರಿಯಿಲ್ಲ ಸರಿಯಿಲ್ಲ ಪರ ದೇವತೆ ॥ 4 ॥

ತ್ರಿವಿಡತಾಳ

ಜಗಕೆ ಒಡಿಯನಾಗಿ ಜಗವ ಪಾಲಿಸುವನು
ಜಗಕೆ ಕರ್ತನಾಗಿ ಸೃಷ್ಟಿಯ ಮಾಳ್ಪನು
ಜಗಕೆ ಭಿನ್ನ ನಾಗಿ ಲಯವನು ಮಾಡುವ
ಜಗ ಜನ್ಮಾದಿಕರ್ತ ನಮ್ಮ ರಂಗ

ಜಗದೀಶ್ವರನು ತಾನು ಜಿಗುಳಿಸದಿರೆ ಬೆರಳ
ಜಗದಿ ಜೀವರು ಚಲಿಸ ಲೇಶವಲ್ಲವು
ನಗವ ಪಿಡಿದು ಇನ್ನು ಚೇತನವ ಮಾಡಬಲ್ಲ
ಸೊಗಸಾಗಿ ಜಡ ಚೇತನಗಳ ಮಾಡಬಲ್ಲ
ಜಗವ ಸೃಷ್ಟಿಸಿ ಬೊಂಬಿಯಂತೆ ಕುಣಿಸ ಬಲ್ಲ
ಜಗವ ನೆಲ್ಲವ ನುಂಗಿ ಒಬ್ಬನೇ ಇರಬಲ್ಲ
ಜಗದೀಶನ ಲೀಲೆ ಮಕ್ಕಳಾಟಕೆ ಕಾಣೊ
ಜಗದೊಳೀತಗೆ ಒಂದು ಸರಿಯ ವಸ್ತು
ಮಿಗಿಲು ಉಂಟೆಂದರೆ ಹೀಗೆ ಹಾಗೆನ್ನ ಬಹುದು
ಜಗದೀಶ್ವರನ ಇಚ್ಛೆ ಇಂಥಾತೆ
ಮಗಳಿಗೆ ಪತಿಯಾದ ಮಗಳಿಗೆಳಿಯನಾದ
ಮಗುವಾಗಿ ಗೋಪಿಯ ಮೊಲಿಯ ನುಂಡ
ಬಗೆ ಬಗೆ ಜಗದೊಳು ಹಗರಣ ತೋರಿದ
ನಗುಬಾಟ ಈ ದೈವ ನಮ್ಮ ನಿಮ್ಮಿಂದೇನು
ಜಗ ದೊಳಗಿನ್ನು ತ್ರಿವಿಧ ಜೀವಿಗಳು ತಾವು
ರಘುಪತಿ ನಡಿಸಿ ನುಡಿಸಿಂದತೆ ನುಡಿವೋರು
ಜಗದವಲ್ಲಭ ನಮ್ಮ ಗೋಪಾಲವಿಠ್ಠಲನು
ಅಗಲ ನಂಬಿದವರ ಸೊಗಸಾಗಿ ಪೊರೆವೂವ ॥ 5 ॥

ಅಟ್ಟತಾಳ

ಉತ್ತಮ ರೊಳಗೆಲ್ಲ ಉತ್ತಮ ಈತನೆ
ನಿತ್ಯ ವಸ್ತುಗಳಲ್ಲಿ ಹರಿ ಒಬ್ಬನೆ ನಿತ್ಯ
ಸತ್ಯ ಸಂಕಲ್ಪನು ಸತ್ಯ ಮಹಿಮನು
ಸತ್ಯ ವಾಕ್ಯವು ವರ ನಿತ್ತ ನಿತ್ತರೆ ತಪ್ಪನು
ಮತ್ಯ ಈ ತೆರದಿ ದೇವತೆಗಳೆಲ್ಲ ತಾವು
ಚಿತ್ತಜ ನಯ್ಯನ ಆಜ್ಞದಿಂದಲೆ ವರ
ವಿತ್ತು ಪಾಲಿಸುವರು ಶಕ್ತರಲ್ಲ ತಾವು
ಮೃತ್ಯ ಲಾಭಾ ಲಾಭ ಹರಿ ಆಧೀನವು
ಕರ್ತಾ ಭೋಕ್ತಾ ನೀತನಲ್ಲದಿಲ್ಲವಿನ್ನು
ವ್ಯರ್ಥಮನುಜ ನಿನ್ನ ಪುತ್ರ ಮಿತ್ರರಿನ್ನು

ನಿತ್ಯರೆಂದು ನೀನು ಸ್ವಾರ್ಥದಿ ಕೆಡಬೇಡ
ನಿತ್ಯದಿ ಹರಿಪಾದ ಅರ್ಥಿಲಿ ಸ್ಮರಿಸುವರ
ಉತ್ತಮರ ಸಂಗ ಹತ್ತಿಕೊಂಡಿರು ಇನ್ನು
ಇತ್ತಲನ್ಯವರ ಅಹಿತವ ನುಡಿದರೆ
ಕತ್ತಲೆ ಪದವಿಗೆ ನಿನ್ನನು ಹಾಕುವ
ಚಿತ್ತಜನಯ್ಯನ ಭೃತ್ಯರಲ್ಲಿ ಇನ್ನು
ಜತ್ತಾಗಿ ಭಕುತಿಡೆ ಹತ್ತೆಗರವ ಹರಿ
ಉತ್ತರ ಪೇಳುವೆ ನಿನಗಿಂದೆರಡು ಗುಣ
ಉತ್ತಮರ ಪಿಡಿದು ಅಹ ಸಿರಿ ಪರಿಯಂತ
ಭೃತ್ಯ ಭಾವ ವಹಿಸಿ ಚಿತ್ತ ಶುದ್ಧನಾಗಿ
ನಿತ್ಯುಳ್ಳ ಪದವಿ ನಿತ್ಯ ನಿತ್ಯ ಪಡಿಯೊ
ಭಕ್ತ ವತ್ಸಲ ರಂಗ ಗೋಪಾಲವಿಠ್ಠಲ
ಎತ್ತ ನೊಡಿದರತ್ತ ಸುತ್ತ ನಲಿವುತಿಪ್ಪ ॥ 6 ॥

ಆದಿತಾಳ

ಕಾರಣ ವೆಂಬಂಥ ಕಾರ್ಯ ಸರ್ವರಿಗುಂಟು
ಕಾರಣ ಶ್ರೀ ಮುಖ್ಯ ಹರಿ ಕಾಣೊ
ಕಾರಣರು ನಮಗೆ ಹರಿಯ ತೋರಿಸುವಂಥ
ಕಾರಣ ಕರ್ತರ ಪೇಳುವೆನು
ಕಾರಣಕೆ ಮಾಡುವ ಕಾರ್ಯಗಳೆಲ್ಲ ಜಡ
ಕಾರಣ ದಿಂದೇನು ಫಲವಿಲ್ಲ
ಕಾರಣ ಪ್ರಥಮ ಶ್ರೀ ಮರುತನಮಗೆ
ಕಾರಣ ಈತನವರೆಲ್ಲ ನಮಗೆ
ಕಾರಣವಂತರಾದ ಕಾರಣದಿಂದಲಿ
ಕಾರಣ ದ್ವಾರಕೆ ಕಾರ್ಯವಯ್ಯಾ
ಕಾರಣಿಲ್ಲದ ಕಾರ್ಯ ಒಂದಾದರು ಇಲ್ಲಾ
ಕಾರಣಕೆ ಕಾರಣ ಮಾಡಿಸುವ
ಕಾರಣಾ ಮಾಡಿನ್ನು ಕರ್ಮಫಲ ಉಣಿಸುವ
ಕಾರಣ ಶ್ರೀ ಹರಿಗೆ ನಮೊ ನಮೊ
ಕಾರುಣ್ಯ ಮೂರುತಿ ಶ್ರೀ ಗೋಪಾಲವಿಠ್ಠಲ
ಕಾರಣವಿಲ್ಲದೆ ಕಾರ್ಯ ಮಾಡಿಸಾನು ॥ 7 ॥

ಜತೆ

ಈ ಪರಿ ತಿಳಿದವರಿಗೆ ಅಪತ್ತು ಹರಿಸಿ
ತಾ ಪಾಲಿಸುವ ಬಿಡದೆ ಗೋಪಾಲವಿಠ್ಠಲ ॥ 8 ॥

ಧ್ರುವತಾಳ **ಸುಳಾದಿ 67** ರಾಗ : ಕಾಂಬೋಧಿ

ಲಕುಮಿದೇವಿಗೆ ಈಶ ಎನಗೆ ನೀನೆವೆ ಈಶ
ಸಕಲ ಬೊಮ್ಮಾದಿ ಸುರರಿಗೆಲ್ಲರಿಗೆ ನೀ ಈಶ
ಮುಕುತುದಾಯಕ ಸರ್ವ ವ್ಯಾಪ್ತನೆ ಸರ್ವೇಶ
ಭಕುತ ವತ್ಸಲ ಆರ್ತಜನ ಭಯ ನಿವಾರಣ
ಶಕುತಿ ಮುಕುತಿ ಸರ್ವ ಚೇಷ್ಟ ಪ್ರದಾಯಕ
ಸಕಲರಂತರ್ಯಾಮಿ ಹೇ ಸರ್ವೊತ್ತಮ ಹರಿಯೆ
ಅಕಳಂಕ ಗುಣ ಅಪ್ರಾಕೃತನೆ ನಿರ್ದೋಷ
ಸಕಲ ಠಾವಿಲಿ ವ್ಯಾಪ್ತ ಸರ್ವೇಶ ನಿರ್ಲಿಪ್ತ
ನಖಶಿಖವೆಲ್ಲ ಪೂರ್ಣ ಜ್ಞಾನಾನಂದ ಕಾಯಾ
ಮಕರ ಕುಂಡಲ ಕೊರಳ ಮಾಲೆಯಿಂದ ಶೋಭಿತ
ಭಕುತ ಜನಕೆ ಸುಖ ವ್ಯಕುತ ಮಾಡಿಪ ದಾತಾ
ಆಟಕಕಟ ನಾ ನಿನ್ನ ಅರಿಯದೆ ಮೋಸ ಹೋದೆ
ಉಕುತಿಗಳಿಂದ ನಿನ್ನ ಒಂದಿನ ವಾದರು
ಯುಕುತಿ ಪೂರ್ವಕವಾಗಿ ತುತಿಯೆನು ಮಾಡಲರಿಯೆ
ರುಕುಮಿಣಿಯ ವಲ್ಲಭ ಗೋಪಾಲವಿಠ್ಠಲ
ಭಕುತರಲ್ಲಿ ನಿಂತಿರುವೆ ಭಯ ಅಭಯ ನೀವುತಲಿ ॥ 1 ॥

ಮಟ್ಟತಾಳ

ಅಚ್ಯುತನೆ ಕೇಳು ಅನಂತನೆ ಕೇಳು
ಮತ್ಸ್ಯಾದಿಯೆ ಕೇಳು ಸಚ್ಚಿದಾನಂದ
ಸ್ವಚ್ಛುಳ್ಳ ವಿಗ್ರಹ ಸ್ವರಮಣ ಚಲ್ವಾ
ನಿಚ್ಚಳಾ ನಿಚ್ಚಳ ನಿತ್ಯತೃಪ್ತ ದೇವ
ಹೆಚ್ಚಿನ ಹೆದ್ದೈವ ಹೆ ದೋಷ ದೂರ
ಕುಚ್ಛಿತ ನರರಿಗೆ ಕುರುಹು ತೋರದವನೆ

ವತ್ಸನ ಬಿನ್ನಪ ಒದಗಿ ಮನಕೆ ತಂದು
ತುಚ್ಚಿ ಕರೀಸದಲೆ ತುತ್ತು ಮಾಡಿಟ್ಟಂತೆ
ಎಚ್ಚರಿಕೆಯು ನಿತ್ತು ಎಡ ಬಲದಲೆನಗೆ
ಇಚ್ಛೆಯು ನಿನ್ನಲ್ಲೆ ಈಸಾಡಿಸು ನಿರುತ
ನೆಚ್ಚಿಸು ನಿನ್ನನೆ ನ್ಯಾಯದಿಂದಲಿನ್ನು
ಅಚ್ಚ ಕರುಣೆ ರಂಗ ಗೋಪಾಲವಿಠ್ಠಲ
ಪೆಚ್ಚದ ಅಘವೆಲ್ಲ ನುಚ್ಚುಮಾಡಿ ಸಲಹೊ ॥ 2 ॥

ರೂಪಕತಾಳ

ಭಕುತರಾಧೀನನಾಗಿ ನೀನು ಇರುವೆ ಅಯ್ಯಾ
ಭಕುತರಿಗಾಗಿ ನೀ ಕರ್ಮಗಳ ಮಾಡುವಿ
ಭಕುತರಿಗಾಗಿ ನೀ ವ್ಯಕ್ತವ ಆಗುವಿ
ಭಕುತರಿಗಾಗಿ ನೀ ಸಂಕಲ್ಪ ಮಾಡುವಿ
ಭಕುತರಿಗಾಗಿ ನೀ ಪುರಗಳ ಸೃಜಿಸುವಿ
ಭಕುತರಿಗಾಗಿ ನೀ ಉಣುತ ಉತ್ಸಾಹ ಪಡುವಿ
ಭಕುತಿಗಾಗಿ ಅಳದೆ ಬಳದೆ ನೆಂಬಿ
ಭಕುತರಿಗಾಗಿ ನೀ ಹಿಗ್ಗುವಿ ಹಿತ ಬಡುವಿ
ಭಕುತರಿಗಾಗಿ ನೀ ಬಂದ ಹೋದ ನೆಂಬಿ
ಭಕುತರಿಗಾಗಿ ಸರ್ವ ಜಡಗಳ ಸೃಜಿಸುವಿ
ಭಕುತರಿಂದಲಿ ನೀನು ಭೇದನಾಗಿಪ್ಪೆ
ಭಕುತರು ಎಲ್ಲರು ನಿನ್ನಾಧೀನರಯ್ಯಾ
ಭಕುತ ವತ್ಸಲ ನಮ್ಮ ಗೋಪಾಲವಿಠ್ಠಲ
ಭಕುತರಿಂದಲಿ ಬಾಹೋ ಫಲ ನಿನಗೊಂದಿಲ್ಲ ॥ 3 ॥

ಝಂಪೆತಾಳ

ನಿನ್ನ ಭಕ್ತರು ನಿನ್ನನೆ ಹುಡುಕುವರು
ಚನ್ನಾಗಿ ನೀ ಇನ್ನು ಭಕುತರಾ ಹುಡುಕುವಿ
ನಿನ್ನನೆ ಆಶ್ರಯಿಸಿ ತಮ್ಮ ಮನ ಬಂದಂತೆ
ಯಿನ್ನಿಪ್ಪುವರು ಸು ಸನ್ಮಾರ್ಗದಿಂದಲಿ
ನಿನ್ನ ಬಲದಿಂದಲೆ ಮೆರೆವುವರು ಶಿರಿಯಿಂದ

ನಿನ್ನ ಬಲದಿಂದಲೆ ಉರುವುವರು ಜಗವೆಲ್ಲ
ಅನ್ಯರ ಗಣನೆ ಇಲ್ಲ ಸ್ವಧರ್ಮ ದಿಂದಲೆ
ಘನತೆ ಇಂದಲಿ ಉಬ್ಬಿ ಕೊಂಡಿಹರಯ್ಯಾ
ಘನ್ನ ಮಹಾ ಮಹಿಮ ಗೋಪಾಲವಿಠ್ಠಲ
ನಿನ್ನ ಭಕತರಿಗೆ ನಿನ್ನ ಮಹಿಮೆಗೆ ನಮೋ ॥ 4 ॥

ತ್ರಿವಿಡಿತಾಳ

ಇಟ್ಟು ನೋಡಿವ್ಯೆಯ್ಯಾ ಭಕತಾರಲ್ಲೆ ನೀನು
ಬಿಟ್ಟು ನೋಡಿವಯ್ಯಾ ಭಕತಾರಲ್ಲೆ ನೀನು
ಕೊಟ್ಟು ನೋಡಿವೆಯ್ಯಾ ಭಕುತರಲ್ಲೆ ನೀನು
ಕಟ್ಟಡಿಯಾ ಮಾಡಿ ಕರ್ಮ ಮಾಡಿಸುತ್ತ
ಇಷ್ಟ ನಷ್ಟವು ಎಂಬೊದಾರಿಯ ತೋರಿಸುತ್ತ
ಕಷ್ಟಗತಿಗೆ ಅವರ ಕೆಡಹಾದಲೆ
ದುಷ್ಟ ಜನರಿಗಿನ್ನು ಈ ಮೂರು ಕ್ರಿಯಾವು
ದೃಷ್ಟಿಲಾದರೂ ಅವರ ನೋಡಿಸದೆ
ಸೃಷ್ಟಿಸ್ಥಿತಿಲಯ ಮೂರ ರೊಳಗೆ ನೋಡೆ
ಸ್ಪಷ್ಟವಾಗಿ ತೋರೋದು ನಿನ್ನವರಿಗೆ
ಧಿಟ್ಟ ನಾಗಿಪ್ಪರು ಕಳಿಯ ಗುಂದದಲೆ
ನಷ್ಟ ಲಾಭಕಿನ್ನು ಅಂಜದಲೆ
ಹುಟ್ಟಿಲಿ ಉದಕವು ಅಟ್ಟಿ ನೂಕಿದಂತೆ
ಭ್ರಷ್ಟ ಸಂಗತಿಗಿನ್ನು ಸಿಲುಕದಲೆ
ಇಷ್ಟದೈವ ನಮ್ಮ ಗೋಪಾಲವಿಠ್ಠಲ
ಇಷ್ಟರೊಳಗೆಲ್ಲ ಇಷ್ಟ ವಸ್ತುವು ನೀನೆ ॥ 5 ॥

ಅಟ್ಟತಾಳ

ಮಂದರಧರನೆ ಮಹ ಭಯಹಾರಿ
ಸುಂದರ ವಿಗ್ರಹ ಶುಭ್ರವರ್ನ ಗೋ
ವಿಂದ ಇಂದಿರಾಪತಿ ಇಂದುವದನ ಆ
ನಂದ ಪೂರ್ಣನೆ ಅಜ್ಞಾನ ವಿನಾಶಕ
ವೃಂದಾವನದಿಂದ ನಂದ ಗೋಪಿಯ ಕಂದ

ವಂದೇ ಮೂಲ ಅನಂತಾ ವತಾರದಿ
ನಿಂದು ಸಕಲರ ಮಂದಿರದೊಳಗೆ
ಛಂದದಿ ನಲಿನಲಿದಾಡಿ ಕುಣಿವ ಮು
ಕ್ಕುಂದ ಮುರಾರಿ ಮೂಜಗದೊಡೆಯಾ
ಮಂದಾಕಿನಿಯೆ ಪೆತ್ತ ಮಹಾದಾದಿ ದೈವ
ಬಂಧಕ ಮೋಚಕ ಭಕತವತ್ಸಲ
ಶಿಂಧು ಶಾಯಿ ಕರುಣಾಕರ ಕೃಷ್ಣ
ಬಂಧು ಅನಿಮಿತ್ತ ಗೋಪಾಲವಿಠ್ಠಲ
ಸಂದರುಶನವಿತ್ತು ಸಲಹೆನ್ನ ಬಿಡದೆ ॥ 6 ॥

ಆದಿತಾಳ

ನಿನ್ನ ವ್ಯಾಪಾರವೆ ಯೆನಗೆ ವ್ಯಾಪಾರವು
ನಿನ್ನ ತಿಳುವ ಜ್ಞಾನ ಯನಗದೆ ಧನವು
ನಿನ್ನ ನೋಡುವ ರೂಪ ಯನಗದೆ ವಿಷಯವು
ನಿನ್ನೊಳಗಾಡೋಡಿ ಎನಗೆ ಆನಂದವು
ಇನ್ನಾತು ಈಪರಿ ಸುಖ ಸುಖ ಇರಲಾಗಿ ಎನಗೆ
ಯಿನ್ನಿದಲ್ಲದೆ ಭಿನ್ನ ವಸ್ತುವಿನಿಂದ
ನಿನ್ನಂದಾಗುವ ಸುಖ ಇನ್ನಾಗ ಬಲ್ಲದೆ
ನಿನ್ನ ನಂಬಿದ ಅಚ್ಚೆನ್ನ ಭಕುತರೆಲ್ಲ
ನಿನ್ನ ವಿಷಯ ಕರಿಸಿ ಸಿನ್ನು ಇಪ್ಪುವರಯ್ಯಾ
ನಿನ್ನವರಾ ಕೃಪಿ ಯನಗಾಗುವದಕ್ಕೆ
ನಿನ್ನ ಕರುಣದಿಂದ ಮನ್ನಿಸುವರಯ್ಯಾ
ಘನ್ನ ದಯಾನಿಧಿ ಗೋಪಾಲವಿಠ್ಠಲ
ನಿನ್ನಲ್ಲದೆ ನಾ ಇನ್ನೋಂದರಿಯೆ ॥ 7 ॥

ಜತೆ

ಜಗದ ಆಂತರ್ಯಾಮಿ ಎನ್ನ ಅಂತರ್ಯಾಮಿ
ಅಘದೂರ ಗೋಪಾಲವಿಠ್ಠಲ ಅನಿಮಿತ್ತ ಬಂಧು ॥ 8 ॥

## ಸುಳಾದಿ 68

ಧ್ರುವತಾಳ

ಹೊತ್ತು ಹೋಗಾದಿನ್ನು ಅನಾದಿ ಅವಿದ್ಯವಿನ್ನು
ಹೊತ್ತಿ ಸಲಿಜ್ಞಾನಾಗ್ನಿ ಬಲ ಸಾಲದು
ಹೊತ್ತು ಬಹು ಆಯಿತು ಇನ್ನು ತೀರಿದಲ್ಲಾ
ಹೊತ್ತು ಹಾಕೊ ಉಪಾಯ ತಿಳಿಯಲಿಲ್ಲ
ಹೊತ್ತು ಬಹು ಹಣಿದು ಮಮತೆಂಬೊ ಭಾರವಪೊತ್ತು
ಹೊತ್ತು ಅವದೊ ಎನಗೆ ನಿನ್ನ ತಿಳಿಯಾ
ಹೊತ್ತಾಡುವವು ಎನ್ನ ಕಾಮಾದಿಗಳು ಬಿಡದೆ
ಹೊತ್ತು ಹಾಕುವವು ನಾನಾ ವಿಷಯಾ ಗಳಿಗೆ
ಹೊತ್ತು ವಂದು ದಿನದ ವಳಗಾಗಿ ಲವಕಾಲ
ಹೊತ್ತು ನಿನ್ನಾ ಸಂಸ್ಕೃತಿಯು ಮನಕೆ ಬಂತೆ
ಹೊತ್ತು ಅಂದರೆ ಅದೆ ಹೊತ್ತು ಸರಿಕಾಣಿಯ್ಯಾ
ಹೊತ್ತಾವನೆ ಸರಿ ಬರಿದೆ ಹೊತ್ತು ವ್ಯರ್ಥ
ಹೊತ್ತು ಆಡುವ ಧೊರಿಯೆ ಗೋಪಾಲವಿಠ್ಠಲ
ಹೊತ್ತು ನಡಿಸುವ ವಾದದ್ಹತ್ತಿಲಿಡಿಸೆನ್ನಾ ॥ 1 ॥

ಮಟ್ಟತಾಳ

ನಿನ್ನ ಸ್ಮೃತಿಯ ಕಾಲ ವಿಸ್ಮೃತಿ ಅಕಾಲ
ನಿನ್ನ ಸ್ಮೃತಿಯೆ ಪುಣ್ಯ ವಿಸ್ಮೃತಿಯೆ ಪಾಪಾ
ನಿನ್ನ ತಿಳಿದವ ಸರ್ವ ತಿಳಿದವ
ನಿನ್ನ ಅರಿಯದವ ನಿರಯಾ ಬಿದ್ದಾವ
ಇನ್ನು ನಾನಾವಿಧಿಯು ತಾನು ಮಾಡಿದವ
ನಿನ್ನಂದಲಿ ಒಂದು ಕರ್ಮ ಮಾಡಿದಾವಾ
ಪುಣ್ಯವೆಂದುರು ಇದೆ ಪಾಪವೆಂದರು ಅದೆ
ಅನ್ಯಾಸಕ್ತಿ ಎಂಬೋದೆನಗೆ ದೋಷ
ನಿನ್ನಾ ಸಕ್ತಿ ಎಂಬೋದೆನಗೆ ಪುಣ್ಯ
ಎನ್ನ ಯತನವೇನು ಇನ್ನಿದ ಕಾದರು
ನಿನ್ನ ಕರುಣದಿಂದೆ ಇಂದು ಆಗಲಿ ಬೇಕು
ಘನ್ನ ದಯಾನಿಧೆ ಗೋಪಾಲವಿಠ್ಠಲ
ಅನ್ನಂತಾನಂತ ಅಘಟಿತಾ ಮಹಾ ಘಟಿತಾ ॥ 2 ॥

ರೂಪಕತಾಳ

ನಿನ್ನ ಕರುಣವೆಂಬಾ ಮಹಾಸೋನಿಗೆ
ಎನ್ನ ದೋಷವೆಂಬ ವಹ್ನಿ ತಾ ನಿಲ್ಲುವದೆ
ನಿನ್ನ ಕರುಣಾರಸದ ಬಲವೆಲ್ಲಿ ನೀನೆಲ್ಲಿ
ಎನ್ನಲು ಎನಸಲ್ಲ ಬಲ್ಲ ಮಾತಿಗೆ ದೇವ
ನಿನ್ನ ಕರುಣಾದಿಂದ ಪೋಗುವಷ್ಟು ಪಾಪ
ಎನ್ನಿಂದಾಗುವದೆ ಎಲೆ ಎಲೆ ಸರ್ವಜ್ಞ
ನಿನ್ನ ಅನಂತಕ್ಕೆ ಅಂತಿ ಎಂಬುದು ಇಲ್ಲ
ಕಣ್ಣಿಲಿ ಕಟ್ಟಿಸಿಕೊಂಡಿ ಎಂತೋ ಕರುಣಿ
ನಿನ್ನ ಅಣಿತ್ವಕ್ಕೆ ವಿಶ್ರಾಂತಿ ಇಲ್ಲಾ ಸರಿ
ಇನ್ನೇಕ ಕಾಲದಲೆ ಅಣು ಮಹಾತ್ತು ರೂಪ
ವನ್ನೆ ವಂದಾರಲ್ಲೆ ತೋರ್ಪದೆಂತೋ
ಚಿನ್ಮಯ ಮೂರುತಿ ಗೋಪಾಲವಿಠ್ಠಲ
ನಿನ್ನ ಆಟವನು ಬಲ್ಲರೊ ನಿನ್ನವರು ॥ 3 ॥

ಝುಂಪೆತಾಳ

ಕೋಡಗ ತನ್ನ ಮರಿಯಾಕಚ್ಚಿಕೊಂಡು ಇನ್ನು
ಓಡ್ಯಾಡಿದರು ಇನ್ನು ನಾನಾ ಕಡಿಗೆ
ಬಿಡಿಸಿ ಕೊಳ್ಳದಾ ಇಪ್ಪುವಾ ಸ್ವಾತಂತ್ರಾ
ಕೋಡಗಾನದೋ ಅದರ ವತ್ಸನದೋ
ನೋಡೆನ್ನನು ಪಿಡಿದು ಆಡುವ ಆಟವು
ಓಡಿಸಿದಂತೆ ನಾ ಓಡಾಡುವೆ
ಕೋಡುಗಾ ತನ್ನ ಕೂಸ ಕೂಡಕೊಂಡೆ ತಾನು
ಓಡ್ಯಾಡಿ ಫಲ ಮೆದ್ದಾರಿನ್ನು ಮೆಲಿಪುವಾದು
ಕೇಡು ಲಾಭದಸ್ಥಿತಿಯು ಕೂಸು ಬಲ್ಲದೆ ಇನ್ನು
ಕೋಡಗ ಕುಣಿಸಿದಂತೆ ಕುಣಿವಾದು
ರೂಢಿಗೊಡಿಯಾ ದೇವಾ ಗೋಪಾಲವಿಠ್ಠಲ ನೀ
ಆಡಿಸಿದಂತೆ ನಾ ಆಡುವೆನು ॥ 4 ॥

ತ್ರಿವಿಡಿತಾಳ

ಎಷ್ಟು ಅದವು ನೋಡು ಎನಗೆ ಬಂದ ಯೋನಿ
ಕಷ್ಟ ಬಟ್ಟದು ಕಡೆಮೊದಲೆ ಇಲ್ಲಾ
ವೈಷ್ಣವ ಜನ್ಮಂಗಾಳು ಇದ್ದಕ್ಕಿಂತಾಧೀಕಾಗಿ
ಕೊಟ್ಟಾದು ಹಾಗೆ ಸರಿ ಜ್ಞಾನವಿತ್ತು
ಎಷ್ಟೆ ಕಡಿಮೆ ನೋಡು ಆಗ ಈಗಲು ನೋಡಾ
ನಷ್ಟ ಅನಂತಮಾಡಿ ಈ ಜ್ಞಾನಾ ನೆನ್ನ
ಬಟ್ಟಿ ಭವಣಿ ಎಷ್ಟು ಈ ವೈಷ್ಣವನಾಗಿ
ಪುಟ್ಟುವದಕ್ಕೆನಗೆ ಪುಣ್ಯ ಪುರುಷಾ
ಯೆಷ್ಟುಮಂದಿ ಜನಾ ಎನಗೆ ಸಹಾಯವಾಗಿ
ಸೃಷ್ಟಿ ಮಾಡಿಸಿಪ್ಪರು ನೀ ನರಿಯಾ
ಶಿಷ್ಟ ಜನರ ಪಾಲ ಗೋಪಾಲವಿಠ್ಠಲ
ಘಟ್ಟ್ಯಾಗಿ ಪಿಡಿದೆನ್ನ ಸಾಕಬೇಕು ॥ 5 ॥

ಅಟ್ಟತಾಳ

ಸನ್ಯಾಸಿ ಎನಿಸಿ ನಾ ನಿನ್ನ ಕಾಣಲಿಲ್ಲ
ಹನ್ನೆರಡು ನಾಲ್ಕೊರುಷಾ ನರಕಾ ಭೋಗಿಸಿ ಇಪ್ಪೆ
ಇನ್ನು ವೈದಿಕನಾಗಿ ಬ್ರಹ್ಮದ್ರೊಹವು ತಾಕಿ
ಬನ್ನು ಬಟ್ಟು ಇಪ್ಪೆ ಇನ್ನು ಕೆಲವು ಹಿಂದೆ
ಹೆಣ್ಣಿಗಾಗಿ ಪೋಗಿ ಮುನ್ನೆ ಪ್ರಾಣವು ಕೊಟ್ಟು
ಇನ್ನು ಅದರ ಶೇಷ ಈಗನು ಭವಿಸುವೆ
ಇನ್ನೂ ನಾನಾ ದೋಷಾ ಘಟಿಸಿ ಇಪ್ಪುವು ಬಹಳ
ನಿನ್ನ ಕರುಣದಿಂದೆ ಕಡೆ ಹಾಯಿಸೆಂದೆನಿಪೆ
ಅನಿಮಿತ್ತ ಬಂಧು ಗೋಪಾಲವಿಠ್ಠಲ
ನಿನ್ನ ಬಿಟ್ಟವನಲ್ಲಾ ಏನು ಬಂದಾರನ್ನಾ ॥ 6 ॥

ಆದಿತಾಳ

ಪಾಹಿ ಪಂಢರಿ ರಾಯಾ ಪಾಲಿತಾ ನಿನ್ನಿಂದಾ
ಪಾಹಿ ಪಾಂಡವ ಪಾಲಾ ಪಾಪವಿನಾಶನಾ
ಪಾಹಿ ಅಹೋಬಲ ಶ್ರೀ ನಾರಸಿಂಹನೆ

ಪಾಹಿ ಅಳಗಿರಿ ತಿರ್ಮಲರಾಯನೆ
ಪಾಹಿ ಪಾಹಿ ರಾಮಾ ತ್ರಾಹಿತ್ರಾಹಿ ಹರೆ
ಹಾಹಾ ಅಲೌಕೀಕ ಹೊಹೊ ಸುಖಪೂರ್ಣ
ಮಹಾತಿ ಸುಂದರ ಮನ್ಮಥ ಮನ್ಮಥಾ
ದೇಹಿ ಜ್ಞಾನ ಭಕ್ತಿ ವೈದೇಹಿರಮಣನೆ
ರಾಹಸ್ಯದಲ್ಲಿ ನಿನ್ನ ಗಭಿವಂದಿಸುವೆ ಎನಗೆ
ದೇಹ ತಂದಿತ್ತಂತೆ ತತ್ಕಾರ್ಯ ಸಾಧನಾ
ಬಹಳಾಗಿ ಮಾಡಿಸಿ ಬಂದು ವದಗಿ ನೀನು
ಶ್ರೀಹರಿ ಕಾಣಿಸಿಕೊಂಡು ಕಾಯೊ
ನಾಹರೆ ಸಾದ್ರಿಶ್ಯರಹಿತಾ ಗೋಪಾಲವಿಠ್ಠಲ
ಪಾಹಿ ಪಾಹಿ ನಮೊ ನಮೊ ಸ್ವಾಮೀ ॥ 7 ॥

ಜತೆ

ಅಪರಾಧ ಅನಂತಮಾಡಿ ನಾ ಮೊರೆಹೊಕ್ಕೆ
ಅಪಾರ ಕರುಣೆ ಗೋಪಾಲವಿಠ್ಠಲ ಕಾಯೊ ॥ 8 ॥

ಧ್ರುವತಾಳ

## ಸುಳಾದಿ 69

ನೀನೆ ಎನಗೆ ಬಂಧ ನೀನೆ ಎನಗೆ ಮೋಚಾ
ನೀನೆ ಎನಗೆ ಲಿಂಗಾ ನೀನೆ ಗುಣತ್ರಯವು
ನೀನೆ ಎನಗೆ ಲಾಭಾ ನೀನೆ ಎನಗೆ ನಷ್ಟಾ
ನೀನೆ ಎನಗೆ ಧರ್ಮಾ ನೀನೆ ಎನಗೆ ಅಧರ್ಮಾ
ನೀನೆ ಎನಗೆ ಸೃಜ್ಯಾ ನೀನೆ ಎನ್ನ ಪಾಲಕಾ
ನೀನೇವೆ ಸಂಹಾರಕ ನೀನೆ ಎನಗೆ ಕರ್ತು
ನೀನೆ ಸರ್ವ ಪ್ರೇರಕಾ ನೀನೆ ಎನಗೆ ಸ್ವಾಮಿ
ಜ್ಞಾನಮಯ ಆನಂದ ಗೋಪಾಲವಿಠ್ಠಲ
ನೀನೆ ಸರ್ವವ್ಯಾಪ್ತ ನಿತ್ಯ ತೃಪ್ತಾ ॥ 1 ॥

ಮಟ್ಟತಾಳ

ಭಿನ್ನ ಭಿನ್ನ ಪುಣ್ಯ ಭಿನ್ನ ಭಿನ್ನ ಪಾಪಾ
ಭಿನ್ನ ಭಿನ್ನ ಜೀವಾ ಕಿನ್ನು ಎಣಿಸುವಿ

ಅನ್ಯ ವಿಷಯ ದಲ್ಲಿ ನನ್ನದೆಂಬೋ ಮಮತಿ
ಇನ್ನು ಪಚ್ಚೆ ಹರಿಯೆ ನಿನ್ನ ತಿಳಿಸದೆ
ಬನ್ನ ಬಡಿಸುವಿ ಮುನ್ನೆ ತೊರದಂತೆ
ಭಿನ್ನ ಪುಣ್ಯ ಬೀಜಾ ಭಿನ್ನ ಪಾಪ ಬೀಜಾ
ಇನ್ನು ಕೆಡುವದೆಂದು ಮುನ್ನ ಅರಿಯ ಒಂದು
ಘನ್ನ ದಯಾನಿಧೆ ಗೋಪಾಲವಿಠ್ಠಲಾ ನಿನ್ನ
ಚುನ್ನಾಟಕೆ ಇನ್ನು ನಮೋ ಎಂದೆ ॥ 2 ॥

ರೂಪಕತಾಳ

ಅನ್ಯಾ ವಿಷಯಗಳೆ ಭಿನ್ನಧರ್ಮ ಎನೆಗೆ
ನಿನ್ನ ವಿಷಯ ಕರಿಸುವದೆ ಪುಣ್ಯ ಧರ್ಮ
ವೆನ್ನಗೆ ಇಂತು ಈಪರಿ ಇರಲಾಗಿ ಏ ದೇವಾ
ಎನ್ನ ದಣಿಸುವಾದು ಇನ್ನಾವ ನ್ಯಾಯವೊ
ಎನ್ನ ಮಮತೆ ಭಿನ್ನದಲ್ಲಿ ಪುಟ್ಟಿಪ್ಪಾವು
ನಿನ್ನಾಧೀನ ಮತ್ತೆ ನೀ ಅದಕೆ ಪ್ರೇರಕಾ
ಭಿನ್ನ ಕಾಮರಹಿತ ಗೋಪಾಲವಿಠ್ಠಲ
ನಿನ್ನವಾ ನಿನ್ನವಾ ನಿನ್ನವಾರವನೋ ॥ 3 ॥

ಝುಂಪೆತಾಳ

ಎಲ್ಲಾದೆ ಅಹುದೆಂಬೊ ಬಲ್ಲದ್ದು ಅರಿಯೆನು
ಕಲ್ಲು ಕಠಿಣವೆಂಬೊ ಜ್ಞಾನವಿಲ್ಲಾ
ಬೆಲ್ಲ ಬೇವು ಎಂಬೊ ತೆರನಂತೆ ಬಿಟ್ಟಹೆ
ಅಲ್ಲವಯ್ಯನಗೆ ಹೀಗ್ಯಾಕೆ ತಿಳಿಪಿ
ಸಲ್ಲದು ಈ ಮೇಲೆ ಮೋಸಗೊಳಿಸದಿರೆನಗೆ
ನಿಲ್ಲಯ್ಯಾ ನಿನಗೆ ನಿನ್ನ ಭಕುತರಾಣೆ
ಬಲ್ಲೆ ನಾನೆಲ್ಲ ನಿನ್ನ ಮಾಯವೆಂಬುವಾದು
ಎಲ್ಲ ನೀನಿಲ್ಲದೀ ಜಗಕೆ ಸ್ವಾತಂತ್ರಾ
ಎಲ್ಲಾ ಸುರರೊಡೆಯ ಗೋಪಾಲವಿಠ್ಠಲರೇಯಾ
ಬಲ್ಲವರ ಮುಂದೆ ಬಚ್ಚಿಡುವ ದೊಳಿತಲ್ಲಾ ॥ 4 ॥

ತ್ರಿವಿಡಿತಾಳ

ಎನ್ನ ಮನಸಿನಲ್ಲಿ ನಿನ್ನ ಮನಸು ಇಟ್ಟು
ಭಿನ್ನ ವಿಷಯಾದಲ್ಲಿ ಎನ್ನ ಎಳಿವಿ
ಎನ್ನ ವಸ್ತದ ಖೂನಾ ಇನ್ನು ನಾನರಿಯಾದೆ
ಭಿನ್ನ ವಿಷಯಾದಲ್ಲಿ ಮೋಸಹೋದೇ
ಎನ್ನಂತೆ ನೀ ಬ್ಯಾರೆ ಮೋಸ ಹೋಗುವನಲ್ಲಾ
ಇನ್ನು ತ್ರಿಗುಣಗಳಿಗೆ ನಿಯಾಮಕಾ
ನಿನ್ನ ವಿಷಯಗಳಿಗೆ ನಿನಗೆ ಅಭೇದಾ
ಎನ್ನ ವಿಷಯಕ್ಕೆ ಎನಗೆ ಭೇದಾಭೇದಾ
ಇನ್ನಿತು ಈ ಬಗೆ ಇಪ್ಪುವದೆಲ್ಲಾನು
ನಿನ್ನಾಧೀನಾ ದೇವಾ ನಿನ್ನಾವನೊ
ಅನಂತ ಗುಣಪೂರ್ಣ ಗೋಪಾಲವಿಠ್ಠಲ
ಇನ್ಯಾತಕೊ ಸಂಶಯ ನೀನಲ್ಲಾದೊಂದಿಲ್ಲಾ ॥ 5 ॥

ಅಟ್ಟತಾಳ

ವಂದೆ ಅನಂತಾಗಿ ಹೊಂದಿವಾ ವ್ಯಾಪ್ತಾನೆ
ಮಂದಮತಿ ನಾ ತಿಳಿಯಾ ನಿನ್ನೊಶವೆ
ಎಂದಿಗೆ ಈ ಬಂಧಾ ಛಿಂದಿ ಆಗುವದೊ ಮ
ತ್ತೆಂದಿಗೆ ಲಿಂಗ ದೇಹವು ದಹಿಸುವದೊ
ಎಂದಿಗೆ ನಿನ್ನ ಪಾದಾಂಬುಜ ದೂರವಾದೊ
ಎಂದಿಗೆ ತ್ರಿಗುಣಾತೀತ ನಾಗುವೆನೊ
ಸುಂದರ ಮೂರುತಿ ಗೋಪಾಲವಿಠ್ಠಲ
ತಂದೆ ನಿನ್ನ ಪಾದಾ ಅಂದಿಸೊ ಮನಕೇ ॥ 6 ॥

ಆದಿತಾಳ

ಕಾಲ ಎನಗೆ ಕಾರಣಲ್ಲಾ ಕರ್ಮ ಎನಗೆ ಕಾರಣಲ್ಲಾ
ಶೀಲ ವಿಮಲ ಕಾರಣಲ್ಲಾ ಕಾಮವೆಂಬೋದೆ ಕಾರಣಲ್ಲಾ
ಮೇಲು ಮೇಲು ಪೂರ್ವಕರ್ಮ ಕಾರ್ಣಗಳಿಗೆ ಕಾರ್ಣ ನೀನೆ
ಪಾಲ ಸಾಗರ ಶಾಯಿ ಚಲ್ವ ಗೋಪಾಲವಿಠ್ಠಲ
ಆಲೊಚನೆಯು ಇಲ್ಲ ಎನಗೆ ಆಪ್ತ ಬಂಧು ನೀನೆ ನೀನೆ ॥ 7 ॥

ಜತೆ

ಹಿಂದೆ ಇಂದು ಮುಂದೆ ಮತ್ತೆ ಎಂದೆಂದಿಗೆ ಇದೆ
ಒಂದೆ ಮಾತಯ್ಯಾ ಗೋಪಾಲವಿಠ್ಠಲ ತಂದೆ ॥ 8 ॥

ಧ್ರುವತಾಳ **ಸುಳಾದಿ 70** ರಾಗ : ಪಂತುವರಾಳಿ

ಇಂದುವಿನ ಪೋಲ್ವ ಪಾದಾದಂದಿಗೆ ಗೆಜ್ಜೆ ಗುಲ್ಲೆ
ಮಂದ ಕದಳಿ ಸ್ತಂಭಾದಂದಾದಿ ವೂರು ಜಾನು
ಛಂದಾದಿ ವುಡಿ ಘಂಟೆ ಕುಂದಣ ದುಡಧಾರಾ
ಬಿಂದುಲಿ ಕಡಿಯ ತೋಳ್ಬಂದಿ ಮುದ್ದಿನುಂಗರಾ
ಗಂಧ ಪೂಸಿದ ಕಂದರ ದಿಶಾಗ್ರ ನಖವು
ಪೊಂದಿಸಿ ಇಟ್ಟ ಕರ್ನಾ ಕುಂಡಲಾನಂದ ಮುಖ
ಮಂದ ಹಾಸ ಅರವಿಂದ ನಯನ ಚಲ್ವ
ಅಂದವಾದರಳೆಲೆ ಸುಂದರ ಕಿರೀಟಾವು
ವೃಂದಾವನದಿ ಗೋವಿಂದ ಸಿರಿಕೃಷ್ಣ
ಇಂದಿರಾಪತಿ ಅಮರೇಂದ್ರ ವಂದಿತಾ
ಕಂದರ್ಪ ಜನಕ ಏನಂದ ನಂದನ ಕಂದಾ
ಹಿಂದೆ ಕಾಳಿಂದಿಮ್ಯಾಲೆ ನಿಂದು ಕುಣಿದಂತೆ
ಇಂದೆನ್ನ ಮನವೆಂಬ ಮಂದಿರಾದೊಳು ಬಂದು
ಧಿಂಧಿಮಿ ಧಿಮಿಕ್ಕೂ ತೋಂಧಿನಿ ಧಿಗಿ ಧಿಗಿ ಧಿಗಿ
ತಂದನ್ನ ತಾನ ತಥ್ಥೈ ಎಂದು ಕುಣಿದಿನ್ನು
ಹಿಂದಿನ ದೋಷಂಗಳಾ ಕುಂದಾಲೊತ್ತಿನ್ನು ವೇಗಾ
ಮುಂದಿನಾ ದುಷ್ಕೃತಾವು ನಿಂದ್ರ ದಂತಲಿ ಮಾಡು
ಮಂದ ಜನರ ದೋಷವೆಂಬೊ ಅಂಧಕಾರಕ್ಕೆ
ಸುಂದರಾಂಗನೆ ರವಿಯಂದದಿ ನೀ ಪೊಳಿಯೊ
ನಿಂದಿರುವೋದೆ ತಮ ಛಿಂದಿಸಿ ಪೋಗುವದು
ವಂದರ ಫಳಿಗೆನ್ನಾ ಮುಂದೆ ಬಿಡಾದಲೆ
ನಂದಾದಿ ಸುಳಿದೆನ್ನ ಮಂದನ್ನ ಮಾಡದೆ ಮು
ಕ್ಕುಂದಾ ನೀ ಎನಗೆ ಬಂಧು ಕಾಣಯ್ಯಾ ದೇವಾ
ಶಿಂದು ಶಯನ ರಂಗಾ ಗೋಪಾಲವಿಠ್ಠಲ
ಹಿಂದೆ ಮುಂದೆ ಎನಗೆ ವಂದಾಗಿ ಪೊರಿಯೋ ॥ 1 ॥

ಮಟ್ಟತಾಳ

ಬಲಿಯ ದಾನವ ಬೇಡಿ ನೆಲನ ಈರಡಿ ಮಾಡಿ
ಸ್ಥಳವ ಸಾಲದೆ ಬಲಿಯ ಸಿರದಲಿಟ್ಟಿ
ಎಲೆದೇವಾ ಅದೆಪಾದ ಎನ್ನ ತಲಿಯ ಮ್ಯಾಲಿಟ್ಟಿನಗೆ
ತುಳಿಎನ್ನ ದೋಷಗಳು ಅಳಿದು ಪೋಗುವಂತೆ
ಹಲವು ದೋಷಂಗಳಿಗೆ ಬಲು ಅಧಿಕಾರಿ ನಾನು
ನೆಲೆ ಆವು ದೋದಿನ್ನು ತಿಳಿಯ ಕುಳಿತರಿನ್ನು
ಹೊಳಿಯ ನೀರಿಗೆ ತೃಣವು ಮರಳಿ ಬೀಳೋದೆ ಅಡ್ಡ
ನಳಿನ ನಾಭನೆ ನೀನು ನೆಲೆಯ ಬಲ್ಲವನಯ್ಯಾ
ಶುಲಭದಿಂದಲಿ ನಿಚ್ಚಳನಮಾಡಿ ಎನ್ನ
ತಿಳಿಸಿ ನಿನ್ನರೂಪಾ ಇಳಿಯೊಳಗಿಡಿಶೆನ್ನ
ಖಳರ ಮರ್ದನನೆ ಗೋಪಾಲವಿಠ್ಠಲ
ಕಾಲಕಾಲಕೆ ನಿನ್ನ ವಾಲಗ ದೊಳಗಿಡಿಸೋ ॥ 2 ॥

ತ್ರಿವಿಡಿತಾಳ

ನೀನುಪಿಡಿಯೆ ಕುಬ್ಜಿ ಯೌವನಳಾದಳು
ನೀನು ಸೊಂಕಲು ಶಿಲಿ ತಾನೆ ಸ್ತ್ರೀಯಾದಳು
ನೀನಗೆ ನೀ ವರದೆ ಅಂದು ಧೃವರಾಯ ಗೊಲಿದ್ಯೆಯ್ಯಾ
ನೀನು ಸುಖಾ ಶಬರಿ ಫಲವಾ ನುಣ್ಣಿಸಿದಾಳು
ನೀನೊಲಿದವರ ಮಹಿಮೆ ನೀನೆ ಬಲ್ಲಿಯೊ ದೇವಾ
ಆನೇನು ಬಲ್ಲೆನು ನೀನು ತೋರಿಸಿದಷ್ಟು
ನೀನೆ ಎನಗೆ ಸ್ವಾಮಿ ನಾ ನಿನ್ನ ಭೃತ್ಯನೆಂಬೊ
ದಾನು ಒಂದು ಬಲ್ಲೆ ಏನೊಂದು ಅರಿಯೆ ನಾ
ಮನಸಾ ವಾಚಾ ಕಾಯಾ ನಿನ್ನ ನಂಬಿದೆ ದೇವಾ
ಏನು ಮಾಡಿದದೊಳಿತೆ ನೀನೆ ಗತಿ ಎನಗೆ
ಕಾನನ ಪಟ್ಟಣ ಸಮವನು ಮಾಡಿದಂಥ
ಜ್ಞಾನಿಗಳೊಡ ನಿಡಿಸೊ ಅನಂತ ಕಾಲದಿ
ದಾನವಾಂತಹ ರಂಗ ಗೋಪಾಲವಿಠ್ಠಲ
ದೀನ ರಕ್ಷಕ ಭಕ್ತರಾಧೀನ ದೇವಾ ॥ 3 ॥

ಅಟ್ಟತಾಳ

ವಡಿಯನೆ ಎನ್ನಲ್ಲಿ ಅಡಗಿ ಕೊಂಡಿದ್ದಿನ್ನು
ಬಿಡದೆ ಎನ್ನಿಂದ ಮಾಡಿಸಿದ ಕರ್ಮಗಳೆಲ್ಲ
ಸಡಗರದಿ ನಿನ್ನ ಅಡಿಗೆ ಅರ್ಪಿಸಿದರೆ
ವಡನೆ ಎನ್ನನು ನೀನು ಕಡಿಯ ನೋಡುವಿಯಾಕೆ
ಪೊಡವಿಯೊಳು ನ್ಯಾಯಕೆ ಧೃಡಭಕ್ತರಲ್ಲಿ ಬಾ
ಹಿಡಿದು ನಿನ್ನನು ನಾನು ಸಡಲದೆ ಕಟ್ಟುವೆ
ಬಡವನೆಂದು ಬಾಯ ಬಡಿವ ದೊಳಿತಲ್ಲಾ
ಬಿಡು ಬಿಡು ಹಾಗಾದರೆ ಭಕುತ ವತ್ಸಲ ಬಿರಿದಿನ್ನು
ಸಡಗರದ ದೈವಾ ಗೋಪಾಲವಿಠ್ಠಲ
ಕೊಡು ಭಕುತಿ ನಿನ್ನ ಅಡಿಗಳಲ್ಲೆನಗೆ ॥ 4 ॥

ಆದಿತಾಳ

ಹಾಗೆ ಹೀಗೆ ಮನವು ಭೋಗ ವಿಷಯಂಗಳಿಗೆ
ಹ್ಯಾಗೆ ಹೋಗಳೆದರೆ ನೀ ಸಾಗದಂತೆ ಮಾಡಿಯಾ
ನಾಗಾರಿ ಕುಳ್ಳಾ ನಿಜ ಭಾಗವತರಾ ಮನಿ
ಬಾಗಿಲು ಕಾಯುವಂಥ ಭಾಗ್ಯವನಿತ್ತು
ಹ್ಯಾಗೆ ನಿನ್ನ ಚರಣಗಳಿಗೆ ಮರುಳಾಗುವಂತೆ ಮನಾ
ನಾಗಶಯನಾ ಮಾಡೊ ರೋಗವಿಷಯಗಳೆಂಬೊ ಹಾದಿಗೆ ಹರವಿಮುಳ್ಳು
ಜಾಗರತಿದಲೆನ್ನ ನೀ ಕಾಯಬೇಕಿನ್ನು
ಸಾಗರಶಯನ ಗೋಪಾಲವಿಠ್ಠಲ ರೇಯಾ
ಚಾಗುಡಿ ಸಿಕ್ಕದೆ ನೀ ಗರಿ ಮುಂದಕ್ಕೆ ॥ 5 ॥

ಜತೆ

ಎನ್ನಾಪರಾದ ಅನಂತವಿದ್ದರು ಕ್ಷಮಿಸಿ
ಮನ್ನಿಸಿ ಸಲಹೆನ್ನ ಗೋಪಾಲವಿಠ್ಠಲರೇಯಾ ॥ 6 ॥

ಧ್ರುವತಾಳ **ಸುಳಾದಿ 71** ರಾಗ : ಭೈರವಿ

ಸೊಲ್ಲು ಸೊಲ್ಲಿಗೆ ನಿನ್ನ ಪಲ್ಲುದೆರೆದು ಮನ
ಬಿಲ್ಲಾಗಿ ನಿನ್ನ ಪಾದದಲ್ಲಿಟ್ಟು ಬೇಡಿದರೆ
ಎಲ್ಲೋ ಮೊಗ ಅವಲ್ಲಿ ನೋಡುತಲಿದ್ದ್ಯೊ
ಎಲ್ಲ ನಡೆಯೊದೆ ನಿನ್ನ ಬಲ್ಲವರ ಮುಂದಿನ್ನು
ನಿಲ್ಲದೆ ನಮ್ಮ ಮನದಲ್ಲಿದ್ದಭೀಷ್ಟೆಗಳ
ಸಲ್ಲಿಸಿ ಪೊಗೆಂದರೆ ಮಲ್ಲನೆ ಹರಿವದು
ಒಳಿತಲ್ಲಿವೊ ನೀನೆಲ್ಲ ಪೋಗಲಿ ಬಲ್ಲ್ಯೋ
ಸಲ್ಲದು ನಿನಗೆ ಭಕುತರಲ್ಲಿಂಥ ಮಾಯಗಳು
ಎಲ್ಲ ಕಾಲವು ನಮ್ಮನೆಲ್ಲರ ಪೊರಿವಂಥ
ಬಲ್ಲಿದ ಬಿರಿದು ಬೇಕಲ್ಲವೋ ನಿನಗಿನ್ನು
ಹುಲ್ಲು ಮನುಜನೆಂದು ಚಲಿಸದೆ ದೂರ
ದಲ್ಲಿಂದ ನೋಡಿದರೆ ಎಲ್ಲ ನಿನ್ನ ಕಡಿಯೆ
ಗುಲ್ಲಿ ಎಬ್ಬಿಸಿ ಇಳಿಯಲ್ಲರು ತಿಳಿವಂತೆ
ಸೊಲ್ಲಿಂದ ಚಲ್ಲಾಡುವೆ ಪಳ್ಳಿಯೊಳಗೆ ನೀನು
ಎಲ್ಲ ಮಕ್ಕಳ ಕೂಡಿ ಕಳ್ಳತನದಿ ಮನಿಗಳೆಲ್ಲ ಪೊ
ಗಲಾಗಿನ್ನು ಗೊಲ್ಲ ವನಿತೆಯರು ಮೆಲ್ಲನೆ ಪಿಡಿದು ನಿನ್ನ
ಗಲ್ಲವ ಸಸಿದಿನ್ನು ವಲ್ಲೆ ಎಂದೆಂದು ಇಂಥ
ಗೊಲ್ಲ ಎಂತೆಂದು ಕೋಲೆ ಕೊಲಿಲಿಡರು ನಿನ್ನ
ಅಲ್ಲಿದ ತನುಗಳ ಎಲ್ಲ ಕಾರಣ ಬಲ್ಲೆನು
ಬಲ್ಲರೆ ಅಜಭವರೆಲ್ಲ ಸುರರು ಇನ್ನು
ನಿಲ್ಲದೆನೇಕೆ ಬಗೆಯಲ್ಲಿ ಪೂಜಿಸಲಾಗಿ
ಫುಲ್ಲ ಲೋಚನನೆ ಸಾಕಲ್ಯ ಗೈವರಿಗೆ
ಎಲ್ಲ ತೋರಿದೆ ತೋರಿದೆನೊ ಗೋಕುಲದೊಳಗೆ ನೀನು
ಬಳ್ಳಿ ತಲಿಗೆ ಸುತ್ತಿ ಗುಲ್ಲಿಚೀಲವು ಹೆಗ
ಲಲ್ಲಿ ಕಂಬಳಿ ಕರದಲ್ಲಿ ಬಚ್ಚಣ ಗೋಲು
ಕಲ್ಲಿನೊಳಗೆ ಬುತ್ತಿ ಮೊಳ್ಳೂರಿಗೆಯನುಟ್ಟು
ಗುಳ್ಳಾಟಗಳು ಇನ್ನೆಲ್ಲಿ ಕಲಿತೆ ರಂಗ
ಮಲ್ಲಮರ್ದನ ಗೋಪಾಲವಿಠ್ಠಲ ನೀನು
ಬಲ್ಲಿದರಿಗೆ ಬಲ್ಲಿದ ಬಲ್ಲವಗತಿ ಸುಲಭ ॥ 1 ॥

ಮಟ್ಟತಾಳ

ಕರಿರಾಜನಂತೆ ನಿನ್ನ ಕರೆದು ಗಂಭಡಿ ಮಾಡಿ
ಗಿರಿಯ ಸಹಿತ ಬಿಟ್ಟು ಮರುಳು ಗೊಳಿಸಲಿಲ್ಲ
ವರ ಭೃಗುಮುನಿಯಂತೆ ಸರ್ರನೆ ಎದಿಯಲೊದ್ದು
ಹರಿ ನೀನಹುದೆಂದು ಪರೀಕ್ಷಿಸಬೇಕೊ ನಿನ್ನ
ಭರದಿ ಮಡುವಿನೊಳು ಸರನೆ ಕಾಳಿಂಗನಂತೆ
ಹರಿ ಸರ್ವೋತ್ತಮನೆಂದು ಕರೆದ ಕ್ಷಣದಲ್ಲಿ
ನರಮೃಗ ರೂಪವಾಗಿ ತೆರಿಸಲಿಲ್ಲವೋ ಬಾಯಿ
ಧರಿಯೆಲ್ಲವು ನೋಡುವಂತೆ ಕರುಣಾ
ಕರ ರಂಗ ಗೋಪಾಲವಿಠ್ಠಲ
ಕರುಣಾಳೆಂಬೋದು ಅರಿಯದಲೆ ನಾ ನಿನ್ನ ॥ 2 ॥

ತ್ರಿವಿಡಿತಾಳ

ನರನಂತೆ ನಿನ್ನ ಕೈಯ್ಯ ರಥವ ನ್ಹೊಡಿಸಬೇಕು
ಸಿರಿ ದ್ರೌಪದಿಯಂತೆ ಶಾಖ ಮೆಲ್ಲಿಸಬೇಕು
ಸುರನದಿಸುತನಂತೆ ಭರದಿ ನಸುಲಲು ಬಾಣ
ಧುರದಿ ಎಚಿಸಬೇಕು ಪರವು ಮಾಡದೆ ನಿನ್ನ
ತರುಳ ಪುಂಡಲೀಕನಂತೆ ಹರಿಯೆ ಬಂದರೆ ನಿನ್ನ
ತಿರುಗಿ ನೋಡದೆ ತಾನು ಚರಣವು ತೊಳೆಯುತ್ತ
ಉರುಟ ಇಟ್ಟಗೆ ಮೇಲೆ ಹರುಷದಿಂದಲಿ ಕು
ಳ್ಳಿರಿಸಿ ಬೇಕಯ್ಯಾ ನಿನ್ನ ಗರುವತನದಲ್ಲಿನ್ನು
ಪರಮ ಸಂತೋಷದಿ ಉಗ್ರಸೇನನಂತೆ
ಸ್ಥಿರ ಪಟ್ಟಗಟ್ಟಿನ್ನು ಪರಿಪರಿಯಲಿ ನಿನ್ನ
ಪರಿಚಾರಕನ ಮಾಡಿವರ ಉಡ್ಡೋಲಗಿಂದಲಿ
ಕರವೆತ್ತಿ ಧೊರೆಯೆಂದು ಮುತ್ಯನಿಗೆ
ಪರಾಕೆನಿಸ ಬೇಕು ಮರುತನಂತೆ ನೀ ಉಣ ಕುಳಿತೆಡೆಯು
ಸರನೆ ಎತ್ತಿಕೊಂಡು ದೂರ ಓಡಲಿಬೇಕು
ಮರಳಿ ಜಾಂಬವನಂತೆ ಎರಡ್ಡತ್ತೊಂದು ದಿನ
ತಿರುಗಿ ನಿನ್ನ ಕೂಡ ಭರದಿ ಕಾದಲಿಬೇಕು
ಪರಮ ದಯಾಳುವೆ ಗೋಪಾಲವಿಠ್ಠಲ
ಮರಳಿದವರಿಗೆ ಮೂರು ಜನ್ಮಕ್ಕಿತ್ತೆಲೊ ಮುಕ್ತಿ ॥ 3 ॥

ಅಟ್ಟತಾಳ

ಯಂಜಲ ಫಲ ಮೆದ್ದು ಗಂಜಿಯ ಕುಡಿದಿನ್ನು
ಅಂಜಿ ಧನಂಜಯಗೆ ಸಂಜಿ ಆಗದ ಮುನ್ನ
ಸಂಜಿ ಮಾಡಿದೆ ನೀನೆ ಅಂಜನಿ ಸುತನ ಕೂಡ
ಭುಂಜಿಸಿ ಭೋಜನ ಯಂಜಲುಣ ಕಲಿಸಿದ ನಮ್ಮ ಹನುಮಂತ
ಕಂಜಾಕ್ಷ ನಮ್ಮ ಗೋಪಾಲವಿಠ್ಠಲ ವಜ್ರ
ಪಂಜರ ನಿನ್ನ ನಾಮ ಅಂಚೆ ದೊರಕಿತೆನಗೆ ॥ 4 ॥

ಆದಿತಾಳ

ಆಡಿದೆ ನೀನು ಎನಗೆ ನೀಡಿದ ಸಥೆ ಇಂದ
ನೋಡಿದರೆಲ್ಲ ನೀನು ಮಾಡಿದ್ದೆ ಸತ್ಯವಯ್ಯಾ
ಬೇಡುವದಕ್ಕೆ ನಿನ್ನ ಕಾಡುವದಕ್ಕೆ ನಾನು
ಆಡಿದೆ ನಿನ್ನ ಬಿಡಿ ನುಡಿಗಳ ನಿನಗೆ
ಬೇಡಿದ ವರವ ನೀ ನೀಡುವ ದೈವ ಎಂದು
ಮಾಡುವೆ ಸಥಿಯನ್ನು ಮೂಡಲಾದ್ರಿ ನಿಲಯ
ರೂಢಿಗೊಡೆಯ ನಮ್ಮ ಗೋಪಾಲವಿಠ್ಠಲ
ಬೀಡಿಸ ನಿನ್ನ ಕೊಂಡಾಡುವೆ ಬಿಡದೆ ॥ 5 ॥

ಜತೆ

ನೇಮಾ ಭಕ್ತರ ಪೊರೆವ ಪ್ರೇಮಾ ನಿನ್ನಗುಂಟು
ಸಾಮಜ ವರದ ಗೋಪಾಲವಿಠ್ಠಲ ಬಂಧು ॥ 6 ॥

## ಸುಳಾದಿ 72

ಧ್ರುವತಾಳ | ರಾಗ : ಶಂಕರಭರಣ

ಕೇಳಯ್ಯ ದೇವ ನಿನ್ನ ಊಳಿಗನ ಬಿನ್ನಹ
ಏಳಲ ಮಾಡದಲೆ ಆಲಿಸಿ ಹರುಷದಿ
ತಾಳಲಾರೆನೊ ತಾಯಿ ಗರ್ಭದೊಳಿಹ ದುಃಖ
ಹೇಳಿಕೊಳ್ಳಲು ಜಲಪ್ರಳಯವಾಗಿಹದು
ಏಳು ಪ್ರಕಾರ ಹೊಲಿಯ ಚೀಲದೊಳಗೆ ಹಾಕಿ ಬ
ಹಾಳ ಪರೀಲಿ ಕುದಿದು ಬಾಳುವೆನು ದೇವ
ಕೋಳಿಕಲ್ಲನು ತಿಂದು ಗೋಳಿಟ್ಟು ಕೂಗಿದಂತೆ

ಬಾಳಿದೆನಯ್ಯಾ ಗರ್ಭದೋಳಿಂಥ ಸುಖದಿಂದ
ವೇಳ್ಯವ ಕಳಿದೆ ಹೀಗೆ ಏಳೈದು ಮಾಸ
ಮೇಲೆ ಪುಟ್ಟಿದೆ ರಂಗ
ಮೇಳವಾಗಟ್ಟಿ ಬಂಧುಗಳು ಎಲ್ಲರು ಬಂದು
ಕೇಳಿ ಮೂಹೂರ್ತ ನಾಮಕರಣಗಳೆಲ್ಲನು ಮಾಡಿ
ಪಾಲಿಸಿದರಾಗೆ ಜೋಗುಳ ಪಾಡುತಲಿ
ಶೂಲಿ ಎಂದು ಉದರ ಚಾಲವರಿದರಿನ್ನು
ಪಾಲು ನೆರಿವರಯ್ಯಾ ಬಾಲ ಹಸಿದನೆಂದು
ಆಲಸ್ಯದಿಂದ ಹಸಿದು ಆಳವುತ್ತಿರೆ ಖಾರ
ಗಳನ್ನು ಹಾಕುವರು ತಿಳಿವಿಕಿ ಇಲ್ಲದಲೆ
ಸೂಳಿಯ ಗುಡಿಸಿಲಂತೆ ಬಾಳಿವ್ಯಾಯಿತೆನ್ನದು
ಕೇಳಯ್ಯಾ ಹರಿ ಕರುಣಾಳುಗಳರಸನೆ
ಆಲದೆಲಯ ಶಾಯಿ ಗೋಪಾಲವಿಠ್ಠಲ
ಘಾಳಿಮಾಡಿದೆ ವಾಕು ಲಾಲಿಪದು ಜೀಯಾ ॥ 1 ॥

ಮಟ್ಟತಾಳ

ಅನಂತ ಅನಂತ ದೇಹ ಅನಂತ ಅನಂತ ಜನುಮ
ಅನಂತ ಅನಂತ ಬಂಧು ಅನಂತ ಅನಂತ ಬಳಗ
ಅನಂತ ಅನಂತ ಸತಿ ಅನಂತ ಅನಂತ ಸುತರು
ಅನಂತ ಅನಂತ ಪರಿಯಲಿ ಹೀಗೆ ಪುಟ್ಟಿ ಪುಟ್ಟಿ
ಘನ್ನ ಬಂಧನದೊಳಗಿನ್ನು ಬೆಳೆದೆನಯ್ಯಾ
ಎನ್ನ ದಾವದೊ ಜಾತಿ ಎನ್ನದಾವದು ಕುಲವೊ
ಎನ್ನ ದಾವದೊ ಗೋತ್ರ ಎನ್ನವರಾವರು
ಇನ್ನಾರದು ಪಿಂಡ ಇನ್ನಾರಿಗುದಿಸಿತು
ಬನ್ನ ಭವದೊಳು ಇನ್ನು ಹೊರಳಿಹೊರಳಿ
ಮುನ್ನ ನೆಲಿಯ ದಾರಿಯನ್ನು ಗಾಣದೆ ಪೋದೆ
ಚಿನ್ಮಮಯ ಮೂರ್ತಿ ಗೋಪಾಲವಿಠ್ಠಲ
ಹುಣ್ಣು ಹುಣ್ಣಾದೆನು ಜನನ ಮರಣಗಳಿಂದ ॥ 2 ॥

ತ್ರಿವಿಡಿತಾಳ

ಜನುಮ ಜನುಮದಲ್ಲಿ ಅನುವಾಗಿ ಉಂಡಂಥ
ಜನನಿಯ ಮೊಲೆಪಾಲು ಎಣಿಕೆ ಮಾಡಲು ಇನ್ನು
ಘನವಾದವಯ್ಯಾ ಕ್ಷೀರ ವನಧಿಗಿಮ್ಮಡಿ
ಎಣಿಸಲೋಶವೆ ಎಲವು ಚರ್ಮ ರಕ್ತ ಮಾಂಸ
ಕೊನೆಗಾಣದಾದೆ ಮೇರುವಿಗಿನ್ನಾಲ್ಕುಮಾಡಿ
ಕ್ಷಣ ಕ್ಷಣಕೆ ದೇಹ ಪರಿಮಾಣದ ಚರ್ಮ
ಅನುವರಿತು ನೋಡಾ ಅವನಿಗಿಂದ್ಯೈದು ಮಡಿ
ದಣಿದೆನಯ್ಯಾ ನಾನಾ ಭವಣಿಯಿಂದಲಿನ್ನು
ಕೊನೆಗಾಣಿ ಕೊನೆಗಾಣಿ ಇನಿತು ಇಷ್ಟಿಷ್ಟೆಂದು
ಕುಣಿಯವಳಗೆ ಬಿದ್ದು ಕುರುಡನಂತಲಿ ಇನ್ನು
ಒಣಗಿ ಬಾಯಾರಿ ಆಲ್ಪರಿದೆನು ಅನುಗೆಟ್ಟು
ಕನಸಿನಾಗಿನ ಗಂಟಿನಂತೆ ಈ ಕಾಯವು
ಎನಗೆ ನಂಬಿಗೆಯಿಲ್ಲ ಎನ್ನವ ಮೊದಲಿಲ್ಲ
ಅನುಗಟ್ಟಿ ಅನುಗಟ್ಟಿ ಅನಿಮಿತ್ಯ ಬಾಂಧವ
ತನು ಸಂಬಂಧಿಗಳು ತಮ್ಮತ್ತಲೆಳವರು
ನಿನಗೆ ನಾ ಮೊರೆ ಇಟ್ಟೆ ಗೋಪಾಲವಿಠ್ಠಲ
ನಿನಗೆ ನಾ ನಿನ್ನವನಾಗದಾದೆ ॥ 3 ॥

ಅಟ್ಟತಾಳ

ಸುತನಾದೆ ನಾ ಮಾತಾ ಪಿತರಿಗೆ ಗತಿಯನ್ನು
ಪತಿಯಾದೆನೆ ನೋಡು ಸತಿಯೊಳಗೆ ಇನ್ನು
ಪಿತನಾದೆ ನಾ ಎನ್ನ ಸುತರಿಗೆಲ್ಲ ಇನ್ನೇ
ಇತರ ಜನರಿಗೆ ಬಂಧು ಬಳಗವಾದೆ
ಮತಿಗೇಡಿ ನಾ ನಿನ್ನಗತಿಗೆ ದಾವದು ಅದೆ
ಪಥ ತಿಳಿಯದು ಜಗತ್ಪದಿ ನಿನ್ನ ಪೊಂದೋದು
ಪತಿತ ಪಾವನ ರಂಗ ಗೋಪಾಲವಿಠ್ಠಲ
ಹಿತದಿಂದಲಿ ನಿನ್ನ ಸತತ ಭೃತ್ಯನೆನಿಸೊ ॥ 4 ॥

ಆದಿತಾಳ

ನಿನ್ನವರಾ ಸೇವೆ ದೊರಕೋದು ಆವಾಗಲೆ ನಾ
ನಿನ್ನವನಾಗುವೆ ಆವದು ತೊಪ್ಪಲು
ಸಾವದು ತಪ್ಪದು ಆವಲ್ಲಿ ಇದ್ದರು
ಕಾವುವ ನೀನಯ್ಯ ಅವದುವಲ್ಲೆ ನಿನ್ನವನೆಂದೆನಿಸೆನ್ನ
ಗೋವಳರೊಡಿಯ ಗೋಪಾಲವಿಠ್ಠಲರೇಯಾ
ಭಾವಶುದ್ಧ ನೀ ಎಂಬೊ ಭಕುತಿಯೆ ನೀ ಇನ್ನು ॥ 5 ॥

ಜತೆ

ಸಂಸಾರವೆಂಬಂಥ ಶರಧಿಯ ದಾಟಲಿ
ಕಂಸಾರಿ ನಿನ್ನ ಪಾದಕ ನೀ ಗತಿ ಎನ್ನು ಗೋಪಾಲವಿಠ್ಠಲ ॥ 6 ॥

ಶ್ರೀ ಕೃಷ್ಣಾರ್ಪಣಮಸ್ತು

## ಮಂಗಳ

ಪದ – ರಾಗ : ಕಾಂಬೋದಿ ತಾಳ : ದೃವ

ಮಂಗಳ ವಿಶ್ವವ್ಯಾಪ್ತ ವಿಶ್ವಭಿನ್ನನಿಗೆ ।
ಮಂಗಳ ಸರ್ವನಾಮ ಸರ್ವರೂಪನಿಗೆ ।
ಮಂಗಳಾನಂತಾನಂತ ಮಹಿಮೆಗೆ ।
ಮಂಗಳವಾಯು ವಹನಗೆ ಜಗನ್ಮಾತೆಗೆ ।
ಮಂಗಳವೆ ನ್ನೀ ಮುದದಿಂದ । ॥ ಪ ॥
ಕೇಶವಗೆ ಶ್ರೀದೇವಿಗೆ ನಾರಾಯಣ ಲಕ್ಷುಮಿಗೆ ।
ಈಶಾಮಾಧವಗೆ ಕಮಲೆಪದಗಳಿಗೆ ।
ದೋಷಹ ಗೋವಿಂದನಂಘ್ರಿಗೆ ಪದ್ಮದೇವಿಗೆ
ಶೇಷಶಯನ ವಿಷ್ಣುವಿಗೆ ಪದ್ಮಿಣಿ ದೇವಿಗೆ ।
ಮೀಸಲಾರುತಿಯಾ ಬೆಳಗೀರೆ ॥ 1 ॥

ಮಧುರಿಪುವಿಗೆ ಕಮಲಾಲಯ ಪದಗಳಿಗೆ ।
ವಿಧುನುತ ತ್ರಿವಿಕ್ರಮಗೆ ರಮಾಜನನಿಗೆ ।

ನದಿಪಿತ ವಾಮನಂಘ್ರಿಗೆ ವೃಷಕಪಿಗೆ ।
ಬುಧಜನಾರ್ಚಿತ ಶ್ರೀಧರಗೆ ಧನ್ಯ್ಯದೇವಿಗೆ ।
ಸುದತಿಯರಾರುತಿಯಾ ಬೆಳಗೀರೆ ॥ 2 ॥

ಹೃಷಿಕೇಶ ನಂಘ್ರಿಗಳಿಗೆ ಮಂಗಳದೇವಿಗೆ ।
ಬಿಸಿನಾಭ ಬುದ್ಧಿಗೆ ದಾಮೊದರಿಂದಿರೀಗೆ ।
ವಿಷಕಂಠಾರ್ಚಿತ ಸಂಕರುಷಣ ಹರಣಿಗೆ ।
ಅಸಮ ವಾಸುದೇವಗೆ ದಕ್ಷಿಣ ದೇವಿಯಂಘ್ರಿಗೆ ।
ಶಶಿಮುಖಿಯರಾರುಯಿಯಾ ಬೆಳಗೀರೆ ॥ 3 ॥

ಅನಘಾ ಶ್ರೀ ಪ್ರದ್ಯುಮ್ನಗೆ ನಿತ್ಯಾ ಯೆಂಬಳಿಗೆ
ಅನಿರುದ್ಧಗೆ ಆನಂದದೇವಿ ಪದಗಳಿಗೆ
ಮುನಿಗೇಯ ಪುರಷೋತ್ತಮಂಗೆ ಸದಶ್ರಯಳಿಗೆ ।
ಘನ ನಿಭಾಧೋಕ್ಷಜದೇವಗೆ ಶುಭದೇವಿಗೆ ।
ವನುತಿಯರಾರುತಿಯಾ ಬೆಳಗೀರೆ ॥ 4 ॥

ನರಸಿಂಹಗೆ ಯಜ್ಞಳಿಗೆ ಅಚ್ಚುತ ಸುಖದೇವಿಗೆ ।
ವರದ ಜನಾರ್ಧನ ಸೌಗಂಧಿ ದೇವಿಯಳಿಗೆ ।
ವರ ಉಪೇಂದ್ರ ಸುಂದರಿಗೆ ಹರಿಗೆ ವಿದ್ಯದೇವಿಗೆ
ಕರುಣ ಕೃಷ್ಣ ಪ್ರಾಣೇಶವಿಠ್ಠಲ ಸುಶೀಲಿಗೆ ।
ತರುಣಿಯರಾರುತಿಯಾ ಬೆಳಗೀರೆ ॥ 5 ॥

ಶ್ರೀಮಧ್ವೇಶಾರ್ಪಣಮಸ್ತು

॥ ವಿಜಯ ವಿಠ್ಠಲ ಪ್ರಸೀದತು ॥

# ಶ್ರೀ ಗೋಪಾಲದಾಸರ ಪದಗಳು

ಧ್ರುವತಾಳ **ಪದ 1** ಆದಿತಾಳ

ಭಾರತಿ ಭಕುತುಯನೂ । ಕೊಡುವದು । ಮಾರುತ ಸತಿ ನೀನು । । ಅ.ಪ. ॥

ಮೂರು ಲೋಕದೊಳು । ಯಾರು ನಿನಗೆಸರಿ ಮಾರಾರಿಗಳಿಂದಾರಾಧಿತಳೆ ॥ ಪ॥

ಸುಂದರಿ ಶುಭಕಾರಿ । ಸುಮನಸ । ವೃಂದ ಶೋಭಿತ ಕಬರಿ । ಮಂದ ಹಾಸ
ಮುಖ। ದಿಂದ ನೋಡಿ ನಿನ್ನ ಕಂದನೆಂದು ಎನ್ನ । ಮುಂದಕೆಕಯೆ ॥ 1 ॥

ವಾಣಿ ಎನ್ನ ವದನಾ । ದಲ್ಲಿಡು । ಮಾಣದೆ ಹರಿಸ್ತವನ । ವೀಣಾಧೃತಸು ।
ಜ್ಞಾನಿಯೆ ಪಂಕಜ । ಪಾಣಿಯೇ ಕೋಕಿಲ । ವಾಣಿಯೆ ಎನ್ನನು ॥ 2 ॥

ಮಂಗಳಾಂಗಿ ಎನ್ನಾ । ಅಂತ ರಂಗದಲಿಡು ಮುನ್ನಾ । ತುಂಗ ವಿಕ್ರಮ ತಂದೆ ।
ಗೋಪಾಲವಿಠ್ಠಲನ್ನ । ಹಿಂಗದೆ ನೆನೆವ । ಸುಖಂಗಳ ಕೊಡುವಳೆ ॥ 3 ॥

ರಾಗ : ರೇಗುಪ್ತಿ **ಪದ 2** ಆದಿತಾಳ

ಕಮಲ ಮುಖಿಯೆ ಕಮಲಾಲಯೆ ಕಮಲೆ । ಕಮಲಾಕ್ಷಿಯೆ ಕೋಮಲೆ ॥ ಪ ॥

ಕಮಲ ನಾಭನ ಪಾದ । ಕಮಲ ಯುಗಳ ಮಧುಪೆ । ಕಮಲಜ ಜನನಿಯೆ ।
ಕಮಲ ಮಿತ್ರ ಪ್ರಭೆ । ಕಮಲ ಯುಗಳ ಮಧುಪೆ । ಕಮಲ ಜ ಜನನಿಯೆ ॥ಅ.ಪ.॥

ಅರುಣನ ಸೋಲಿಪ ಚರಣವು ಬಾಲ ಚಂದಿರನ ಸೋಲಿಪ ನಖವು ।
ಬೆರಳಲ್ಲಿ ಪಿಲ್ಯ ಕಾಲುಂಗುರ ಮಂಟಕೆ । ಕಿರುಗೆಜ್ಜೆಂದಿಗೆ ಪೆಂಡೆಯು ।
ಕರಿಯ ದಂತದಂತೆ ಜಾನು ದರ್ಪಣ ಜಂಘೆ । ಉರದ ದಟ್ಟಿಯು ಸರಿಗೆಯು ।
ಹರಿ ನಡು ಕಿಂಕಿಣ ಭರದಿ ಒಡ್ಯಾಣವು । ದರ
ತ್ರಿವಿಳಿ ರೇಖೆ ವರ ಕಂಚುಕ ಧಾರ ॥ 1 ॥

ಕರಿಯ ಸೊಂಡಿಲಿನಂತೆ ಕರದೊಳ ಗೊಪ್ಪುವ । ಬೆರಳ ಮಾಣಿಕ್ಯ ದುಂಗುರ ।
ಹರಡಿ ಕಂಕಣ ವಂಕಿ ಬಿರುದಿನ ತೋಳ್ಬಂದಿ ವರ ಭುಜ ಕೀರ್ತಿ ಕೇಯೂರ ।
ಕೊರಳಲ್ಲಿ ಒಪ್ಪುವ ಸರಗಳ ಪದಕವು । ವರ ವೈಜಯಂತಿ ಮಂದಾರ ।

ಮೆರೆವ ಚುಬುಕ ಬಿಂಬಾಧರ ಕೂರ್ಮ ಕದಪಿನ ।
ಶಿರಿದಂತೆ ರತುನದ ಕರಡಿಗೆ ವದನದ ॥ 2 ॥

ಸುರಭಿ ಚಂಪಕ ನಾಸಿಕ ಮೂಗುತಿ ಶಾಂತ । ಪರಮ ಕರುಣನೋಟದ । ಹರಿಣ ನಯನ ಪುರ್ಬು ಸ್ಮರನ ಚಾಪದಂತೆ । ಕರಣ ಕುಂಡಲ ಪ್ರಭೆಯು । ಸಿರಿ ಕುಂಕುಮ ಕಸ್ತೂರಿ ತಿಲಕ ಮೇಲೆ । ಅರಳಲೆ ಬೈತಲೆಯು ॥ ಕುರುಳು ಸುಳಿಯು ಪರಿಪರಿ ರತ್ನ ಖಚಿತದ । ವರಮಕುಟವು ಕೋಟಿ ಅರುಣ ನಂತೊಪ್ಪುವ॥ 3 ॥

ತೆತ್ತಿಸ ಕೋಟಿ ದೇವತೆಗಳು ವಾಣಿ ಭಾ । ರತಿ ಮೊದಲಾಗಿರುವ । ಉತ್ತಮ ಸ್ತ್ರೀಯರು ಛತ್ರ ಚಾಮರಗಳ । ನೆತ್ತಿ ಬೀಸುವ ವೈಯ್ಯಾರ । ಸುತ್ತು ಗಂಧರ್ವ ತುಂಬುರು ನಾರದರು ಸ್ವರ । ವೆತ್ತಿ ಪಾಡುವ ಝೇಂಕಾರ । ತದ್ಧರಿ ತರಿಕಿಟ ಝಣುತ ಝಣುತಯೆಂದು । ಎತ್ತ ನೋಡಿದರತ್ತ ತಥೈ ಶಬ್ದ ॥ 4 ॥

ಪಕ್ಷಿ ವಾಹನನಾದ ಪಾವನ ಮೂರ್ತಿಯಂ । ವಕ್ಷಸ್ಥಳದಿ ಶೋಭಿತೆ ।
ಲಕ್ಷ್ಮೀ ದೇವಿಯೆ ಸಹಲಕ್ಷಣೆ ಅಜ ಫಾ । ಲಾಕ್ಷಾದಿ ಸುರಸೇವಿತೆ ।
ಮೋಕ್ಷ ದಾಯಿಕೇ ಲೋಕ ರಕ್ಷಕಿ ರಮಾದೇವಿ । ಇಕ್ಷುಧನ್ವನ
ಮಾತೆ । ಅಕ್ಷಯ ಫಲದ ಗೋಪಾಲವಿಠ್ಠಲನ ಪ್ರ । ತ್ಯಕ್ಷ
ತೋರಿಸೆನ್ನಾ ಪೆಕ್ಷೆ ಪೂರೈಸು ॥ 5 ॥

ರಾಗ : ಸಾವೇರಿ **ಪದ 3** ಆದಿತಾಳ

ನಡೆದು ಬಾರಯ್ಯ ನೀನು ॥ ಪಲ್ಲ ॥

ನಡೆದು ಬಾರಯ್ಯ ಭವ ಕಡಲಿಗೆ ಕುಂಭ ಸಂಭವ । ಸಡಗರ
ದಿಂದ ಮೆಲ್ಲಡಿಯ ನೀಡುತ ಬೇಗ । ಎಡ ಬಲದಲಿ ನಿನ್ನ ಮಡ
ದೇರಿಂದೊ ಪ್ಪುತ । ತಡಮಾಡದೆ ಬಾ ಮೃಡ ಸಖ ವೆಂಕಟ ॥ ಅ.ಪ. ॥

ವಿಜಯದಶಮಿ ಅಶ್ವೀಜಮಾಸ ಶುದ್ಧದಲ್ಲಿ ನಿಜರಥರೂಢ ನಾಗಿ ಸು
ಜನರಿಂದೊಡ ಗೂಡಿ । ಗಜಸಿಂಹ ಮಯೂರ ದ್ವಿಜಸಿಂಗ ಸಾರಂಗ ।
ಮಜ ಭಾಪುರೇ ಯೆನಲು ತ್ರಿಜಗವು ತಲೆದೂಗೆ ॥ ಅಜನು
ಸ್ತುತಿಯ ಮಾಡೆ ಋಜುಗಣಾಧಿಪ ಪಾಡೆ । ಗಜಮುಖ ನಯ್ಯನು
ನಿಜಾನಂದದ ಲಾಡೆ । ಭುಜಗ ಶ್ರೇಷ್ಠ ದ್ವಿಜರಾಜರು ಜಯವೆನ್ನೆ ।
ಕುಜನರೆದೆಯ ಮೆಟ್ಟಿ ರಜತಮ ಕಳೆಯುತ ॥ 1 ॥

ದಕ್ಷಿಣ ದಿಕ್ಕಿನಲ್ಲಿ ರಾಕ್ಷಸರೆದುರಾಗಿ । ಅಕ್ಷೋಹಿಣಿ ಬಲ ನಿನ್ನುಪೇಕ್ಷೆ
ಮಾಡುತಲಿದೆ । ಪಕ್ಷಿವಾಹನನೆ ನೀನಾಕ್ಷಣದಲ್ಲಿ ಖಳರ । ಶಿಕ್ಷಿಸಿ
ಸುಜನರ ರಕ್ಷಿಸಿ ಮೆರೆದ್ಯೆಯ ತಕ್ಷಕಸುತ ಸಹಸ್ರಾಕ್ಷನ
ಮಗನನು ಭಕ್ಷಿಸ ಬರುತಿರೆ ಈಕ್ಷಿಸಿ ರಥವನು । ತತ್‌ಕ್ಷಣ
ನೆಲಕೊತ್ತಿ ಮೋಕ್ಷವ ಗೈಸಿದೆ । ಲಕ್ಷ್ಮೀಶನೆ ಅಕ್ಷಯ ಫಲದಾಯ ।
ಕುಕ್ಷಿಯೊಳಗೆ ಜಗ ರಕ್ಷಿಪ ವಿಶ್ವ ॥ 2 ॥

ಅಂಬುಜಾಕ್ಷನೆ ಬಾರೊ ಅಂಬುಜವದನನೆ । ಅಂಬುಜಾಲಯ
ಪತಿ ಅಂಬುಜನಾಭನೆ । ಅಂಬುಜ ಭವಜನಕ ಅಂಬುಜಾರಿ
ಧರ । ಅಂಬುಜನಿವಾಸ ಅಂಬುಜ ಮಿತ್ರ ತೇಜ । ಕೊಂಬು ಕಹಳ
ಗಳು ಭೊಂಭೋರಿಡುತಿರೆ । ತುಂಬುರು ನಾರದರಿಂಬಾಗಿ ಪಾಡಲು
ಆಂಬರದಲಿ ವಾದ್ಯ ತುಂಬಿ ದಂಧಣಿರೆನ್ನೆ । ಸಂಭ್ರಮದಲಿ
ಬಾರೊ ಶಂಭು ವಂದಿತನೆ ॥ 3 ॥

ಮನಕೆ ಬಾರಯ್ಯ ಸುದಾಮನ ಸಖ ಹರಿಯೆ ಸೋ । ಮನ ಧರಿಸಿ
ದವನ ಮನ ಕುಮುದಕೆ ಚಂದ್ರ । ಮನೆ ಕೇಳೊ ಎನ್ನ ದುಮ್ಮನ
ಪರಿಹರಿಸಿ ಒ । ಮ್ಮನ ಕೊಡು ಅಹಿಗಿರಿ ತಿಮ್ಮನೆ ಕೇಳೊ ಬಿನ್ನಪ ॥
ಮನ ನಿನ್ನ ದು ಹೇ  ಮನಸಿಜ ಜನಕ ಸು । ಮನಸ ರೊಡೆಯ
ಬೊಮ್ಮನ ಪೆತ್ತನೆ ಸು । ಮ್ಮನೆ ತಡವೇಕೆ ನಿಮ್ಮನೆಯವರೊಡನೆ
ಹಿಮ್ಮನ ಮಾಡದೆ ಗಮ್ಮನೆ ಬಾ ವೆಂಕಟ ॥ 4 ॥

ಪರಿಪರಿ ಯಿಂದಲಿ ಕರವ ಮುಗಿದು ನಿನ್ನ । ಕರೆದರೆ ಬಾರದ
ಗರುವ ತನವು ಏಕೊ । ಕರಿಯ ಮೊರೆಯ ಕೇಳಿ ಸಿರಿಗೆ ಹೇಳಿದೆ
ಬಂದೆ । ಕರಿರಾಜ ಅವ ನಿನ್ನ ಹಿರಿಯಪ್ಪನ ಮಗನೇನೊ ॥ ಶರಣಾ
ಗತರಕ್ಷಾಮಣಿ ಯೆನ್ನುವ । ಬಿರಿದು ಬೇಕಾದರೆ ಸರಸರ ಬಾರಯ್ಯ
ಗರುಡಗಮನ ಗೋಪಾಲವಿಠ್ಠಲರೇಯಾ । ಕರುವಿನ ಮೆರೆಗಾವು
ನೆರೆದಂತೆ ಪೊರೆವುತ ॥ 5 ॥

ರಾಗ – ಕಾಂಬೋಧಿ **ಪದ 4** ಝುಂಪೆತಾಳ

ಬಂದ ವಿಠ್ಠಲನಿಂದು ಬಡವನಲ್ಲಿ
ಬೃಂದಾವನದಲಿ ಗೋ ವೃಂದಗಳ ಕಾಯ್ದವನೆ
ಸುಳಿಗುರುಳ ಮೇಲೆ ಅರಳೆಲೆಯು ಶಿರಿ ಕಿರೀಟಿ । ಯಳದಳಿರು

ಚೂತಾ ಮಲ್ಲಿಗೆಯು ದೂರ್ವೆ । ಥಳ ಥಳಿಪ ಮುಖ ನಾಸ
ನಯನ ಫಣಿಯಲಿ ತಿಲಕ । ಚಲಿಸುವ ಕರ್ಣ ಕುಂಡಲ
ಪ್ರಭೆಯು ಶೋಬಿಸುತ ॥ 1 ॥

ಕೊರಳಲಿ ಸರಿಗೆ ಸರಪಳಿ ಪಚ್ಚಿ ಪದಕದ । ಪರಿಪರಿಯ ಹಾರ
ತುಳಸೀ ಮಾಲೆ । ಶಿರಿಗಂಧ ಲೇಪ ಶ್ರೀವತ್ಸ ವುರ ಕಿರಿಡೊಳ್ಳು ।
ವರ ಕಟಿಗೆ ಘಂಟೆ ಪರಿ ಪರಿಯ ದಾಮವ ಸುತ್ತಿ ॥ 2 ॥

ಮುಂಗೈಯ ಕಡಗ ಸರಪಣಿ ತೋಳ ಭಾಪುರಿ । ಶೃಂಗಾರವಾದ
ಗದೆ ಶಂಖ ಚಕ್ರಾ । ಅಂಗೈಯ ಪದುಮ ಅಂಗುಳಿ ವೇಣು
ಮೀಟಿಯುತ ಹಿಂಗದೆ ಯನ್ನಂತರಂಗದ ಮನೆಗಿನ್ನು ॥ 3 ॥

ಮಾಳಿಗೆ ಶ್ರೀನಿವಾಸಾರ್ಯರಾ ಮನೆಯಿಂದ । ಶೀಲ ಗುರುವಿಜಯ
ರಾಯರಿಗೊಲಿದು । ಮೆಲಾಗಿ ಬಹು ಪರಿಯಿಂದ ಪೂಜೆಯ
ಗೊಂಡು । ಕೀಳು ಮನುಜನ ಎನ್ನ ಪಾಲಿಸಲಿ ಬೇಕೆಂದು ॥ 4 ॥

ಏನು ಬಗೆ ಪೂಜೆ ಯೆನ್ನಿಂದಲಾಗದು । ನೀ ನಿತ್ಯತೃಪ್ತ ಜ್ಞಾನವೆಂಬುದೆ
ಯೆನಗೆ ಲೇಶವಿಲ್ಲಾ । (ಶ್ರೀಶನೆ) ನೀ ನಿಂತಲ್ಲಿ ಸಕಲವುಂಟು
ಶ್ರೀಶ್ರೀನಿ । ವಾಸ ಗೋಪಾಲವಿಠ್ಠಲ ವಿಜಯಾ ॥ 5 ॥

ರಾಗ : ಬಿಲಹರಿ **ಪದ 5** ಆದಿತಾಳ

ಪಾಲಿಸಯ್ಯ ಪವನನ್ಯೆಯ್ಯ ಪಾಲವಾರಧಿ ಶಯ್ಯಾ
ವೆಂಕಟ ರಾಯ ॥ ಪ ॥

ಕಾಲ ಕಾಲಕೆ ಹೃದಯಾಲಯ ದೊಳು ನಿನ್ನ । ಶೀಲ ಮೂರುತಿ
ತೋರೋ ಮೇಲು ಕರುಣದಿ ॥ ಅ.ಪ. ॥

ಶ್ರೀಶ ಸಂಸಾರ ವೆಂಬೋ ಸೂಸುವ ಶರಧಿಯೊಳು । ಈಸಲಾರೆನು
ಹರಿಯೆ । ಹೆ ಧೊರೆಯೇ । ದಾಸನೆಂತೆಂದ ಮೇಲೆ ಘಾಶಿ
ಗೋಳಿಸುವದು । ಲೇಸು ನಿನಗಲ್ಲ ವೈಯ್ಯ । ಹೆ ಜೀಯ ॥
ದೋಷ ರಾಶಿಗಳೆಲ್ಲ ನಾಶಮಾಡಿ ವಿ । ಶೇಷವಾದ ಜ್ಞಾನ ಲೇಸು
ಭಕುತಿಯಿತ್ತು । ಆಶೆಯ ಬಿಡಿಸೆನ್ನ ಮೀಸಲ ಮನಮಾಡಿ ।
ನೀ ಸುಳಿವದು ಶ್ರೀನಿವಾಸ ಕೃಪಾಳೋ ॥ 1 ॥

ಮೂರು ಗುಣಗಳಿಂದ ಮೂರು ತಾಫಗಳಿಂದ । ಮೂರು ಅವಸ್ಥೆ
ಯಿಂದ । ಮುಕುಂದ । ಮೂರು ಐದರಿಂದ ಮೂರು ಏಳರಿಂದ ।
ಮೂರರ ದಾರಿ ಗಾಣದೆ । ಮೂರಾದೆ ॥ ಮೂರು ಹಿಡಿಸಿ ಮೇಲೆ
ಮೂರೆರಡೋಡಿಸಿ । ಮೂರು ಮೂರು ಭಕ್ತಿ ಮೂರು ಕಾಲಕೆ
ಯಿತ್ತು । ಮೂರು ರೂಪವಾಗಿ ಮೂರು ಲೋಕವನೆಲ್ಲ ಮೂರು
ಮಾಡಿದ ಬಿಂಬ ಮೂರುತಿ ವಿಶ್ವ ॥ 2 ॥

ಕರುಣಸಾಗರ ನಿನ್ನ ಸ್ಮರಣೆ ಮಾತ್ರದಿ ಸಕಲ । ದುರಿತ
ಪರಿಹಾರವೆಂದು । ನಾ ಬಂದು । ಮೊರೆ ಹೊಕ್ಕೆ ಮೇಲಿನ್ನು ಪೊರೆಯ
ಬೇಕಲ್ಲದೆ । ಜರಿದು ಬಿಸಾಡುವರೇ । ಮುರಾರೆ । ಮರುತಾಂತರ್ಗತ
ಗೋಪಾಲವಿಠ್ಠಲ ಈ । ಶರೀರವೆ ನಿನ್ನಯ ಚರಣ ಕೊಪ್ಪಿಸಿದೆನೊ ।
ಸರಿಬಂದದ್ದು ಮಾಡೊ ಬಿರಿದು ನಿನ್ನದುದೇವ । ಪರಮ ದಯಾ
ನಿಧೆ ಉರಗಾದ್ರಿ ವಾಸ ॥ ॥ 3 ॥

ರಾಗ : ಧನ್ಯಾಸಿ

## ಪದ 6

ಛಾಪುತಾಳ

ಏನು ಬೇಡಲೊ ನಿನ್ನ ಬಳಿಗೆ ಬಂದು ॥ ಪ ॥

ನೀನಿತ್ತ ಸೌಭಾಗ್ಯ ನಿಬಿಡವಾಗಿದೆ ಎನಗೆ ॥ ಅ.ಪ. ॥

ಜನನಿಯ ಕೊಡು ಎಂದು ಜಗದೀಶ ಬೇಡುವೆನೆ । ಜನನಿಯೇ
ನಿತ್ತಳಾ ಧ್ರುರಾಯಗೆ ॥ ಜನಕನ ಕೊಡು ಎಂದು ಜಯವಂತ
ಬೇಡುವೆನೆ ಜನಕ ನೇನಿತ್ತ ನಾ ಪ್ರಲ್ಹಾದಗೆ ॥ ॥ 1 ॥

ಅನುಜನಾ ಕೊಡು ಯೆಂದು ಅತಿಳಶಯದಿ ಬೇಡುವೆನೆ । ಅನುಜನೇ
ನಿತ್ತನೈ ಆವಾಲಿಗೆ ॥ ಧನವನೇ ಕೊಡು ಎಂದು ದೃನ್ಯದಲಿ
ಬೇಡುವೆನೆ । ಧನ ಗಳಿಸಿದ ಸುಯೋಧನ ನೇನಾದ ಕೊನೆಗೆ ॥ 2 ॥

ಸತಿಯಳ ಕೊಡು ಎಂದು ಮತಿವಂತ ಬೇಡುವೆನೆ । ಸತಿಯಿಂದ
ದ್ಯುನಾಮಕ ವಸು ಏನು ಕಂಡ ॥ ಸುತರನ ಕೊಡು ಎಂದು
ಸುಖದಿ ನಾ ಬೇಡುವೆನೆ । ಸುತರಿಂದ ಧೃತರಾಷ್ಟ್ರ ಗತಿಯೇನು ಕಂಡ ॥ 3 ॥

ಬಂಧುಗಳ ಕೊಡುಯೆಂದು ಚಂದದಲಲಿ ಬೇಡುವೆನೆ । ಬಂಧುಗಳೇ
ನಿತ್ತರಾ ಗಜರಾಜಗೆ ॥ ಅಂದಣವ ಏರುವ ಭಾಗ್ಯವ
ಬೇಡುವೆನೆ । ಅಂದಣೇರಿದ ನಹುಷ ಏನಾದ ಕೊನೆಗೆ ॥ 4 ॥

ಬೇಡುವೆನೊ ನಾನೊಂದು ಬೇಡ ತಕ್ಕದು ದೇವ । ನೀಡೆನೆಂಬುದು
ನಿನ್ನ ಮನದೊಳಿತ್ತೆ ॥ ಮೂಡಲಾದ್ರೀಶ ಗೋಪಾಲವಿಠ್ಠಲ
ರೇಯ । ಬೇಡಿದಂದದಿ ಪಾರು ಮಾಡಯ್ಯ ಧೊರೆಯೆ ॥ 5 ॥

ರಾಗ : ಶಂಕರಾಭರಣ **ಪಾದ 7** ಆದಿತಾಳ

ಭ್ರಾಂತಿ ಬಿಡದೋ ಭಾಗ್ಯ ಪುರುಷನೆ ॥ ಪ ॥

ವಿಷಯಂಗಳ ಜರಿದು । ಶಾಂತ ಚಿತ್ತ ನಾಗೋತನಕ
ಹೇ ಪ್ರಾಣಿ ನಿನ್ನ ॥ ಅ.ಪ. ॥

ಕಾಲಕಾಲಕೆ ಹರಿ ಕಥಾ ಶ್ರವಣ । ಗುರುಗಳ ಮುಖದಿಂದ
ಕೇಳಿದ್ದೆ ಕೇಳುತ್ತ ಪೇಳುತ್ತ । ಮನನ ಮಾಡುತ್ತ । ಕೇಳಿದಂ
ತೆ ಧ್ಯಾನವ ಮಾಡುತ್ತ । ಮಾಡಿದ್ದನುಭವಕೆ । ಮೇಲಾಗಿ
ಬಂದೊದಗುವ ತನಕ । ಹೇ ಪ್ರಾಣಿ ನಿನ್ನ ॥ 1 ॥

ಪಾಂಚಜನ್ಯ ಅರಿಪಾಣಿ ಸರ್ವೇಶ । ತದ್ರಾಣಿ ಲಕುಮಿ ।
ಅಂಚೆಗಮನ ವಾಯ್ವಾಣಿ ಭಾರತಿ । ಭುಜಂಗ ಪತಿಯು ।
ಪಂಚಾನನ ಖಗ ಸುತ್ರಾಮ ಕಾಮ । ಈ ಬಗೆ ತಾರತಮ್ಯ ।
ಪಂಚ ಭೇದವ ತಿಳಿಯೊ ತನಕ । ಹೇ ಪ್ರಾಣಿ ನಿನ್ನ ॥ 2 ॥

ಪೂರಕ ಕುಂಭಕ ರೇಚಕ ದಿಂದಲಿ । ಹೃದಯಸ್ಥ ಭೌತಿಕ ।
ಮಾರುತನ ಜೈಸಿ ಅಣಿಮಾದಿ ಸಿದ್ಧಿ । ಅಷ್ಟಾಂಗ ಯೋಗ ।
ಧಾರಕನಾಗಿ ನಿಸ್ಸಂಗದಿ ಚರಿಸಿ । ಭಾರತಿ ಪತಿ ಸ । ಮೀರ
ನೊಲಿಮೆ ಪಡೆಯೋತನಕ । ಹೇ ಪ್ರಾಣಿ ನಿನ್ನ ॥ 3 ॥

ಅಂಶಿ ಅಂಶಾವೇಶಾಧಿಷ್ಠಾನ । ಅಂತರ್ಯಾಮಿಗಳ ಸಂಶಯ
ರಹಿತದಿ ರೂಪಗಳ ತಿಳಿದು । ಕ್ರೋಧಾದಿಗಳಳಿದು । ಕಂಸಾ
ರಿಯ ಕರುಣವ ಬಲಮಾಡಿ । ಹಿಂಸೆಗಳೀಡ್ಯಾಡಿ । ಹಂಸೋ
ಪಾಸಕ ನಾಗೋ ತನಕ । ಹೇ ಪ್ರಾಣಿ ನಿನ್ನ ॥ 4 ॥

ಹಂಚು ಹಾಟಕ ಸಮದರ್ಶಿಯೆನಿಸಿ । ಸೀತೋಷ್ಣ ಸಹಿಸಿ ।
ಸಂಚಿತ ಆಗಾಮಿಗಳ ದಹಿಸಿ ! ಇಂದ್ರಿಯಗಳ ಜಯಿಸಿ ।
ಪಂಚವೃತ್ಯಾತ್ಮಕ ಮನ ವಶೀಕರಿಸಿ । ಧ್ಯಾನದಿ ಶ್ರೀ ಹರಿ ।
ಮಿಂಚಿ ನಂದದಿ ಪೊಳೆಯೊ ತನಕ । ಹೇ ಪ್ರಾಣಿ ನಿನ್ನ ॥ 5 ॥

ವಿಷಯಾ ವಿಷಯ ವಿವರವನ್ನೆ ತಿಳಿದು । ವಶವಾಗ ದನ್ಯ ।
ವಿಷಯಗಳೆಂಬುವದನ್ನು ನೆರೆ ತಿಳಿದು । ದುರಾಸೆ ತೊರೆದು ।
ಹಸಿವು ತೃಷೆಗಳ ಹಗಲಿರುಳು ಮರೆದು । ಹರಿದಾಸರ ಬೆರೆದು ।
ಕುಶಲವಾರ್ತೆಯ ಪೇಳೋ ತನಕ । ಹೆ ಪ್ರಾಣಿ ನಿನ್ನ ॥ 6 ॥

ಸ್ವಾತಂತ್ರಾ ಸ್ವಾತಂತ್ರ್ಯವೆಂಬುದನು । ವಿವೇಕದಿ ತಿಳಿದು ।
ಸ್ವಾತಂತ್ರಮುಖ್ಯನು ಹರಿಯೆಂದು । ಧ್ಯಾನಕ್ಕೆ ತಂದು
ಸ್ವಾತಂತ್ರ ನಾನಲ್ಲವೊ ಯೆಂದು । ಆಪ್ತನು ನೀನೆಂದು
ವ್ಯಾಪ್ತ ದರ್ಶಿ ಆಗೋತನಕ । ಹೇ ಪ್ರಾಣಿ ನಿನ್ನ ॥ 7 ॥

ಸಕಲೇಂದ್ರಿಯಗಳಿಂದಲಿ ಹರಿಸೇವೆ । ಭಕುತಿಲಿ ಮಾಡುತ್ತ ।
ಕಕುಲಾತಿಯ ಹಗಲಿರುಳು ಬಡದಲೆ । ಮುಖ್ಯದಿಂದಲಿ ।
ಲಕುಮೀಶ ಗೋವಿಂದನ ಮೂರುತಿಯ । ನಿಕರಯುಕ್ತದಿ ।
ಸುಖ ವಿಷಯ ನೆಂದರಿಯೊತನಕ । ಹೇ ಪ್ರಾಣಿ ನಿನ್ನ ॥ 8 ॥

ಬಿಂಬ ಭಾವ ಕ್ರಿಯ ದ್ರವ್ಯಾದ್ವೈತವನು । ತಿಳಿದು ಸರ್ವಗತ
ಬಿಂಬನೆ ಮಮಸ್ವಾಮಿ ಗೋಪಾಲವಿಠ್ಠಲ । ನಲ್ಲದಿನ್ನಿಲ್ಲ ।
ಎಂಬೋದರಿತು ಅನ್ಯ ಸ್ವತಂತ್ರವಮರೆದು । ಸರ್ವವ್ಯಾಪಾರ
ಬಿಂಬ ಕ್ರಿಯವ ಕಾಣೋತನಕ । ಹೇ ಪ್ರಾಣಿ ನಿನ್ನ ॥ 9 ॥

ರಾಗ : ವರಾಳಿ **ಪದ 8** ಆದಿತಾಳ

ಇಂದಿರೇಶ ನಿನ್ನದೊಂದೆ ಕ್ರಿಯವು ದ್ವಂದ್ವವಾಯಿತೊ ॥ ಪ ॥

ಕುಂದು ತೋರಿತು ಖಳರಿಗೆ ಪರಮಾ । ನಂದವಾಯಿತು ವೃಂದಾರಕರಿಗೆ
ಜನನ ಕ್ರಿಯವ ದೇವಕಿ ತನಯರ ಕಾಯಿತೊ । ಜನನ ಕ್ರಿಯವೆ
ಜೈನರ ಮನೆತನ ವಳಿಯಿತೊ । ಸ್ತನ್ಯಪಾನದಿಂದ ಗೋಪಿಗೆ
ಘನ ಮೋದವಾಯಿತೋ । ಸ್ತನ್ಯಪಾನದಿಂದ ಪೂತನಿ ಪ್ರಾಣವೆ ಹೋಯಿತೊ॥1॥

ಬಾಲ ಕ್ರೀಡೆ ಯಮಳಾರ್ಜುನರ ಪಾಲಿಸಿತೊ ಕರುಣದಿ । ಬಾಲ
ಕ್ರೀಡೆ ಶಕಟಾದ್ಯರನು ಮೂಲ ನಾಶನ ಮಾಡಿತೊ ॥ ಪಲಾಯನವೆ
ಮುಚ ಕುಂದನಿಗೆ ಪರಮಗತಿಯ ನೀಡಿತೊ । ಪಲಾಯನವೆ
ಕಾಲಯವನನ ಪ್ರಾಣವಪ ಹರಿಸಿತೊ ॥ 2 ॥

ಬಂಧುತನವೆ ಧರ್ಮಾದ್ಯರನು ವೃಂದದೊಳು ಕಾಯಿತೊ । ಬಂಧು
ತನವೆ ಪೌಂಡ್ರಕರಸನ ಮಂದ ಭಾಗ್ಯನ ಮಾಡಿತೊ ॥ ಒಂದೇ
ವಚನ ಇಂದ್ರಾದ್ಯರಿಗಾನಂದ ಕರವಾಯಿತೊ । ಒಂದೇ
ವಚನ ವಿರೊಚನಗೆ ಬಂಧವ ತಂದಿಟ್ಟಿತೊ ॥ 3 ॥

ಕರ ಸ್ಪರ್ಶವಾಗೆ ತುರುಗಳ ಮರಣ ಪರಿಹರಿಸಿತೊ ।
ಕರನ ವದನದೊಳಿಡೆ ಕೇಶಿಗೆ ಮರಣವೆ ಒದಗಿತೊ ।
ನರವಿಶ್ವರೂಪ ನೋಡೆ ಹರುಷೋದ್ರೇಕ ವಾಯಿತೊ ।
ದುರಿಯೋಧನ ನೋಡಲವಗೆ ದುಃಖವೆ ಬಲುಹೆಚ್ಚಿತೊ ॥ 4 ॥

ಗುಣರೂಪ ಕ್ರಿಯಾಬಲದ ಕೊನೆಯಾವನು ಬಲ್ಲನು ।
ನಿನಗೆ ವೈಷಮ್ಯಾದಿ ಲೇಶವನು ಕಾಣೆ ಶ್ರೀಶನೆ ।
ದನುಜ ದಿವಿಜರ ಮನದನುಸಾರ ದಾತನೆ । ಮಣಿದು
ಬೇಡುವ ಕಾಯೊ ಗೋಪಾಲವಿಠ್ಠನ ॥ 5 ॥

ರಾಗ : ಯದುಕುಲ ಕಾಂಬೋಧಿ **ಪದ – 9** ಆದಿತಾಳ

ನಾನೀಭ್ರಮಿಸಿದೆನೊ । ವಿಷಯದಿ ಮಮತೆ ನೀನೆ ಸೃಜಿಸಿದೆಯೋ ॥ ಪ ॥

ಅನಾದಿ ನಿಧಾನ ನೀನೆ ತಿಳಿದು ನೋಡೋ ॥ ॥ ಅ.ಪ. ॥

ಕೇವಲಾನಂದ ಚಿನ್ಮಯ ಜೀವ ನೈಜಸ್ವ । ಭಾವತ್ಯಜಿಸಿ
ಅನ್ಯಭಾವ ವಾಶ್ರೈಸಲು । ಶ್ರೀವರ ನಿನ್ನ । ಬಂಧಕ ಶಕುತಿ
ಆವರಿಸೆನ್ನ । ಕಾವಳ ಗೊಳಿಸಿ । ಈ ವಿಧ ಬನ್ನ । ಬಡಿಸುತ್ತಿದೆ
ಕೈವಲ್ಯದರಸನೆ । ನೀವಿಚಾರಿಸಿ ಕಾಯೊ ॥ 1 ॥

ಸ್ವಾತಂತ್ರ ನೀನು ಅಸ್ವಾತಂತ್ರತರನಾನು । ದೂತನ್ನ ಈ ತೆರ
ಕಾತರ ಗೊಳಿಪುದು । ಏತರ ಘನವೋ । ಇದರಿಂದ । ಖ್ಯಾತೇನು
ಫಲವೊ । ಎನ್ನೋಳು ನಿನ । ಗೇತಕೀ ಛಲವೊ ।
ಭವದಿ ಕೈ । ಸೋತು ಬಿನ್ನೈ ಸುವೆ । ಮಾತುಮನ್ನಿಸಿ ಕಾಯೊ ॥ 2 ॥

ಕಕ್ಕಸ ಭವದೊಳುತಕ್ಕಿಸಿ ಸಿಗಹಾಕಿ । ಸಿಕ್ಕುಬಿಡಿಸದೆ ನೀ
ನಕ್ಕು ಸುಮ್ಮನಿರಲು । ದಿಕ್ಕ್ಯಾರೊ ಏನಗೆ । ದಣಿದೊಮೊರೆ ।
ಯಿಕ್ಕುವೆ ನಿನಗೆ । ಒಲಿದು ಬೇಗ ತಕ್ಕೋ ನೀಕೈಗೆ ।
ಎನ್ನವ ಗುಣ । ಲೆಕ್ಕಿಸದಲೆ ಕಾಯಬಹುದಯ್ಯ ಕೊನೆಗೆ ॥ 3 ॥

ಪ್ರೀಯ ನೀನೆನಗೆಂದು ಅಯ್ಯ ನಿನ್ನ ನಂಬಲು । ಮೈಯ
ಮರೆಸಿ ವಿಷಯ ದ್ದುಯ್ಯಲಿಗೊಪ್ಪಿಸಿದೆ । ಸೈಯೆಲೊ
ಧೊರೆಯೇ । ಇಂಥವ ನೆಂದು । ಅಯ್ಯೋಮುನ್ನರಿಯೆ ।
ಕರುಣಿ ಯೆಂಬ । ಹೀಯ್ಯಾಳಿ ಸರಿಯೆ । ಇನ್ನಾದರೂ ।
ಕೈಯ ಪಿಡಿಯಲಿ ಕೀರ್ತಿ ನಿನಗೆಲೊ ಧೊರೆಯೇ ॥ 4 ॥

ಮೊದಲೆಮ್ಮಾರ್ಯರು ನಿನ್ನ ಪದನಂಬಲವರಘ । ವೊದೆದು ಸಮ್ಮುದದಿ
ಸಂಪದವ ನೀಡಿದಿಯಂತೆ । ಅದನು ಮರೆದೆಯೊ । ಶಕುತಿಯು ಸಾ ।
ಲದಲೆ ಜರಿದೆಯೊ । ಜನರುಪೇ । ಳಿದ ಮಾತು ಪುಶಿಯೊ । ನಿಜ
ತೋರಲು । ಬುಧನುತ ಗೋಪಾಳವಿಠ್ಠಲ ಕೀರುತಿಯೋ ॥ 5 ॥

ರಾಗ : ಸುರಟಿ **ಪದ 10** ಆದಿತಾಳ

ಭಾರತಿ ಜನನಿ । ಪಾಲಿಸೆ ನಿತ್ಯ । ಮಾರುತನ ರಾಣಿ ॥ ಪ ॥
ಭಾರತಿ ಭಕುತಿಗೆ ಸಾರಥಿಯಾಗಿ ನೀ ।
ಪೂರತಿ ಕರಪಿಡಿ ಮಾರುತನ ರಾಣಿ ॥ ಅ.ಪ. ॥

ಸುರರ ಸತಿಯರಿಗೆ । ಧರೆಯೊಳವ । ತರಸಿಶಾಪಪರಿದೆ । ದರುಶನ ಮಾತ್ರದಿ
ವರವಿತ್ತು ಅವರಿಗೆ । ಪರಿಹರಿಸಿದೆ ಬಂದ ದುರಿತಗಳನುತಾಯೆ ॥ 1 ॥

ಜ್ಞಾನಶುಭ ಕಾಯಳೆ । ಸಜ್ಜನರಿಗೆ । ಜ್ಞಾನಪ್ರದಾಯಕಳೆ ಮಾನವ ಜನುಮ
ದಿಂದೇನು ಸಾಧನ ವುಂಟು । ನ್ಯೂನ ಮಾಡಿಸದೆ ನಿದಾನದಿ ಪಾಲಿಸೆ ॥ 2 ॥

ನಂಬಿದೆ ನಿನ್ನ ಪದ । ಯುಗಾಂಬುಜ । ದಿಂಬುತೋರೆನಗೆ ನಿಜ । ಕಂಬು
ಚಕ್ರಾಂಕಿತ ಗೋಪಾಲವಿಠ್ಠಲನ । ಅಂಬಕದಲಿ ನೋಳ್ಪಿ ಸಂಭ್ರಮಪಾಲಿಸೆ ॥ 3 ॥

ರಾಗ : ಮುಖಾರಿ **ಪದ 11** ಆದಿತಾಳ

ಕಾಯೋ ಶ್ರೀ ನಾರಸಿಂಹ । ಕಾಯೊ ಜಯ ನಾರಸಿಂಹ ॥ ಪ ॥

ಕಾಯೋ ಶ್ರೀ ನಾರಸಿಂಹ ತ್ರಿಯಂಬಕಾದ್ಯಮರೇಶ । ಭಯಾಂ ಧತಿಮಿರ
ಮಾರ್ತಾಂಡ ಶ್ರೀ ನಾರಸಿಂಹ ॥ ಅ.ಪ. ॥

ಘೋರ ಆಕಾಲಮೃತ್ಯು ಮೀರಿ ಬರಲುಕಂಡು । ಧೀರ ನೀ ಬಿಡಿಸ
ದಿನ್ನಾರೋ ಶ್ರೀ ನಾರಸಿಂಹ ॥ 1 ॥

ಧಿಷಣನೆ ಸುಭದ್ರ ದೋಷ ಮೃತ್ಯುಗೆ ಮ್ಯುತ್ಯು । ಸುಷುಮ್ನಾ
ನಾಡಿಸ್ಥಿತಿ ವಿಭುವೆ ಶ್ರೀ ನಾರಸಿಂಹ ॥ 2 ॥

ಜ್ಞಾನ ರಹಿತನಾಗಿ ನಾ ನಿನ್ನ ಮರೆತರೆ । ನೀನು
ಮರೆತದ್ದೇಕೊ ಪೇಳೋ ಶ್ರೀ ನಾರಸಿಂಹ ॥ 3 ॥

ಪ್ರಬಲೋತ್ತಮ ನೆನಸಿ ಅಬಲರ ಕಾಯದಿರೆ ।
ಸುಬಲರು ಕಂಡು ಮೆಚ್ಚುವರೆ ಶ್ರೀ ನಾರಸಿಂಹ ॥ 4 ॥

ಪಾಲಮುನ್ನಿರಾಗಾರ ಪದುಮೆ ಮನೋಹರ ಗೋ ।
ಪಾಲ ವಿಠ್ಠಲ ಜಗತ್ಪಾಲ ಶ್ರೀ ನಾರಸಿಂಹ ॥ 5 ॥

ರಾಗ : ಸುರಟಿ **ಪದ 12** ಆದಿತಾಳ

ಭ್ರಾಂತ ನಾದೆನಲ್ಲಾ । ಪರಗತಿ । ಚಿಂತೆಯೆಂಬೊ ದಿಲ್ಲಾ ॥ ಪ ॥

ಶ್ರೀ ಕಾಂತನ ಪದ ಸಂತತ ಪೂಜಿಸಿ । ಸಂತೋಷಿಸಲಿಲ್ಲ ॥ ಅ.ಪ. ॥

ಮೋಸ ಹೋದೆನಲ್ಲಾ । ವಿಷಯದ । ಆಸೆತೀರಲಿಲ್ಲ । ಹೇಸಿಕೆ ಭವಸುಖ
ಲೇಸೆಂದೆನಿಪೆ ವಿ । ಲಾಸವಾಯಿ ತಲ್ಲಾ ॥ ಬರದೆ ॥ 1 ॥

ಮಂದನಾದೆನಲ್ಲಾ । ದಿನಗಳು । ಸಂದುಹೋದವಲ್ಲಾ । ಮಂದರಧರ
ಮುಕುಂದ ನಂಘ್ರಿಯ । ಹೊಂದಿ ಸುಖಿಸಲಿಲ್ಲ ॥ ಬರಿದೆ ॥ ॥ 2 ॥

ದೇಹ ನಿತ್ಯವಲ್ಲ । ಮಮತೆ । ಗೇಹ ವ್ಯರ್ಥವಲ್ಲ । ಮೋಹ ವಸ್ತು
ಗೋಪಾಲ ವಿಠ್ಠಲ ಬಲ್ಲ । ಮೋಹದರಸವೆಲ್ಲ ॥ ಬರಿದೆ ॥ ॥ 3 ॥

ರಾಗ : ಭೂಪಾಳಿ **ಪದ 13** ಅಟ್ಟತಾಳ

ದಯವಿರಲಿ ದಯವಿರಲಿ ದಾಮೋದರಾ ॥ ಪ ॥

ಸಯೆವಾಗಿ ಬಿಡದೆನ್ನ ಸಾಕು ಶ್ರೀಕೃಷ್ಣ ॥ ॥ ಅ.ಪ. ॥

ಹೋಗಿ ಬರುವೆ ನಯ್ಯ ಹೋದ ಹಾಗೆಲ್ಲ । ಸಾಗುವನಲ್ಲನಾ ನಿನ್ನ
ಬಿಟ್ಟು ॥ ತೂಗಿ ತೊಟ್ಟಿಲು ಕೊನೆಗೆ ಸ್ಥಳದಲ್ಲಿ ನಿಲ್ಲುವದು ।
ಹ್ಯಾಗೆ ನೀ ನಡದಂತೆ ಹಾಗೆ ನಾನಡಕೊಂಬೆ ॥ 1 ॥

ಇದ್ದಲ್ಲೆ ಯೆನ್ನನ್ನುದ್ಧರಿಪ ಶಕ್ತಿ ಅ । ಸಾಧ್ಯ ನಿನಗೆಂದು ಬಂದವ ನಲ್ಲ ॥
ನದ್ಯಾದಿ ಕ್ಷೇತ್ರ ಮೂರ್ತಿಗಳಲ್ಲಿ ನಿಜಜ್ಞಾನ । ವೃದ್ಧ ಜನರ ಹುಡುಕಿ
ನಿನ್ನ ತಿಳಿಯಲು ಬಂದೆ ॥ 2 ॥

ಇದ್ದಲ್ಲೆ ಎನ್ನ ಸಲಹೊ ಅವರೊಳಗಾಗಿ । ಅತಿಶಯವೆ ಉಂಟು
ವಿಭೂತಿ ಗತಿಯು ॥ ಸಾಧನಕೆ ಅಭಿವ್ಯಕ್ತ ಸಂದರ್ಶನದಿ ।
ವಿಶೇಷ ಮಾರುತಿರಮಣ ನಿನ್ನ ॥ ॥ 3 ॥

ನೋಡಿದೆನೆ ನಾನಿನ್ನ ನೊಡದೆ ಯೆಂದೆಂದು । ಪಾಡಿದೆನೆ ಆರಾರು
ಪಾಡದೊಂದು ॥ ಮಾಡಿದೆನೆ ಅರ್ಚನೆಯ ಮೀಸಲಾದದು ಒಂದು
ಮೂಢಮತಿಯಲಿ ಮುಂದೆನೆಂದೆ ಕೈಯುಗಿದು ॥ 4 ॥

ಬಂದೆ ನಾನಿಲ್ಲಿ ಬಹು ಜನ್ಮದ ಸುಕೃತ । ದಿಂದ ನಿನ್ನ ಬಳಿಗೆ ಇಂದಿರೇಶ ॥
ವಂದು ಮಾತ್ರವು ಇದ್ದು ಸಕಲವು ಅರ್ಪಿಸಿದೆ ।
ಬಂಧನ ಕಡಿವ ಭಕುತಿಯು ಜ್ಞಾನನೀಡುವದು ॥ 5 ॥

ಬಿನ್ನಪ ಕೇಳೋ ಸ್ವಾಮಿ ಯೆನ್ನ ನೊಬ್ಬನೆ ಅಲ್ಲ । ಎನ್ನ ಹೊಂದಿ ನಡೆವ
ವೈಷ್ಣವರನಾ ॥ ಎನ್ನವರಿಗೆ ಬಾಹೊ ದುಷ್ಕರ್ಮಗಳ ಕೆಡಿಸಿ ಘನ್ನಗತಿಗೊ
ಯ್ಯುವ ಭಕುತಿ ಕೊಟ್ಟು ಕರುಣಿ ॥ 6 ॥

ಎನಗೆ ಆವದು ಬಲ್ಲೆ ಎಲ್ಲೆಲ್ಲಿ ಪೋದರೂ । ಕ್ಷಣಬಿಡದೆ ನಿನ್ನ ನೋಳ್ಪ
ಜ್ಞಾನವ ಕೊಡೊ । ಚಿನುಮಯಮೂರಿತು ಗೋಪಾಲ ವಿಠ್ಠಲ । ಘನ್ನಕರುಣಿ
ಮಧ್ವಮುನಿ ಮಂದಿರ ನಿವಾಸ ॥ 7 ॥

ರಾಗ : ಧನ್ಯಾಸಿ **ಪದ 14** ಅಟ್ಟತಾಳ

ಗುರು ರಾಘವೇಂದ್ರರ ಚರಣ ಕಮಲವನ್ನು । ಸ್ಮರಿಸುವ ಮನುಜರಿಗೆ ॥ ಪ ॥

ಕರೆ ಕರೆ ಗೊಳಿಸುವ ದುರಿತ ದುಷ್ಕೃತವೆಲ್ಲ ಕರಿಯು ಸಿಂಹನ ಕಂಡ ತೆರ
ನಾಗುವದಯ್ಯಾ । ॥ ಅ.ಪ. ॥

ಗುರುಮಧ್ವಮತವೆಂಬ ವರ ಕ್ಷೀರಾಂಬುಧಿಯಲ್ಲಿ ಹರಧರಿಸಿದ ಶಶಿಯಂತುದಿಸಿ ।
ಪರಮತ ತಿಮಿರಕ್ಕೆ ತರಣಿ ಕಿರಣ ವೆನಿಸಿ । ಪಿರಿದು ಮೆರೆದ ನರಹರಿ
ರಾಮಾರ್ಚರಕಾದ ॥ 1 ॥

ಹರಿಯೆ ಸರ್ವೋತ್ತಮ ಸಿರಿಯು ಆತನ ರಾಣಿ । ಪರಮೇಷ್ಟಿ ಮರುತರೆ ಗುರು ಗಳೆಂದು ॥ ಗರುಡ ಶೇಷ ರುದ್ರ ಸಮರೆಂದು ಸ್ಥಾಪಿಸಿ । ಸ್ಥಿರ ತರತಮ ಪಂಚಭೇದ ಸತ್ಯವೆಂಬ ॥ 2 ॥

ರಾ ಯೆನೆ ರಾಶಿ ದೋಷಗಳೆಲ್ಲ ದಹಿಸುವ । ಘ ಎನ್ನೆ ಘನ್ನಜ್ಞಾನ ಭಕ್ತಿ ಯೀವ । ವೇಂ ಎನ್ನೆ ವೇಗದಿ ಜನನ ಮರಣ ದೂರ । ದ್ರ ಯೆನ್ನೆ ದ್ರವಿಣಾರ್ಥ ಶ್ರುತಿ ಪಾದ್ಯನ ಕಾಂಬ ॥ 3 ॥

ಅಂಧಕರಿಗೆ ಚಕ್ಷು ವಂಧ್ಯೆಯರಿಗೆ ಸುತರು । ಬಂದ ಬಂದವರಿಗೆ ಭೀಷ್ಟವ ಕೊಡುತ ॥ ಒಂದಾರು ನೂರು ವತ್ಸರ ವೃಂದಾವನ ದಲ್ಲಿ । ಚಂದಾಗಿ ನಿಂದು ಮೆರೆವ ಕೃಪಾಸಿಂಧು ॥ 4 ॥

ದೇವಾಂಶರಾಗಿ ತುಂಗಾ ತೀರದಿ ನಿಂದು । ಸೇವೆ ಭೂಸುರರಿಂದ ಬಹು ಕೊಳ್ಳುತ ॥ ಭಾವಜನಯ್ಯ ಗೋಪಾಲವಿಠ್ಠಲನ್ನ । ಶೇವಿಸುತಿಹ ಯತಿಕುಲ ಶಿಖಾಮತಿಯಾದ ॥ 5 ॥

ರಾಗ : ಆರಭಿ **ಪದ 15** ತ್ರಿಪುಟತಾಳ

ಇದು ಎನೊ ಚರಿತ । ಮಂತ್ರೋದ್ಧಾರ । ಇದು ಏನೊ ಚರಿತ ॥ ಪ ॥

ಇದು ಏನೊ ಚರಿತ ಶ್ರೀ । ಪದುಮ ನಾಭನ ದೂತ ।
ಸದಾಕಾಲ ಸರ್ವರ । ಹೃದಯಾಂತರ್ಗತನಾಗಿ ॥ ಅ.ಪ. ॥

ವಾರಧಿ ಗೋಷ್ಪಾದ । ನೀರಂತೆ ದಾಟಿದ ।
ಧೀರ ಯೋಗಾಸನ । ಧಾರಿಯಾಗಿ ಪ್ಪುದು ॥ 1 ॥

ದುರುಳ ಕೌರವರನ್ನು । ವರ ಗದೆಯಲಿ ಕೊಂದ ।
ಕರದಲ್ಲಿ ಜಪಮಾಲೆ । ಧರಿಸಿ ಎಣಿಸುವದು ॥ 2 ॥

ಹೀನ ಮತಗಳನ್ನು । ವಾಣಿಲಿ ತರಿದಂಥ ।
ಜ್ಞಾನವಂತನೆ ಹೀಗೆ । ಮೌನವಾಗಿಪ್ಪುದು ॥ 3 ॥

ಸರ್ವ ವ್ಯಾಪಕ ನೀನು । ಪೂರ್ವಿಕ ದೇವನೆ ಶರ್ವನ ಪಿತ ಬಂದು ।
ಪರ್ವತ ಸೇರಿದ್ದು ॥ 4 ॥

ಗೋಪಾಲವಿಠ್ಠಲಗೆ । ನೀ ಪ್ರೀತಿ ಮಂತ್ರಿಯು ।
ವ್ಯಾಪಾರ ಮಾಡೆದೆ । ಈ ಪರಿ ಕುಳಿತಿಹೆ ॥ 5 ॥

ರಾಗ : ಸಾವೇರಿ **ಪದ 16** ಅಟ್ಟತಾಳ

ಹರಿಯೇ ನಮ್ಮ ಹಿರಿಯರು ಮಾಡಿದ ಉಪಕಾರ ।
ಮರೆಯದೆ ಸಲಹೊ ಎನ್ನ ॥ ಪ ॥

ಜನಕನಾಜ್ಞೆಯ ತಾಳಿ ನೀನು । ವನವನವ ಸಂಚರಿಪ ಕಾಲದಿ ।
ಹನುಮಂತನಾಗಿ ಶರಧಿ ಲಂಘಿಷಿ । ವನಿತೆ ಕುಶಲವ ತಿಳುಹಿಸೀ ॥
ಅನುಜ ಮೂರ್ಛಿತನಾಗಿ ಅಸು ವಿತ್ತು । ದನುಜ ರಥವೇರಿ ರಣಕೆ ಬರಲಾ ।
ಕ್ಷಣದಿ ವಾಹನನಾಗಿ ಜಯಿಸಿ ನಿನ್ನ । ಘನ್ನತೆಯನ್ನುಳುಹಿದಕಾರಣ ॥ 1 ॥

ಸುರದನುಜರಿಗಜೇಯ ಶೈವನು । ವರಬಲನು ಪಾಷಂಡ ದುರ್ಮತಿ ।
ಜರೆಯ ಸುತನು ನಿನ್ನ ಕೂಡೆ ಸಂ । ಗರಕೆ ಬರಲು ನೀನಲ್ಲದೆ ॥
ಶರಧಿಯೊಳು ಪುರ ಕಟ್ಟಿಸಿರುತಿ । ವರವೃಕೋದರನಾಗಿ ದುಷ್ಟನ ।
ಸರಕು ಮಾಡದೆ ಸೀಳಿ ನಿನ್ನ ಭಯ ಪರಿಹರಿಸಿದ ಕಾರಣ ॥ 2 ॥

ಹಿಂದಣ ವೈರದಲಿ ಖಳಕು । ಲೇಂದ್ರ ಮಣಿಮಂತ ನೆಂಬ ದೈತ್ಯನು ।
ಬಂದು ಅವನಿಯೊಳು ಪುಟ್ಟಿ ನೀನೆ ತಾ । ನೆಂದು ದುರ್ಮತವ ಪ್ರಬಲಿಸಿ ॥
ಕಂದು ಗೊರಳನೆ ಜಗಕೆಕಾರಣ । ನೆಂದು ನಿನ್ನಾಚ್ಛಾದಿಸಿರಲಾ ।
ನಂದ ತೀರಥರಾಗಿ ನಿನ್ನನು । ಮುಂದಕೆ ತಂದ ಕಾರಣ ॥ 3 ॥

ನಿನ್ನನೆ ಗುರು ದೈವ ವೆಂಬರು । ನಿನ್ನ ಪ್ರೀತಿಯ ಸತತ ಪಡೆವರು ।
ನಿನ್ನವಜ್ಞತೆ ಲೇಶ ತಾಳರು । ನಿನ್ನನ್ನೆ ಸೇವಿಸುವರು ॥ ನಿನ್ನ ಅಜ್ಞಧಿ
ಜಗವ ಪೊರೆವದು । ನಿನ್ನಲೇ ಪರಮಾದರವರಿಗೆ । ನಿನ್ನ ಕರುಣವರಲ್ಲಿ
ಪೂರ್ಣಪ್ರ । ಸನ್ನ ವಾಗಿರ್ದ ಕಾರಣ ॥ 4 ॥

ಹರಿಯೆ ನಿನ್ನವರವನುನಾನು । ಶರಣು ಪೊಕ್ಕೆನು ಕರವ ಪಿಡಿದು ದು ।
ಸ್ತರ ಭವಾಂಬುಧಿ ಬೇಗ ದಾಟಿಸಿ । ನಿರುಪದ್ರವ ಸ್ಥಳವ ಪೊಂದಿಸಿ ॥
ನಿರುತ ನಿನ್ನಾರಾಧನಿತ್ತು । ಕರಣಗಳಿಗೆ ಪ್ರತ್ಯಕ್ಷ ನಾಗಿ ।
ಪರಮ ಭಕ್ತರ ಸಂಘಕೊಡು ಜಗ । ದ್ಗುರುವೆ ಗೋಪಾಲವಿಠ್ಠಲ ॥ 5 ॥

ರಾಗ : ಕಾಂಬೋಧಿ **ಪದ 17** ಝಂಪೆತಾಳ

ಮುಖ್ಯಪ್ರಾಣನೆ ಕೈಯ್ಯಾ ಮುಗಿದು ಬೇಡುವೆನೆಯ್ಯಾ ॥ ಪ ॥

ಭಕ್ತಿ ಪಾಲಿಸು ಹರಿಯಾ ಪಾದ ಬಳಿಯಾ । ಮುಕ್ತಿಯಿಂದಲಿ ವಿವಿಧ
ಸಂಸಾರ ದಾಟಿ । ಶಕ್ತಿ ಎನಗೆ ಇತ್ತು ಸಲಹೋ ನಮಗೆಕರ್ತು ॥ ಅ.ಪ. ॥

ನಿನ್ನ ಮತ ಪೊಂದಿಸು ನಿನ್ನ ಚಿಹ್ನೆಯ ಧರಿಸು । ನಿನ್ನಶಾಸ್ತ್ರದೊಳೆನ್ನ
ಮುಳುಗಾಡಿಸು ನಿನ್ನ ಮೂರ್ತಿಯ ತೋರಿಸು । ನಿನ್ನವ್ಯಾಪ್ತತ್ವ ಚನ್ನಾಗಿ
ತಿಳಿಸು ಇನ್ನು ದಿನದಿನದಿ ಎನ್ನಿಂದಮಾಡಿದ ಕರ್ಮ ನಿನ್ನ ಅಂತರ್ಯಾಮಿ
ಗೊಪ್ಪಿಸೋ । ಬಿನ್ನಪವಲಾಲಿಸು ಘನ್ನ ದಯಾಳುವೆ ನಿನ್ನ ಹೊರತು
ಎನಗೆ ಅನ್ಯ ಗತಿಯಿಲ್ಲ ॥ 1 ॥

ನೀನು ಪಿಡಿಯಲು ಹರಿಯು ತಾನು ಪಿಡಿವನು । ನೀನು ಮುನಿದರೆ
ಹರಿಯು ತಾನು ಮುನಿವಾ । ನೀನು ಮಾಡಿದಕರ್ಮ ನಮ್ಮ ನಿನ್ನ
ಒಡೆಯಗೆ ಧರ್ಮ । ನೀನು ಇದ್ದರೆ ಹರಿಯುತಾನು ಇರುವ । ನೀನು
ಬಿಟ್ಟರೆ ಹರಿಯು ತಾನು ಬಿಟ್ಹೋಡುವಾ । ನೀನಿತ್ತದುದು ಯೇನಾದದ್ದೆಲ್ಲ ।
ದೀನರಕ್ಷಕ ಗುರುವೆ ದಾನಿ ಕಲ್ಪತರುವೆ ॥ 2 ॥

ನವ ವಿಧ ಭಕುತಿಗೆ ನೀನು ಮುಖ್ಯಾಭಿಮಾನಿ । ಕವಿಗಳಿಗೆ ನೀನು
ಕರುಣಿಸಿದರುಂಟು । ಭವರೋಗದ ಧಾತು ನೋಡಿ ನಡಿಸುವ ಮಂತ್ರಿ ।
ಭವರೋಗದಿ ಕಡೆಹಾಯ್ವುಪಾಯವ ತೋರಿಸೋ । ಭವದನುಗ್ರಹ ಎನ್ನ
ಮೇಲೆ ಪರಿಪೂರ್ತಿಸೀ । ಭವನಬಿಡಿಸದೆ ಭಕುತಿ ಎನಗೆ ಇತ್ತು ।
ಭವಹಾರಿಚಲ್ವ ಗೋಪಾಲ ವಿಠ್ಠಲನ ಅನು । ಭವಕೆ ತಂದಿತ್ತೆನಗೆ
ಬಹು ಪಂಥದಲ್ಲಿರಿಸೋ ॥ 3 ॥

ರಾಗ : ರೇಗುಪ್ತಿ **ಪದ 18** ಝಂಪೆತಾಳ

ಎನ್ನ ಬಿನ್ನಪ ಕೇಳೋ ಧನ್ವಂತ್ರಿ ದಯಮಾಡೋ ।
ಸಂಣವನು ಇವ ಕೇವಲ ॥ ಪ ॥

ಬನ್ನ ಬಡಿಸುವ ರೋಗವನ್ನು ಮೋಚನಮಾಡಿ ।
ಚನ್ನಾಗಿ ಪಾಲಿಸುವದೊ ವಿಭುವೆ ॥ ಅ.ಪ. ॥

ಆರೋಗ್ಯ ಆಯುಷ್ಯ ಐಶ್ವರ್ಯ ವೆಂಬೋವಿವು । ಮೂರುವಿಧವಸ್ತುಗಳು ।
ನಾರಾಯಣನ ಭಜಕರಾದವರ ಸಾಧನಕೆ । ಪೂರಣವಾಗಿಪ್ಪುವೊ ।
ಘೋರವ್ಯಭಿಚಾರ ಪರನಿಂದೆ ವಿತ್ತಾಪ । ಹಾರಮಾಡಿದ ದೋಷದಿ ।
ದಾರಿದ್ರರಾಗುವರೊ ಮೂರು ವಿಧದಿಂದಲಿ । ಕಾರಣನೆ ದುಷ್ಕರ್ಮ
ಪರಿಹರಿಸುವದೊ ॥ 1 ॥

ವಸುಮತಿಯ ಮೇಲಿನ್ನು ಅಸುರ ಜನರೆ ಬಹಳ । ವಶ ವಲ್ಲ ಕಲಿಯ
ಬಾಧೆ । ಬಿಸಿಲಿಂದ ಪೀಡಿತವಾದ ಸಸಿಗಳಂತೆ ಶಿಶುಗಳು ನಾ ವಿಪ್ಪೆವೊ ।
ಅಸುರಾರಿ ನಿನ್ನ ಕರುಣಾಮೃತದ ಮಳೆಗರೆದು । ಕುಶಲದಲಿ ಪಾಲಿಸುವದೊ ।
ಕೆಸರಿಂದ ಕೆಸರ ತೊಳೆದಂತೆ ಕರ್ಮದ ಪಥವು । ಅಸುನಾಥ ಹರಿಯೆ
ಪೊರೆಯೊ ಸ್ವಾಮಿ ॥ 2 ॥

ಆಧಿ ವ್ಯಾಧಿಗಳು ಉನ್ಮಾದ ವಿಭ್ರಮ ನಾನಾ । ಬಾಧೆ ಗೌಷಧನು ನೀನೇ ।
ಹೇದೇವ ನಿನ್ನ ಕರಕಲಶ ಸುಧೆಯನು ಎರೆದು । ಸಾಧುಗಳ ಸಂತೈಸುವಿ ।
ಮೋದ ಬಡಿಸುವಿ ನಿನ್ನ ಸಾಧಿಸುವರಿಗೆ ಶು । ಭೋದಯಂಗಳನು ಮಾಡಿ ।
ಆದರಿಸಿ ಇವಗೆ ತವಪಾದ ಧ್ಯಾನವನಿತ್ತು । ಸಾಧುಗಳೊಳಗಿಟ್ಟು ಮೋದ
ಕೊಡು ಸರ್ವದ ॥ 3 ॥

ಅನ್ಯರನು ಭಜಿಸದಲೆ ನಿನ್ನನೆ ತುತಿಸುತ್ತ । ನಿನ್ನ ಚಿನ್ಹಗಳ ಧರಿಸಿ ।
ನಿನ್ನವರವನೆನಿಸಿ ನಿನ್ನ ನಾಮೋಚ್ಚರಿಸಿ । ನಿನ್ನಂದ ಉಪಜೀವಿಸಿ ।
ಅನ್ನ ಆರೋಗ್ಯಕ್ಕೆ ಅಲ್ಪ ಜೀವಿಗಳಿಗೆ । ಇನ್ನು ಅಲ್ಪರಿಯ ಬೇಕೆ । ನಿನ್ನ ಸಂಕಲ್ಪ
ಭಕ್ತರನು ಪೋಷಿಪೆ ನೆಂಬ । ಘನ್ನಬಿರುದಿನ್ನು ಉಳುಹೋ ಸಲಹೊ ॥ 4 ॥

ನಿನ್ನವರಲಿ ಇವಗೆ ಇನ್ನು ರತಿಯನು ಕಂಡು । ನಿನ್ನವ ನೆಂದು ಅರಿದು ।
ನಿನ್ನ ನಾ ಪ್ರಾರ್ಥಿಸಿದೆ ಅನ್ಯರಿಗೆ ಆಲ್ಪರಿಯೆ । ಎನ್ನಪಾಲಿಸುವ ಧೊರೆಯೆ ।
ಎನ್ನ ಮಾತಲ್ಲವಿದು ಎನ್ನ ಪಿಯರ ಮಾತು । ಮನ್ನಿಸ ಬೇಕೊ ಕರುಣಿ । ಅನ್ನಂತ
ಗುಣಪೂರ್ಣ ಗೋಪಾಲವಿಠ್ಠಲನೆ ಇನ್ನಿ ದನುಲಾಲಿಸಯ್ಯಾ ಜೀಯಾ ॥ 5 ॥

ರಾಗ : ಸೌರಾಷ್ಟ್ರ **ಪದ 19** ಅಟ್ಟತಾಳ

ಸ್ಮರಿಸುವೆ ನಾ ನಿಮ್ಮ ಚರಣಕಮಲವನ್ನು ವಿಜಯರಾಯ ಅಯ್ಯಾ
ಶರಣ ಜನರಪ್ರಿಯ ಪರಮ ಕರುಣಾನಿಧೆ ವಿಜಯರಾಯ ॥ ಪ ॥

ಜನ್ಮಾರಭ್ಯದಿ ನಿಮ್ಮ ಗುಣಕರ್ಮಗಳುಯಲ್ಲ । ವಿಜಯರಾಯ ।
ಇನ್ನು ನಾ ವರ್ಣಿಸಲೆಷ್ಟರವನೊ ಗುರು ವಿಜಯ ರಾಯ ॥ 1 ॥

ದಿವಿಜರಾವೇಶದಿಂದವನಿಯೊಳುದಿಸಿದಿ । ವಿಜಯರಾಯ
ದಿವಿಜರಿಂದ ಪ್ರತಿದಿವಸ ಬಿಡದೆ ಇದ್ದೆ ವಿಜಯರಾಯ ॥ 2 ॥

ಭಾಗವತ ಧರ್ಮವಹಿಸಿ ತ್ರಿರಾವರ್ತಿ ವಿಜಯರಾಯ ।
ಭಾಗೀರಥಿಯನ್ನು ಚನ್ನಾಗಿ ಸೇವಿಸಿದೆ ನೀ ವಿಜಯರಾಯ ॥ 3 ॥

ಕಂಚಿ ಕಾಳಹಸ್ತಿ ಶ್ರೀರಂಗ ಸೇತುಯಾತ್ರಿ ವಿಜಯರಾಯ ।
ಪಂಚವಾರವು ಸಂಚರಿಸಿ ಸೇವಿಸಿದಯ್ಯಾ ವಿಜಯರಾಯ ॥ 4 ॥

ಮರಿಯಾದೆಯಿಲ್ಲದೆ ವರಗಿರಿ ಯಾತ್ರಿಯ ವಿಜಯರಾಯ ।
ಪರಿಪರಿ ಕ್ಷೇತ್ರವ ಪೋಗಿ ಪೂಜೆಸಿದಯ್ಯ ವಿಜಯರಾಯ ॥ 5 ॥

ಮಹಿಯಲ್ಲ ಚರಿಸಿ ಸರ್ವಕ್ಷೇತ್ರ ಮೂರುತಿ ತುತಿಸಿದ್ಯೊ । ವಿಜಯ
ಒಹಿಸಿ ದಾಸತ್ವ ವೃಷ್ಣವ ಸಿದ್ಧಾಂತ ವರದ್ಯೋ ವಿಜಯರಾಯ ॥ 6 ॥

ಗುರುಪದಿಷ್ಟರಾಗಿ ವ್ಯಾಸ ಕಾಶಿಲಿರುತಿದ್ಯೊ । ವಿಜಯ ।
ದುರ್ಯೋನಿ ಬಂದ ವಂಶಸ್ಥನುದ್ಧರಿಸಿದೆ । ವಿಜಯ । ॥ 7 ॥

ಸ್ವಚ್ಛವಾಗಿ ಗಂಗಾತೀರ ವಾಸಮಾಡಿನಿಚ್ಚಾಗಿ ಶ್ರೀವಿಜಯ ।
ಹೆಚ್ಚಾದ ಪರವಣಿ ಮಚ್ಚೋದರಿಯತೋರ್ದೆ ವಿಚಿತ್ರ । ವಿಜಯ । ॥ 8 ॥

ತುಂಗಾ ತೀರದಿ ಕುಳಿತು ಮೆಲಕೆ ಉದಕ ಗಂಗೆ ಉಕ್ಕಿಸಿತೊರ್ದೆ । ವಿಜಯರಾಯ।
ಅಂಗದ ಮುಸುಕು ತೆರೆದನೊ ಕ್ಷೇತ್ರದಿ ಪಾಂಡುರಂಗ । ವಿಜಯರಾಯ ॥ 9 ॥

ಮಧ್ವಮತಕೆ ಆವಿರುದ್ದವಾಗಿ ಕವನ ಬದ್ಧಾದಿ । ವಿಜಯರಾಯ ।
ಶಬ್ದ ಸಂಗತಿಯಿಂದ ಸಿದ್ಧಾಂತ ತತ್ವ ಮುದ್ದೆ ಮಾಡಿದೆಯೊ । ವಿಜಯರಾಯ॥10॥

ತಿದ್ದಿತತ್ವಸಾರಸುಳಾದಿ ಪದಗಳು ಬುದ್ಧಿಲಿ । ವಿಜಯರಾಯ ತದ್ಧಿಮಿ
ಧಿಮಿಕೆಂದು ಹೃದಯಾಲಯದ ಹರಿಯ ಎದ್ದು ಕುಣಿಸಿದಿಯೋ ।ವಿಜಯರಾಯ॥11॥

ಸದಾಚಾರ ಸಂಪತ್ತು ಮಧುಕರ ವೃತ್ತಿಯಲಿ । ವಿಜಯರಾಯ ॥ ಕದನ್ನ
ಉಂಡರಿಯಾರು ಶಿಷ್ಯ ಜನಸಂಘ ಸದಾಕಾಲ ವಿಜಯರಾಯ ॥ 12 ॥

ಭಕ್ತರ್ಗೆ ಬಂದಪಮೃತ್ಯು ಜಯಿಸಿ ಆಯುವನಿತ್ತೆ । ವಿಜಯರಾಯ । ಪ್ರತ್ಯಕ್ಷ
ವಲ್ಲದೆ ಮನವೆ ಇದಕೆ ಸಾಕ್ಷಿ ಅತ್ಯಂತ ಮಹಿಮೆ ವಿಜಯರಾಯ ॥ 13 ॥

ನಿತ್ಯನ್ನದಾನ ಪುತ್ರೋತ್ಸಹಗಳನ್ನಿತ್ತು ಸತ್ಯಶ್ರೀ ವಿಜಯರಾಯ ॥ ಹತ್ತೆಂಟು
ಮದುವೆ ಮುಂಜುವಿಗಳ ಮಾಡಿಸಿ ನಿನ್ನ ಭೃತ್ಯರ ಪೊರೆದ್ಯೊ ವಿಜಯರಾಯ॥14॥

ಪ್ರತ್ಯಕ್ಷವಾಗಿ ಹತ್ತಿಪ್ಪತ್ತು ಜನರಿಗೆ ತತ್ವೋಪದೇಶಮಾಡಿ ವಿಜಯರಾಯ
ಹೃತ್ಕಮಲದಿ ಹರಿಯ ತಿಳಿಸಿ ಸದ್ಗತಿಗಭಯಾವಿತ್ತೆ ವಿಜಯರಾಯ ॥ 15 ॥

ಎಲ್ಲರಲ್ಲಿ ಸಿರಿವಲ್ಲಭನಂಶವ ನಿಲ್ಲಿಸಿ ವಿಜಯರಾಯ ॥ ಎಲ್ಲ ಬಗೆಯ ಸೇವೆ
ಕೊಂಬುವ ನಿನ್ನ ಬಲ್ಲವರಾರೋ ವಿಜಯರಾಯ ॥ 16 ॥

ಎನ್ನಿಂದಲೇನೇನು ಆಗೊ ಸಾಧನವೆಲ್ಲ ನಿನ್ನದೆ ವಿಜಯರಾಯ ॥ ಎನ್ನ
ಸಾಮರ್ತ್ಯವೇನು ಜನ್ಮ ಜನ್ಮಾಂತರಕೆ ನಿನ್ನಬಿಡದೆ ವಿಜಯರಾಯ ॥ 17 ॥

ಈಗ ಈ ಯುಗದೊಳು ಸಾಧನವೆಂಬುದು ನಾ ಕಾಣೆ ವಿಜಯರಾಯ ॥
ಯೋಗಿ ನಿನ್ನ ಕರುಣವಾಗಿದ್ದವಗೆಲ್ಲ ಸಾಗಿಬರುವದೊ ವಿಜಯರಾಯ ॥ 18 ॥

ಬಲ್ಲಿದ ನೀ ಒಂದು ರೂಪದಿಯೆನ್ನಲಿ ನಿಲ್ಲಿಸಿರಲಾಗಿ ವಿಜಯರಾಯ ॥ ಎಲ್ಲ
ಜನರು ಬಂದು ಇಲ್ಲಿ ವಾಲ್ಗೈಸಿನ್ನು ಎಲ್ಲ ವರವ ಬೇಡುವರೋ ವಿಜಯ॥ 19 ॥

ನಿಮ್ಮ ಪುಣ್ಯದಶೇಷ ಇನ್ನುವುಂಬುವೆ ನಾವು ಬಂಣ್ಣಿಪೆನು ॥ ವಿಜಯರಾಯ ॥
ಎನ್ನ ಪೊಂದಿ ದವರು ನಿನ್ನ ಪೊಂದಿದವರು ಇನ್ನು ಕೇಳು ವಿಜಯರಾಯ॥20॥

ಪರಮ ಪುರುಷ ನಿಮ್ಮ ಕರುಣ ಕವಚ
ಸ್ತೋತ್ರ ನಿರುತ ಮಾಡುವ ಭಕ್ತರ್ಗೆ ವಿಜಯರಾಯ ।
ಸಿರಿಮಹಾರಾಜ ಗೋಪಾಲವಿಠ್ಠಲವೊಲಿದು
ಕರದು ಕೈಪಿಡಿವನಯ್ಯಾ ವಿಜಯರಾಯ ॥ 21 ॥

ರಾಗ : ಆರಭಿ **ಪದ 20** ಆದಿತಾಳ

ಕಾಪಾಡೆಲೆ ಸಕಲಾಪಧ್ಧಾರಿಣಿ । ಕೊಲ್ಹಾಪುರಗತ ಕಮಲೆ ॥ ಪ ॥

ಈ ಪರಿ ಹರಿಯ ದಯಾಪಾತ್ರಳೆ ಶುಭ । ನೂಪುರಾದಿ ಸುಕಲಾಪ ಶೋಭಿತೆ
ಭ್ರೂ । ಚಾಪಚಲನದಿಂದಾ ಪವಮಾನನಿ । ಗೆ ಪದದೇ ಭವತಾಪಗಳಳಿದೆ ॥ಅ.ಪ.॥

ಇಂದೀವರ ವರಮಂದಿರ ನಂದಿನಿ । ಚಂದ್ರ ಜಯಿಪ ವದನೆ । ಬೃಂದಾರಕ
ಮುನಿ ವಂದಿತ ಪದಯುಗೆ । ಕುಂದ ಕುಟ್ಮಲರದನೆ । ವದನೆ । ಮುಕುಂದ ಹೃದ
ಯ ಸದನೆ ॥ ಇಂದ್ರ ನೀಲ ನಿಭ ಸುಂದರ ತನುಗುಣ । ಸಾಂದ್ರ ಇಂದು

ಮುಖಿ ಮಂದರ ಧರ ಗೋ । ವಿಂದ ಬಂಧು ನುತೆ ಬೃಂದಾವನ ಪತಿ
ನಂದನಂದನನಾ ನಂದಿನಿ ವಂದಿತೆ ॥ 1 ॥

ಕನ್ಯಾಮಣಿ ಜಗನ್ಮಾನ್ಯಾಮೃತ ಪಾ । ವನ್ನಾಧರ ಬಿಂಬೆ ।
ಘನ್ನ ಕಲಶ ಕುಚವನ್ನು ಧರಿಪ ಕಟಿ । ಸಣ್ಣ ಘನ
ನಿತಂಬೆ । ಅಂಬೆ । ಚಿನ್ನ ಪುತ್ತಳಿ ಬೊಂಬೆ ॥ ಅನ್ನವಸನ
ಧನಧಾನ್ಯಕಾಗಿ ಪರ । ರನ್ನ ಯಾಚಿಸಿ ಬಲು ಖಿನ್ನ ನಾಗುತಲಿ ।
ನಿನ್ನನು ಮರೆದೆನು ಎನ್ನವ ಗುಣಗ । ಳನ್ನು ಎಣಿಸದಿರು
ಮನ್ನಿಸು ಬಿನ್ನಪ ॥ 2 ॥

ಲೋಲ ಕುಂಡಲ ಕಪೋಲ ಶೋಭಿತ ಕೀ । ಲಾಲಜಾತ
ಪಾಣಿ । ಕೇಳಲಿ ಯಮುನಾ ಕೂಲದಿ ಹರಿಯ । ದುಕೂಲ ಚೋರನ
ರಾಣಿ । ಜಾಣಿ । ಸುಶ್ರೋಣಿ । ಜಗತ್ರಾಣಿ । ಕಾಲಕೂಟ
ಸಮ ಕೀಳು ವಿಷಯದಲಿ । ಬೀಳುವ ದೆನ ಮನ ವಾಲಿಸಿ
ಶ್ರೀಗೋ । ಪಾಲವಿಠ್ಠಲ ನನುಗಾಲ ಸೇವೆಯೋಳು । ಶೀಲ
ವೀಯೆ ಯೆಂದು ಕೇಳುವೆ ಲಾಲಿಸಿ ॥ 3 ॥

ರಾಗ : ಭೈರವಿ **ಪದ 21** ಛಾಪುತಾಳ

ಈತನೀಗ ನಮ್ಮ ದೇವನೂ ॥ ಪ ॥

ಪ್ರೀತಿ ಇಂದಲಿ ಸ್ಮರಿಸುವವರ ಪಾತಕಗಳಾ ಪರಿಹರಿಪ ॥ ಅ.ಪ. ॥

ಅಕ್ರೋರನ್ನ ಪ್ರೀತ । ಚಕ್ರ ಶಂಕ ಧರಿಸಿದಾತ ॥ ನಕ್ರ ಬಾಧೆಯ
ತರಿದು ತನ್ನ । ಭಕ್ತರನ್ನ ಕಾಯಿದಾತ ॥ 1 ॥

ಅಜಮಿಳನ್ನ ಸಲಹಿದಾತ । ವ್ರಜದ ಗೋವು ಕಾಯಿದಾತ
ಭಜಿಸುವವರ ಬಿಡನು ಪ್ರೀತಿ । ತ್ರಿಜಗದೊಳಗೆ ಮೆರೆವದಾತ ॥ 2 ॥

ಸಕಲಗುಣ ಪೂರ್ಣ ನೀತ । ಸಕಲದೋಷ ದೂರ ನೀತ ॥ ಸಕಲಾನಂದ
ಪೂರ್ಣನೀತ । ಭಕುತಿ ಮಂತ್ರಕೊಲಿವ ದಾತ ॥ 3 ॥

ಅನಾಥ ಬಾಂಧವ ನೀತ । ಅನಾದಿ ಕಾಲದವನಾತ ॥ ಅನಾದಿ
ಮೊರೆಯ ಕೇಳಿ । ಆ ನಿಮಿಷದೊಳು ಒದಗಿದಾತ ॥ 4 ॥

ಕಮಲ ಮುಖಿಯ ರಮಣ ನೀತ । ಕಮಲಾಸನ ಜನಕ ನೀತ ॥
ಕಮಲಾಕ್ಷ ಗೋಪಾಲವಿಠ್ಠಲ ಹೃತ್ । ಕಮಲದೊಳು ನಿಲುವ ದಾತ ॥ 5 ॥

ರಾಗ : ಮಧ್ಯಮಾವತಿ **ಪದ 22** ಚಾಪುತಾಳ

ಕರುಣಿಸೆನ್ನನು ದೇವಾ । ಹೇ ಶ್ರೀನಿವಾಸ । ಚರಾಚರ ಜಗಕಾವ ॥ ಪ ॥

ಹರಿಯ ಭಜಿಸುವ । ಶರಣರಿಗೆ ಮುದ ವೀವ । ಸುರವರ್ಯದೇವಾ ॥
ಸರಸಿಜ ಖಗನರ ಮೃಡ ಹರಿ । ಸ್ಮರ ಯಮಪಿತ
ಸಮ ಗುರು । ಸುರ ಮುನಿ ಭೃಗು ನಳ ಕರಿ ನಹುಷ
ಧ್ರುವ । ವರ ಪ್ರಹ್ಲಾದ ಪೊರೆದ ವೆಂಕಟ ॥ ಅ.ಪ. ॥

ಮೂರು ನಾಲಕರಿಂದ । ಈ ದೇಹ ನಿರ್ಮಿತ । ಆರು ಮೂರುಗಳಿಂದ ।
ಮೂರಾರು ಸಾವಿರ । ಈರೆರಡಾರಿಂದ । ಎರಡೊಂದರಿಂದ ॥
ಸರಸಿಜೋದ್ಭವ ಚರಿತ ಪ್ರಳಯವಿ । ಧರಿಸಿ ಜೀವರ
ಸರಸಿ ಜಾಸನ । ಯಿರಿಸಿ ಕುಕ್ಷಿಯ ಸರಸನಾಭದಿ । ಚರಿಸಿ
ಬಹಿರದಿ ಸುರರ ಒಡೆಯನೆ । ಬೆರಸಿ ಕಾಣದೆ ಚರಿಸಿ ತಪವನು ।
ಕರಿಸಿ ಸೃಷ್ಟಿಯ ಹರಿಸಿ ಸಂಶಯ । ಸರಸಿ ಧರನನು ಸರಿಸಿ
ತಾರನು । ಚರಿಸಿ ಲಿಂಗದಿಯಿರಿಸಿ ದೇಶದಿ । ಸರಸರೂಪವ
ಧರಿಸಿ ಹರಿಯನು । ಬೆರಸಿ ಸುಖವನು ಸುರಿಸಿ ಇರುತಿಹ ।
ಗಿರಿಶ ಮೊದಲಾದ ಮರರಿಗೆ ಬಿಂ । ಜೆನಿಸಿದರಸಿಗೆ ಅರಸು ಎನಿಸಿದೆ ॥ 1 ॥

ಪಂಚ ನಾಡಿಗಳಲ್ಲಿ । ತುಂದಿಯ ಚತುರ್ದಳ । ಪಂಚ
ಕಮಲಗಳಲ್ಲಿ । ಅನಿರುದ್ಧ ನಾಭಿಯ । ಪಂಚ ಷಡ್ಡಳದಲ್ಲಿ ।
ಪ್ರದ್ಯುಮ್ನ ನಲ್ಲಿ ॥ ಪಂಚ ಕಮಲವು ಹೃದಯ ಮಧ್ಯದಿ ।
ಪಂಚತ್ರಯದಳ ಮಧ್ಯ ಕರ್ಣಿಕೆ । ಪಂಚ ಪಂಚಾ ಚತುರ
ಸ್ತಂಬದಿ । ಮಿಂಚಿನಂತೆ ಮೂಲೇಶ ಇರುತಿಕ । ಪಂಚ
ದ್ವಾರದ ಮಂಟಪಾದಲಿ । ಪಂಚ ಜೀವರ ವಂದ್ಯ ಪ್ರಾಜ್ಞನೆ ।
ಪಂಚರೂಪದಿ ಪ್ರಾಣ ನಿರುತಿಹ । ಪಂಚ ಪಂಚ ದ್ವಿದಳ
ಉರದಲಿ । ಹಂಚಿಕಿಂದಲಿ ಕೃತಿರಮಣನಿಹ । ಪಂಚತ್ರಯ
ದಳ ಕಂಠ ತೈಜಸ । ಪಂಚ ಮುಖ ಚತುರ್ದಳದಿ ಫಾಲದಿ ।
ಪಂಚಮೋಕ್ಷ ಪ್ರದ ತುರಿಯನೆ ॥ 2 ॥

ಲಕ್ಷ್ಮೀರಮಣನೆ ದೇವಾ । ತ್ರಿಜಗವನೆಲ್ಲವ । ಕುಕ್ಷಿಯೊಳಗಿಟ್ಟು
ಕಾವಾ । ಸುಮ ನಸರೊಡೆಯನೆ । ಅಕ್ಷಯಾಂಬರ ವೀವಾ ।
ಚತುರಾದಿ ದೇವಾ । ಮೋಕ್ಷದಾಯಕ ವಾಸುದೆವನೆ ।
ಶಿಕ್ಷಪ್ರದ ಸಂಕರುಷಣನೆ । ರಕ್ಷಕ ಪ್ರದ ಕೃತಿರಮಣನೆ ।
ಸೂಕ್ಷ್ಮಸೃಷ್ಟಿ ಶಾಂತಿ ತೈಜಸ । ದಕ್ಷಿಣಾಕ್ಷಿಯ ಜಾಗ್ರವಿಶ್ವನೆ ।
ದಕ್ಷ ಸ್ವಾಪ್ನಾ ಕಂಠ ತೈಜಸ । ದಕ್ಷಿಣ ಪ್ರಿಯ ಪ್ರಾಜ್ಞಸುಪ್ತನೆ ।
ಸಾಕ್ಷಿ ಭೂತನೆ ಸಖನೆ ತುರ್ಯಾತ್ಮನೆ । ಪಕ್ಷಿವಾಹನ ಪರಮಪುರು
ಷನೆ । ಈಕ್ಷಣಪ್ರದ ಜ್ಞಾನರೂಪನೆ । ದಕ್ಷ ಭಂಜನ ಸಖನೆ
ಕೃಷ್ಣನೆ । ಇಕ್ಷು ಧನುವಾಧರನ ಪಿತನೆ । ಚಕ್ಷುಶ್ರವ ಗುರು
ತಂದೆ ಗೋಪಾಲ । ವಿಠ್ಠಲನೆ ನೀರಕ್ಷಿ ಸೆನ್ನನು ॥ 3 ॥

ರಾಗ : ಭೂಪಾಳಿ

## ಪದ 23

ಅಟ್ಟತಾಳ

ದೇವಿ ಅಂಬುಜ ವಲ್ಲಿ ರಮಣನೆ । ಭೂವರಾಹದಯಾನಿಧೆ ॥ ಪ ॥

ಪವಮಾನನ ದಿವ್ಯ ಕರದಿಂದ । ಸೇವೆ ಸಂತತಗೊಳ್ಳುವಿ ॥ ಅ.ಪ. ॥

ಅವನಿಯೋಳು ಶ್ರೀಮುಷ್ಣ ಕ್ಷೇತ್ರದಿ । ನೀ ವಿಹಾರವು ಮಾಡುವಿ ।
ಭವ ವಿಮೋಚನ ಭಕ್ತವತ್ಸಲ । ಕವಿಗಳಿಗೆ ಕರುಣಾಕರ ॥ 1 ॥

ಅತ್ಯಗಾಧ ಸುಶೀಲ ಜಾನ್ಹವಿ । ಸುತ್ತು ಷೊಡಶತೀರ್ಥದಿ ॥
ನಿತ್ಯ ಪುಷ್ಕರಣಿಯ ಗರ್ಭದಿ । ನಿತ್ಯಿರುವದು ಕಂಡೆನಾ ॥ 2 ॥

ಮತ್ತು ಬಣ್ಣಿಪೆ ತೀರ್ಥ ತಟದಲಿ । ಉತ್ತಮಾಗ್ನೇಯ ಭಾಗದಿ ॥
ಚಿತ್ತವೇದ್ಯದಿ ಕಲ್ಪತರು ಅಶ್ವಥ್ಥರೂಪದಿ ಇರುವನಾ ॥ 3 ॥

ಕರಗಳೆರಡನು ಕಟಯಲಿಟ್ಟು । ಕೋರೆಹಲ್ಲನು ತೋರುತಾ ॥
ಧರಿಸಿ ಚಿನ್ಮಯ ಸಾಲಿಗ್ರಾಮದ । ಸರವು ಈಪರಿ ಬೆಳಗುತಾ ॥ 4 ॥

ಘನ್ನಶ್ವೇತ ವರಾಹ ಮೂರುತಿ । ಯೆನ್ನ ಪೂರ್ವದ ಪುಣ್ಯದಿ ॥
ನಿನ್ನ ಶುಭಕರ ಪಾದ ಪಂಕಜ । ವನ್ನು ಕಂಡೆನು ಇಂದು ನಾ ॥ 5 ॥

ಸುಂದರಾನನ ಕಂಜ ಮಧುಪನ । ಇಂದು ನೋಡಿದ ಕಾರಣಾ ॥
ಬಂದ ದುರಿತಗೆಳೆಲ್ಲ ಹೋದವು । ಚಂದ ಸುಖಕರವಾದವೂ ॥ 6 ॥

ಮಲ್ಲಮರ್ದನ ವೈಕುಂಠದಿಂದ । ಮೆಲ್ಲ ಮೆಲ್ಲನೆ ಬಂದಿಯಾ ॥
ಝಲ್ಲಿ ಕಾ ವನದಲ್ಲಿ ಕುಳಿತು । ಎಲ್ಲ ಭಕ್ತರ ಸಲಹುವಿ ॥ 7 ॥

ಸೂಕರಾಸ್ಯನೆ ನಿನ್ನ ಪಾದಕ । ನೇಕ ವಂದನೆ ಮಾಡುವೆ ॥
ಶೋಕಹರ ಗೋಪಾಲವಿಠ್ಠಲ । ನೀಕರುಣದಿ ರಕ್ಷಿಸೊ ॥ 8 ॥

ರಾಗ : ಮುಖಾರಿ **ಪದ 24** ಝಂಪೆತಾಳ

ಮುಖ್ಯ ಕಾರಣ ವಿಷ್ಣು ಸ್ವತಂತ್ರನೆ ಸತ್ಯ ॥ ಪ ॥

ತಿಳಿವೆಂಬುವ ನೀನೆ ತಿಳಿದು ತಿಳಿಸುವ ನೀನೆ । ತಿಳಿವ
ವಸ್ತುವು ನೀನೆ ತೀರ್ಥಪದನೆ । ತಿಳಿದುದಕೆ ಫಲ ನೀನೆ
ತಿಳಿಯ ಗೊಡದವ ನೀನೆ । ತಿಳಿವ ಸ್ವತಂತ್ರ ನಿನ್ನದು
ತಿಳಿಸೊ ಸರ್ವೇಶ ॥ 1 ॥

ಧ್ವನಿಯು ವರ್ಣೋದಯ ಶಬ್ದ ವಾಚ್ಯನು ನೀನೆ । ಗುಣದೇಶ ಕಾಲ
ಕರ್ಮಗಳು ನೀನೆ ॥ ತನುಕರಣ ವಿಷಯ ಮನ ಜೀವ ಸ್ವಾಮಿ
ಯು ನೀನೆ । ಅಣುಮಹಜ್ಜಗದ ಬಹಿರಂತ ರಾತ್ಮಕನೆ ॥ 2 ॥

ವ್ಯಾಸ ಕಪಿಲ ಹಯಾಸ್ಯ ಧನ್ವಂತ್ರಿ ವೃಷಭ ಮಹಿ । ದಾಸ
ದತ್ತಾತ್ರೇಯಾದ್ಯಮಿತ ರೂಪ ॥ ಈ ಸುರೂಪದಿಜ್ಞಾನ
ವಧಿಕಾರಿಗಳಿಗೊರೆದು । ಪೋಷಕನು ಅದೆ ಕೃಪಾಳುವೆ ಶ್ರೀಶ ॥ 3 ॥

ಚೇತನನು ಅಹುದು ನೀ ಚೇಷ್ಟೆಯನು ಮಾಡಿಸಲಚೇತನನು
ಸರಿ ನೀನು ಸುಮ್ಮನಿರಲು ॥ ಯಾತರವನ್ನಾನಲ್ಲ ನಿನಂಘ್ರಿ
ನಡೆಯಲ್ಲ ಚೇತನನಹುದು ನೀ ಚಲಿಸೆ ಚಲಿಸುವೆನು ॥ 4 ॥

ತಿಳಿಯನ್ನುವದಕಾಗಿ ತಿಳಿಯ ತಕ್ಕುದು ನೀನೆ । ತಿಳಿಸೋ
ಸೋತ್ತಮರೆಲ್ಲ ತಿಳಿದ ಶೇಷ ॥ ತಿಳಿವಲ್ಲಿ ತಿಳಿಪಲ್ಲಿ ತಿಳಿವಳಿಕೆ
ನೀನಾಗಿ । ಚಲಿಸದೆಲೆ ಮನ ನಿಲಿಸೊ ಗೋಪಾಲವಿಠ್ಠಲ ॥ 5 ॥

ರಾಗ : ಹನಮತೋಡಿ **ಪದ 25** ಝಂಪೆತಾಳ

ಇದು ಪಾಲಿಸಿದ ಪಾಲಿಸಿದ ಪಾಲಿಸೈಯ ॥ ಪ ॥

ಪದುಮ ಸಂಭವ ಪಿತನೆ ಪದೆಪದೆ ಎನಿಗಿನ್ನು ॥ ಅ.ಪ. ॥

ಜೀವ ಅಸ್ವಾತಂತ್ರ ದೇವ ನಿಜಸ್ವತಂತ್ರ । ಜೀವ ಜಡರು
ದೇವರಾಧೀನವೆಂದು ॥ ಜೀವೋತ್ತಮರಲಿ ಭಕುತಿಜಡ
ದಲ್ಲಿ ವಿರಕುತಿ । ಕಾವಕೊಲ್ಲುವನೆಲ್ಲ ಹರಿಯೆಂಬ ಜ್ಞಾನವ ॥ 1 ॥

ಬಿಂಬ ಚಲಿಸೆ ಪ್ರತಿಬಿಂಬ ಚಲಿಸುವನು । ಬಿಂಬ ಪೂರ್ಣನು
ಪ್ರತಿಬಿಂಬ ಅಪೂರ್ಣ ॥ ವುಂಬುಡುವೋಕ್ರಿಯ ಬಿಂಬ
ಮಾಡಿಸೆ ಪ್ರತಿ । ಬಿಂಬಕ್ಕುಂಟೆಂಬುವ ಬಿಂಬಕ್ರಿಯವೆನಗೆ ॥ 2 ॥

ಎನ್ನ ಬಿಂಬನೆ ಸರ್ವ ಬಿಂಬನೆಂತರಿದು । ಇನ್ನು ಪ್ರತಿ
ಬಿಂಬಗಳ ಭಿನ್ನತೆ ತಿಳಿದು ॥ ಮನ್ನಣೆ ಉತ್ತಮರಿಗೆ
ಅಮನ್ನಣೆ ನೀಚರಿಗೆ । ಭಿನ್ನ ಭಿನ್ನರಿಗೆ ಫಲವನ್ನು ಕೊಡುವ ಜ್ಞಾನ ॥ 3 ॥

ಪುಣ್ಯ ಪಾಪಗಳೆರಡು ಇನ್ನು ಆಗುತಲಿರಲು । ಎನ್ನದೆಂದು ಹಿಗ್ಗಿ
ಕುಗ್ಗದಲೆ । ಭಿನ್ನದ ಪುಣ್ಯದ ಜೀವ ಭಿನ್ನಪಾಪದ ಜೀವ । ಇನ್ನು
ಮುನ್ನೆ ತಿಳಿವ ಭಿನ್ನ ಜ್ಞಾನವ ನೆನಗೆ ॥ 4 ॥

ಬಂಧನ ನಿವೃತ್ತಿ ಎಂದಿಗೋ ಎನಗೆಂದು । ಸಂದೇಹದಿಂದ ನಾ
ಕೇಳಲಿಲ್ಲ ॥ ಸುಂದರ ಮೂರುತಿ ಗೋಪಾಲವಿಠ್ಠಲ । ಕುಂದಿಲ್ಲ
ದಲೆ ಎನಗೆ ನವ ವಿಧ ಭಕುತಿಯ ॥ 5 ॥

ರಾಗ – ಕಾಂಬೋಧಿ **ಪದ 26** ಝಂಪೆತಾಳ

ಈ ಪರಿಯ ಅಧಿಕಾರ ಒಲ್ಲೆ ನಾನು ॥ ಪ ॥

ಶ್ರೀಪತಿಯೆ ನೀನೊಲಿದು ಏನು ಕೊಟ್ಟುದೆ ಸಾಕು ॥ ಅ.ಪ. ॥

ಚಿರಕಾಲ ನಿನ್ನ ಕಾದು ತಿರುಗಿದುದಕೆ ನೀನು । ಕರುಣದಿಂದಲಿ
ರಚಿಸಿ ಈ ದುರ್ಗದಿ ॥ ಇರ ಪೇಳಿದುದಕೆ ನಾ ಹೊಕ್ಕು ನೋಡಿದೆ
ಒಳಗೆ । ಹುರುಡು ಲೇಶವು ಕಾಣೆ ಕರೆ ಕರೆಯ ಬಲವೆರಡು ॥ 1 ॥

ದಾರಿಯಲಿ ಹೋಗಿ ಬರುವದಕೆ ಉಪಟಳವು ಘನ್ನ । ಚೋರ
ರಟ್ಟುಳುಗಂತು ನೆಲೆಯ ಇಲ್ಲ ॥ ವೈರಿ ವರ್ಗದ ಜನರ
ಬಳಗ ಬಲು ತುಂಬಿಹುದು ।ಮೀರಿ ನಿನ್ನವರಲ್ಲಿ ಊರಿ ನಿಲ್ಲಲಿ ಗೊಡರು ॥ 2 ॥

ನಾಮಾಂಕಿತಕೆ ಮಾತ್ರ ಅಧಿಕಾರವೆನಗಿತ್ತೆ । ಸ್ವಾಮಿತ್ವವನು
ನೋಡೆ ಮನೆಮನೆಯಲಿ ॥ ಭೀಮ ವಿಕ್ರಮರವರು ದುರ್ಬಲಾಗ್ರಣಿ
ನಾನು ಗ್ರಾಮವೊಪ್ಪಿಸಿ ನಮಿಪೆ ಸರಿ ಬಂದ ತೆರಮಾಡೊ ॥ 3 ॥

ಸರಿ ಬಂದ ವ್ಯಾಪಾರ ತಾವೆ ಮಾಡಿ ಎನ್ನ । ಬರಿದೆ ಲೆಖ್ಖಕೆ ಮಾತ್ರ
ಗುರಿಯ ಮಾಡಿ ॥ ಕರೆ ಕರೆಯ ಪಡಿಸ ಬೇಕೆಂದು ಯೋಚಿಸು
ತಿಹರು । ಕರೆದು ವಿಚಾರಿಸಿ ನ್ಯಾಯ ಮಾಡಿಸೋ ಧೋರೆಯ ॥ 4 ॥

ಕಾಲಕ್ಕೆ ಸರಿಯ ಬಂದವರಿಗೆ ಒಳಗಾಗಿ । ಪಳತಿಯ ಲೊಪ್ಪಿಸಿ
ಕೊಡುವವೆಂದು ॥ ಆಲೋಚಿಸಿ ಇಹರು ಈಗಲೇ ನಿನ್ನ ನಿಜ ।
ಅಳುಗಳ ಬಲಮಾಡಿ ಎನ್ನ ರಕ್ಷಿಸೊಧೊರೆಯೆ ॥ 5 ॥

ಕ್ಷಣಕೆ ನೂರುಪಟಳಗಳ ಈ ಕೋಟಿಗೆಲೋ ರಾಯ । ಅನು
ವಾದ ದಿವಸ ವೊಂದಾದರಿಲ್ಲ ॥ ಎನಗಾರು ಬಲವಿಲ್ಲ ಇದ್ದವರು
ವಶವಿಲ್ಲ । ಕೊನೆಗೊಂಡು ಗ್ರಾಮ ಕಾಪಾಡುವ ಬಗೆಯೆಂತೊ ॥ 6 ॥

ಎನಗೆ ಬಹು ನಾಯಕರ ಈ ಕೊಂಪೆಯೊಳುವಾಸ । ವನು
ಬಿಡಿಸಿ ನಿನ್ನ ನಿಜ ಪಟ್ಟಣದೊಳು ॥ ಮನೆ ಮಾಡಿಕೊಡಲು ನಾ ನಿನ್ನ
ನೋಡಿಕೊಳುತ । ಅನುಗಾಲ ಬದುಕುವೆನೊ ಗೋಪಾಲವಿಠ್ಠಲ ॥ 7 ॥

ರಾಗ : ಕಾಂಬೋಧಿ **ಪದ 27** ಝಂಪೆತಾಳ

ಧ್ಯಾನವನು ಮಡು ಬಿಂಬ ಮೂರುತಿಯ ॥ ಪ ॥

ಆನಂದದಲಿ ಕುಳಿತು ಅಂತರಂಗದಲಿ ॥ ಅ.ಪ. ॥

ಸದಾಚಾರನಾಗಿ ದ್ವಾದಶ ಗುರುಗಳಿಗೆರಗಿ । ಮೊದಲಿಂದ ಮೂಲ
ಮಂತ್ರವನು ಜಪಿಸಿ । ಸದಮಲಾ ಭಕುತಿಯಲಿದೇಹಸ್ಥನ
ತಿಳಿದು । ಪದುಮಾಸನವ ಹಾಕಿ ಪರಮ ವಿಶ್ವಾಸದಲಿ ॥ 1 ॥

ಅಂಗವನು ಚಲಿಸದೆ ಚಂದಾಗಿ ದೃಡದಿಂದ । ಕಂಗಳನು
ಮುಚ್ಚಿ ಇಂದ್ರಿಯಂಗಳ ತೊರದು । ಮಂಗಳಾಶೋಭಿತದಿ ಅಖಂಡ
ಧ್ಯಾನವನು ಅಂತ । ರಂಗದಿ ನಿಲಿಸಿಯಲ್ಲವನು ಕಾಣೊ ॥ 2 ॥

ಭಗವದ್ರೂಪಗಳೆಲ್ಲ ಒಂದು ಸಾರಿ ಸ್ಮರಿಸಿ । ಮಗಳೆ
ಪರಮ ಗುರುವಿನ ಮೂರ್ತಿಯನು ॥ ತೆಗೆ ಆಹ್ವಾನವನೆ ಮಾಡಿ
ಅಲ್ಲಿಂದಲೆ । ಸ್ವಗುರು ಬಿಂಬ ಮೂರುತಿಯಲಿ ಚಿಂತನೆಯ ಮಾಡೊ ॥ 3 ॥

ತಿರಿಗಿ ಮೆಲ್ಲಗೆ ಮೂರು ವೇಗದಿಂದಲಿ ನಿನ್ನ । ವರಮೂರ್ತಿ
ಯಲಿ ಚಿಂತನೆಯ ಮಾಡೋ । ಭರದಿಂದ ಎಲ್ಲವನು
ತಂದು ಹೃದಯದಲ್ಲಿ । ಸ್ಥಿರವಾಗಿ ಇಷ್ಟ ಮೂರುತಿಯೊಡನೆ ಕೂಡಿಕೊ ॥ 4 ॥

ಆತನೆ ಬಿಂಬ ಮೂರುತಿಯೆಂದು ತಿಳಿದುಕೊ । ಆ ತರುವಾಯ
ನಾಡಿಗಳ ಗ್ರಹಿಸಿ । ಆತ್ಮೈಜಸನ ತಂದು ವಿಶ್ವಮೂರುತಿಯಲ್ಲಿ ।
ಪ್ರೀತಿ ಯುಳ್ಳವನಾಗಿ ಪ್ರೀತಿ ಕರಿಸು ಮರಳೆ ॥ 5 ॥

ಜ್ಞಾನ ಪ್ರಕಾಶದಲಿ ನಿನ್ನ ಹೃದಯ । ಸ್ಥಾನ ಚನ್ನಾಗಿ ಅಷ್ಟದಳ
ಕಮಲ ಮಧ್ಯ । ಶ್ರೀನಿವಾಸ ಮೂರ್ತಿ ನಿಲ್ಲಿಸಿ ಬಾಹ್ಯದಲಿ ।
ಏನೇನು ಪೂಜೆಗಳ ಅದನೆ ತಿಳಿದು ಮಾಡೊ ॥ 6 ॥

ಗುಣನಾಲ್ಕರಿಂದ ಉಪಾಸನೆಯನು ಮಾಡು । ಕ್ಷಣಕ್ಷಣಕೆ
ಹರಿರೂಪ ನೀ ನೋಡುತ ॥ ಅಣುರೇಣು ಚೇತನಕೆ ತಾನೆ
ನಿಯಾಮಕ । ಫಣಿಶಾಯಿಯಲ್ಲದೆ ಮತ್ತೊಬ್ಬರಿಲ್ಲವೆಂದು ॥ 7 ॥

ಮಮತೆಯನೆ ತೊರೆದು ಮೇಲೊಂದ ಪೇಕ್ಷಿಸದೆ । ಸಮ
ವಿಷಯ ತಿಳಿದು ಒಂದೆ ಭಕುತಿಯಲಿ ॥
ಸಮಾಧಿಗೊಳಗಾಗಿ ದಿವ್ಯದೃಷ್ಟಿಯಲಿ ।
ಕ್ರಮದಿಂದ ಭರಿತ ಭಾವವನು ಕಾಣೋ ॥ 8 ॥

ಈ ಪರಿಧೇನಿಸಲು ದೇವ ಕರುಣವ ಮಾಳ್ಪ । ಪಾಪ
ಸಂಚಿತವು ಆಗಿ ನಾಶ ॥ ಅಪರೋಕ್ಷಿತನಾಗಿ ನಿನ್ನ ಯೋಗ್ಯತೆ
ಯಿದ್ದಷ್ಟೆ । ಗೋಪಾಲವಿಠ್ಠಲ ನಲಿವನಾಗಾ ॥ 9 ॥

ರಾಗ : ಆನಂದಭೈರವಿ **ಪದ 28** ಅಟ್ಟತಾಳ

ಏನು ಸುಖವೊ ಎಂತಾ ಸುಖವೊ ॥ ಪ ॥

ಹರಿಯ ಧ್ಯಾನ ಮಾಡುವರ ಸಂಗ । ಏನು ಸುಖವೊ ॥ ಅ.ಪ. ॥

ತಂಬೂರಿ ಮೀಟುತ್ತ ಹೃದಯ । ಅಂಬುಕದಿಂದಾ ಆನಂದ ॥
ಅಂಬುಗರೆಯುತ ಬಲು । ಸಂಭ್ರಮದಿಂದ ಹೋರ ಸಂಗ ॥ 1 ॥

ಗೆಜ್ಜೆಯ ಕಾಲಲ್ಲಿ ಕಟ್ಟಿ । ಲಜ್ಜೆ ಬಿಟ್ಟು ಹರಿಯನಾಮ ॥
ಘರ್ಜನೆ ಮಾಡುತ್ತ ಅಘ । ವರ್ಜರಾಗಿಹರ ಸಂಗ ॥ 2 ॥

ಸ್ವರ್ಣ ಲೋಷ್ಟ ಸಮವೆಂದು । ತನ್ನ ದೆಂಬೊ ಹಮ್ಮು ತೊರೆದು
ಘನ್ನ ಮಹಿಮನ್ನ ಪಾಡಿ । ಧನ್ಯರಾಗಿಹರ ಸಂಗ ॥ 3 ॥

ಪುಷ್ಪದ ಸುಗಂಧಾ ಹ್ಯಾಂ । ಗಿಪ್ಪದೊ ತದ್ವತ್ತು ಜಗ । ದಪ್ಪ
ಬೊಮ್ಮಾದಿಗಳಲ್ಲಿ । ಇಪ್ಪ ನೆನ್ನುವರ ಸಂಗ ॥ 4 ॥

ದರ್ವಿಯಂತೆ ದೇಹವನ್ನು । ಸರ್ವದಾ ತಿಳಿದು ಶೇಷ ॥
ಪರ್ವತ ವಾಸನ್ನ ನಂಬಿ । ಊರ್ವಿಯೊಳಗೀ ಹರ ಸಂಗ ॥ 5 ॥

ನಡೆವೋದು ನುಡಿವೋದು ನೀರುತ । ಕೊಡುವೊದೊ ಕೊಂಬೊದು
ಜಗ ॥ ದೊಡೆಯನಾ ಪ್ರೇರಣೆಯೆಂದು । ನುಡಿದು ಹಿಗ್ಗುವರ ಸಂಗ ॥ 6 ॥

ಸೃಷ್ಟಿಗೋಡೆಯನ । ಮುಟ್ಟಿ ಭಜಿಸುತ್ತ ॥
ಜ್ಞಾನ ಕೊಟ್ಟು ಗೋಪಾಲವಿಠ್ಠಲ । ಗಿಷ್ಟರಾಗಿಹರಸಂಗ ॥ 7 ॥

ರಾಗ : ಮಧ್ಯಮಾವತಿ **ಪದ 29** ಆದಿತಾಳ

ರಥವನೇರಿದ ರಾಘವೇಂದ್ರ । ರಾಯಾ ಗುಣಸಾಂದ್ರ ॥ ಪ ॥

ಸತತ ಮಾರ್ಗದಿ ಸಂತತಸೇವಿಪರಿಗೆ ಅತಿಹಿತದಲಿ ಮನೋ
ರಥವ ನೀಡುವೆನೆಂದು ॥ ಅ.ಪ. ॥

ಚತುರ ದಿಕ್ಕುವಿದಿಕ್ಕುಗಳಲ್ಲಿ । ಅರಿಪ ಜನರಲ್ಲಿ । ಮಿತಿಇಲ್ಲದೆ ಬಂದು
ಓಲೈಸುತಲಿ । ವರವ ಬೇಡುತಲಿ । ನುತಿಸುತ ಪರಿಪರಿ । ನತರಾಗಿಹರಿಗೆ ।
ಗತಿ ಪೇಳದೆ ಸ । ರ್ವಥ ನಾ ಬಿಡೆನೆಂದು ॥ 1 ॥

ಅತುಳ ಮಹಿಮನೀ ಆ ದಿನದಲ್ಲಿ । ದಿತಿಜ ವಂಶದಲಿ ।
ಉತುಪತ್ತಿಯಾಗಿ ಉಚಿತದಲ್ಲಿ । ಉತ್ತಮ ಮತಿಯಲ್ಲಿ ।
ಅತಿಶಯ ವಿರುತಿರೆ । ಪಿತನ ಬಾಧೆಗೆ ಮ । ನ್ಮಥಪಿತ ನೊಲಿಸಿದ
ಜಿತ ಕರುಣದಲಿ ॥ 2 ॥

ಪ್ರಥಮ ಪ್ರಲ್ಹಾದ ವ್ಯಾಸಮುನಿಯೆ । ಯತಿ ರಾಘವೇಂದ್ರ
ಪ್ರತಿವಾದಿಕದಳಿವನಕರಿಯೆ । ಕರಮುಗಿವೆನು ಧೋರಿಯೆ
ಕ್ಷಿತಿಯೊಳು ಗೋಪಾಲ । ವಿಠ್ಠಲನ್ನ ಸ್ಮರಿಸುತಾ ಪ್ರತಿ ಮಂತ್ರಾಲಯದೊಳು
ಅತಿಮೆರೆವ ॥ 3 ॥

ರಾಗ : ಕೇದಾರಗೌಳ **ಪದ 30** ರೂಪಕತಾಳ

ಮುನಿಯ ನೋಡಿರೊ । ಮುಕುತಿ । ಧನವ ಬೇಡಿರೊ ॥ ಪ ॥

ಜನುಮರಹಿತರಾಗಿ ನಿಂದು । ಘನವರವೀವ ರಾಘವೇಂದ್ರ ॥ ಅ.ಪ. ॥

ಸಂತರ ಗೂಡಿ ಚಿಂತೆಯ ಬಿಡಿ । ಪಂಥವನಾಡಿ ನಾನೆಂತೆಂಬೋ
ದು ಬಿಡಿ । ಅಂತರಂಗದಲ್ಲಿ ಹರಿಯ ಚಿಂತಿಸಿ ಚಿತ್ತದಲ್ಲಿ ॥ 1 ॥

ಗೋಳಕತ್ರಯ ಇನ್ನು ಕೇಳು ನಿರ್ಣಯ । ಆಲೋಚನೆಯಲ್ಲಿ
ಶೀಲ ಮೂರ್ತಿಯ ಆಳನ ಸಹಿತ ಇಪ್ಪನಲ್ಲಿ ಬಹಳ ಫಲವ ನೀವುತಲಿ ॥ 2 ॥

ಮದಗಜವನು ಪೊರೆಯೆ ಒಂದು ರೂಪದಿ ಬಂದು । ಹರಿಯು ತಾ ನಿತ್ತೊಂದು
ರೂಪದಿ । ಸುಂದರ ಗೋಪಾಲವಿಠ್ಠಲ ತಂದು ಫಲವ ನೀವುತಿಪ್ಪ ॥ 3 ॥

ರಾಗ : ಸುವ್ವಿಮಟ್ಟ **ಪದ 31**

ಶರಣು ಹರಿಯ ಶರಣಗ್ರೇ । ಸರನೆ ಹನುಮ ಭೀಮ ಮಧ್ವ ।
ಗುರುವೆ ನಿಮ್ಮ ಚರಣಕಮಲಕೆರಗಿ ನಮಿಸುವೆ ॥ ಪ ॥

ಚಿನ್ನ ತಪುತಕಾಯ ನೊಸಲ । ಲಿನ್ನು ಊರ್ಧ್ವಪುಂಡ್ರ ತುಳಸಿ ।
ಘನ್ನ ವೈಷ್ಣವನ್ನೆ ಮುದ್ದು ಸನ್ಯಾಸಿಯೇ । ಚಿನ್ನದೋಂಟಿಚಾಕುಳೀ
ಮೋಹನ್ನ ಸರ ಕಿರೀಟಧಾರಿ । ಮನ್ನುಜರ ರೂಪತಾಳ್ದ ಭೀಮಸೇನನೆ ॥
ಕರ್ಣ ಕುಂಡಲವು ಕಚ್ಚುಟ । ಘನ್ನ ಮೌಂಜಿ ಧರಿಸಿ ಕಪಿ ।
ವರ್ಣ ರೂಪತಾಳ್ದ ಹರಿಯ ಭಜಕ ಹನುಮನೆ । ನಿನ್ನ ದರುಶನವು
ಎನಗೆ । ಇನ್ನು ಆದುದಕ್ಕೆ ಫಲವು । ಅನ್ಯ ವಿಷಯ ಬಿಡಿಸಿ
ಬೇಗ ಹರಿಯ ತೋರಿಸೊ ॥ 1 ॥

ಮಧ್ಯಗೇಹನ ತಪವು ಅಭಿ । ವೃದ್ಧಿಯಾದದ್ದು ಕಂಡು
ಉದ್ದು ಭವಿಸಿದಾನಂದ ತೀರ್ಥಮುನಿಯೆ । ಶುದ್ಧ ಮೂಲ ಕಲಿಯ
ಅಂಶ । ಬದ್ಧದ್ವೇಷಿ ದುರ್ಯೋಧನನ । ಒದ್ದು ಕಾಯ ಹದ್ದಿನಿಂದ
ಮರ್ದಿಸಿದವನೆ ॥ ಸುದ್ದಿಗೊಂಡು ಪೋಗಿ ಸೀತೆ । ಯಿದ್ದ
ಸ್ಥಳವ ನೋಡಿ ಅಸುರ । ರೊದ್ದು ರಾಮರಿದ್ದ ಎಡೆಗೆ ಬಂದು ನಿಂತನೆ ।
ಬಿದ್ದೆ ನಿಮ್ಮ ಪಾದಗಳಿಗೆ । ತಿದ್ದಿ ಎನ್ನ ಮತಿಯನಾದ್ಯ । ವಿದ್ಯೆ
ಗಂಟು ಬಿಡಿಸಿ ಎನ್ನ ಉದ್ಧರಿಪುದು ॥ 2 ॥

ಮೂರು ಅವತಾರದಲ್ಲಿ । ಮೂರು ಮೂರು ಭಕುತಿಯಿಂದ
ಮೂರು ಮೂರ್ತಿಗಳನು ಭಜಿಪ ಮೂಲಗುರುವೆ । ಸಾರುತಿಹವು
ಶ್ರುತಿಯು ನಿಮ್ಮ । ದಾರ ಗುಣಗಳನ್ನು ಬಿಡದೆ। ಆರತರನು
ಬಿಡದೆ ಪೊರೆವ ಸಮೀರ ಸದ್ಗುಣ ॥ ಭಾರತೀಶ ಭವ ವಿನಾಶ ।
ಸಾರ ಹೃದಯ ಸಾಧು । ಭಾರ ನಿನ್ನ ದಯ್ಯ ಎನ್ನಾಧಾರ ಪ್ರಾಣನೆ
ತೋರುವದು ನಿಮ್ಮ ಹೃದಯ । ದ್ವಾರ ಗೋಪಾಲವಿಠ್ಠಲ । ಮೂರುತಿ
ಯನು ಬಿಡದೆ ಎನ್ನ ಮನಕೆ ಒದಗಿಸಿ ॥ 3 ॥

ರಾಗ : ಸೌರಾಷ್ಟ್ರ **ಪದ 32** ಆದಿತಾಳ

ನಂಬಿ ನೀ ಕೆಡದಿರು ಇಹಲೋಕ ಸುಖವೆಂಬ । ಕಂಬಳಿಯೊಳ ಬುತ್ತಿ ॥ ಪ ॥

ನೀ ಬೆಲೆಯ ಊಟ ಪರಲೋಕ ಸುಖಸಾರ । ವೆಂಬೋದೆ
ನಿಜ ಭಕುತಿ । ಹೇ ಮನವೆ ॥ ಅ.ಪ. ॥

ನ್ಯಾಯವಿಲ್ಲದೆ ನಿನ್ನ ಕಾಯ ಪೋಷಣೆಯೆ ತೋಯದೊಳಗೆ
ಹೋಮ । ಆಯಾಸವನು ಬಿಟ್ಟು ಮನೆಯ ಕಟ್ಟಿಸುವದು ।
ಹೇಮ ಗೋರಳೆ ಧಾಮ ॥ ಮಾಯಕ್ಕೆ ಸಿಲುಕಿ ದಾಯಾದಿ ಗುಣಿಪದೆ
ವಾಯಸಗಳ ಪ್ರೇಮ । ನೋಯದು ಮನಸಿಗೆ ಹೇಯ ತಾ
ಪುಟ್ಟದು । ನ್ಯಾಯ ಬುದ್ಧಿಯ ಕಾಮ । ಹೇ ಮನವೆ ॥ 1 ॥

ದಣಿಸಿ ದಣಿಸಿ ದೇಹ ಧನವ ಕೂಡಿಸುವುದೆ । ನೋಣ ಜೇನಿನ
ವೃತ್ತಿ । ಬಣಗು ದೈವಂಗಳ ಭಕ್ತಿಲರ್ಚಿಸುವುದೆ । ಹೆಣಕೆ
ಮಾಡಿದ ಅರ್ಥಿ ॥ ವನಿತೆ ಸುತರು ಬಂದು ಜನ ಸ್ನೇಹವೆಂಬೋದು ।
ಪ್ರಣತಿಯೊಳಗಿನ ಜ್ಯೋತಿ । ಒಣಗ್ಹೋಗಲುಪ ಜೀವನವೆಂಬತ್ತೈಲವು
ಕ್ಷಣಕೆ ನಿಲ್ಲದು ಪ್ರೀತಿ । ಹೇ ಮನವೆ ॥ 2 ॥

ಹರಿಯರ್ಪಣರಿಯದೆ ಅವ ಕರ್ಮವ ಮಾಡೆ । ಹುರಿದು ಬಿತ್ತಿದ
ಬೀಜ । ಸಿರಿ ಮಧ್ವಮತವನ್ನು ಪೊಂದದ ವಿಪ್ರನು ।
ದುರುಳನು ನಿಜಾಂತ್ಯಜ ॥ ಪರಧನ ಪರಸತಿ ಪರನಿಂದೆಗಳು
ಕದ । ನರ ನೆರೆ ನರಕಭಾಜ । ಸಿರಿ ಹರಿಯನು ಮರೆದು
ದಿನಗಳೆದವ ನಾಯು । ಕರಗಿತು ನಿರ್ವ್ಯಾಜ । ಹೇಮನವೇ ॥ 3 ॥

ಪರರಿಗೆ ಪೀಡಕನಾಗಿ ಇದ್ದವನ ಜನ್ಮ । ವರುಷ ನೂರಿದ್ದರೇನು ।
ಪರರಿಗೆ ಹಿತನಾಗಿ ವರುಷ ಬಾಳಿದವನು । ಎರಗು ವೈಕುಂಠವನು ।
ದುರುಳ ಮತವ ಪಿಡಿದು ಶ್ಲಾಘ್ಯಮಾಡಿದವನು । ನಿರಯ ಬಿದ್ದವನು ।
ಅರಿತು ಮಾತಾಪಿತರ ಹಿರಿದರ್ಚಿಸಿದವನು ಕರೆಕರೆ ನೀಗುವೆನು
ಹೇ ಮನವೆ ॥ 4 ॥

ಆಸಿಸಿ ಅರ್ಥವ ಹರಿಯ ಸೇವಿಸುವಂಥ । ದಾಸ ಅಶ್ವದ ದಾಸ
ಆಶೆಯನೆ ಕೊಟ್ಟು ಭಾಷೆ ತಪ್ಪುವಂಥ ಈಶನಧಃಕೇಶ ॥ ದಾಸತ್ವ
ವಹಿಸದೆ ಕಾಶಿರಾಮೇಶ್ವರ । ದೇಶ ತಿರುಗಲಾಭಾಸ । ಹೇಸಿ ಸಂಸಾರದ
ಕ್ಲೇಶವೆಂಬೋದು ಕೃಷ್ಣೋ । ಪಾಸನದಿಂದ ನಾಶ । ಹೇ ಮನವೆ ॥ 5 ॥

ಹಲವುತತ್ವಂಗಳ ಹಲುಬಿ ಪೇಳದರೇನು । ಹೊಲಬ ಪಿಡಿಯದನಕ ।
ಛಲವ ಪಿಡಿದರೇನು ತಿಳಿವಳಿಕೆ ನಿಜವಿಲ್ಲ । ಒಲಿಮೆ ಯಾಗದನಕ ।
ಕೆಲಕಾಲ ಸುಜನರೊಳಾಡುತ್ತಿದ್ದರೇನು । ತಲೆಯ ಬಗ್ಗಿಸದನಕ । ಹಲವು
ಸಾಧನಕೆಲ್ಲ ಒಲವು ಶ್ರೀ ಹರಿಯು ಎಂದು ತಿಳಿಯೆ ಬಂಧ ಮೋಚಕ ।
ಹೇ ಮನವೆ ॥ 6 ॥

ಎಷ್ಟು ಸಾಧನಗಳು ಕೂತಿದ್ದರೇನಿನ್ನು । ದೃಷ್ಟಿಗೆ ಹರಿ ತೋರ । ನಷ್ಟ
ವಾಗುವಹಂಕಾರ ಒಂದಿದ್ದರೆ । ಶಿಷ್ಟಜನಕ ದೂರ ॥ ಇಟ್ಟು ತೊಟ್ಟು
ಬಹಳ ದಿಟ್ಟ ಸ್ತ್ರೀಯಳ । ಸ್ಪಷ್ಟ ಕುಷ್ಟಿಯ ಶೃಂಗಾರ ॥ ಎಷ್ಟು ಶೋಭಿತ
ಳಾಗೆ ಅವಳ ಪತಿಯು ಕ । ನಿಷ್ಟಳಾದವಳ ಸೇರ ಹೇಮನವೆ ॥ 7 ॥

ಗುಣತ್ರಯ ಕನುಸಾರ ಮಾಡಿದ ಕರ್ಮಗ । ಋಣಬೇಡ ನೀನೀಗೆ ।
ಗುಣಿಸಿ ಶ್ರೀಹರಿಯನ್ನು ನಖಶಿಖತನಕ ಹೃ । ದ್ವನಜ ದೊಳಗೆ ಹೊರಗೆ
ಮನುಜ ಜನ್ಮ ಮಹಾ ಸುಕೃತದ ಫಲ । ನಿನಗೆ ಬಂದಿದೆ ಈಗೆ ।
ಕ್ಷಣಿಕವ ನಿತ್ಯವಸಾರ ಕಳೇಬರ । ದಿನ ಪೋಗುತಿದೆ ಬೇಗೆ । ಹೇ ಮನವೆ॥ 8 ॥

ಗುರು ಉಪದೇಶವೆಂಬುದೆ ಮಹ ದುರ್ಲಭ । ಪರಮ ಮಂಗಳಕರವೋ ।
ಕರೆಕರೆ ಸಂಸಾರ ಶರಧಿಯ ದಾಟಲು । ಹರಿಗೋಲು ಸ್ಥಾನಿಯವೊ ॥
ದೊರಕೆ ಮರೆಯಬೇಡ ಗುರುವಿಜಯರಾಯರ । ಚರಣವಸಾರೆ
ಲವೊ । ಪರಮ ಮಂಗಳ ಮೂರ್ತಿ ಗೋಪಾಲವಿಠ್ಠಲ ದೊರೆವನು
ದೂರಿಲ್ಲವೋ । ಹೇ ಮನವೆ ॥ 9 ॥

ರಾಗ : ಭೈರವಿ

## ಪದ 33

ಅಟ್ಟತಾಳ

ಆಕಳ ಕಾಯಿದ ಗೋಕುಲವಾಸನು ॥ ಪ ॥

ವಿನುತ । ಲೋಕಪಾಲಕ ಸಾಕಾರ ಮೂರುತಿ । ಏಕ ಮೇವ
ದ್ವಿತೀಯ ಕೃಷ್ಣರಾಯ ॥ ಅ.ಪ. ॥

ಪುರದಲ್ಲಿದ್ದಂಥ ಕೇರಿಯ ಮಕ್ಕಳ । ನೆರಹಿ ಯಾದವ ಪರಿವಾರವೆಲ್ಲ ।
ತರುವ ಕಾಯಲು ಹೊರ ಹೊರಡೆಂದು । ಕರೆದು ಸೂಚಿಸಿ ಹರುಷದಿಂದ
ಕರುಣ ಕುಂಡಲ ಶಿರದಿ ಕಿರೀಟ । ಸಿರಿ ಮುಖಕೆ ಕಸ್ತೂರಿಯ ನಾಮವು ।
ಬೆರೆದು ಪೋಸರ ಕೊರಳೊಳೊಪ್ಪುವ । ಸರಸ ಪೀತಾಂಬರ ಧರ ॥ 1 ॥

ನಳಿನ ಕೇತಕಿ ಎಳೆಯ ಮಾವಿನ । ತಳಿರ ವನದ ಒಳಗೆ
ರಂಗನು । ಕಾಳಿಂದ ತೀರದಿ ಗೆಳೆಯರ ಕುಡಿ । ಮಳೆಯ ಮಿಂಚಿನಂತ್ಹೊಳೆಯುತ್ತ॥
ಕೊಳಲ ನೂದುತ್ತ ಕಿಲಿಕಿಲಿ ನಗುತ । ಗಿಳಿ ಚಕೋರವು ಅಳಿ ಮಯೂರಾ ।
ವಳಿ ಬಳಿಯಲ್ಲಿ ಸುಳಿಯಲು ಕೃಷ್ಣ । ನಲಿವಾನಂದ ಪೇಳಲಳವಲ್ಲ ॥ 2 ॥

ತೊಂಡರೊಡಗೂಡಿ ಪುಂಡರೀಕಾಕ್ಷ ಗೋ । ಹಿಂಡನು ಕಾಳಿಯದಂಡೆ
ತಲ್ಲಿರಿಸಿ । ಕೊಂಡು ಬಂದ ಬುತ್ತಿ ಹಿಂಡು ಮಕ್ಕಳಿಗೆ । ಉಂಡು
ಉಣಿಸುತ್ತ ಪುಂಡಾಟದಿ ॥ ಚಂಡು ಚಿಣ್ಣಿಕೋಲು ಕಂಡ ಕಂಡನು
ದ್ದಂಡ ಲೀಲೆಯನು ಕಂಡಿ ಖೇಚರದಿ । ಅಂಡಜ ಉಮೇಶ ಪುಂಡ
ರೀಕೊದ್ಭವ । ಮಂಡೆಯನು ಬಾಗಿ ಕೊಂಡಾಡಲು ॥ 3 ॥

ಕಡು ತೃಷ್ಣೆಯೊಳಾ ಮಡುವಿದನುಕ । ಕುಡಿದು ಗೋವ್ಗಳು ನಡುಗಿ
ಬೀಳಲು । ಆಡಲೋಡಿದ ಅಹುಡುಗರೆಲ್ಲ ಕೂ । ಗ್ಯಾಡುತಲೀ ಮೊರೆ
ಇಡಲಾಗಿ ॥ ಮೃಡವಿನುತ ತಾ ನುಡಿಯನಾಲಿಸಿ । ಕಡಹದ ಮರ
ನಡರಿ ಮೇಲೇರಿ । ನಡು ನೀರಿನೊಳು ಸಿಡಿದು ಬೀಳಲು
ಗಡಬಡಿಸಿತು ಪೊಡವಿಯೆಲ್ಲ ॥ 4 ॥

ಹೊಕ್ಕ ಭರದಿ ದೇವಕ್ಕಿಯ ಸುತನ ಸಿಕ್ಕಿಸಿಕೊಂಡು ಬಾಲಕ್ಕೆ ಬಿಗಿಯಲು
ಲೆಕ್ಕಿಸದೆ ಕಾಲಕ್ಕಿ ಫಣಗಳಲ್ಲಿ । ಫಕ್ಕನೆ ತುಳಿದನಕ್ಕರದಿ ॥
ಥಕ್ಕ ತತ್ಥೈಧಿಮಿಕ್ಕೆಂದು ಕುಣಿಯಲು । ಸೊಕ್ಕು ಉಡುಗಲು ಫಕ್ಕನೆ
ಕಳಿಂಗ । ದಿಕ್ಕು ಕಾಣದೆ ಪ್ರಾಣಕ್ಕೆ ಬಂದಿತೆಂದು । ಕಕ್ಕಸದಿಂದು
ಸುರಿಕ್ಕುತಿರೆ ॥ 5 ॥

ಇಂದಿರಾಪತಿ ಯಾನಂದದರಿಂಥಾಡಲು । ಬಂದ ಬೊಮ್ಮ ವಾಯು
ನಂದಿವಾಹನ ಮ । ರೆಂಧ್ರ ಸನಕ ಸನಂದನ ಸಕಲ । ವೃಂದಾಕರೆಲ್ಲ
ನಿಂದು ಭರ । ದಿಂದ ಪೂವರುಷ ಚಂದದಿಸುರಿಯಲು । ದುಂದುಭಿಗಳು
ತಮ್ಮಿಂದ ತಾವ್ಮೊರೆಯೆ । ಗಂಧರ್ವರು ಮನಬಂದಂತೆಪಾಡಲು
ಸುರನಾರೇರುವಂದಿಸಲು ॥ 6 ॥

ಉರಗ ಕನ್ಯೇರ ಮೊರೆಯಲಾಲಿಸಿ । ಕರುಣಿಯವರಿಗೆ ಗರುಡನ
ಭಯ । ಪರಿಹಾರಮಾಡಿ ಸರ್‍ರನೆ ನೀನಿದ್ದ ಪುರಕ್ಕೆ ಪೋಗೆಂದು ಭರ
ದಲ್ಲಿ ॥ ಹೊರಗೆ ನೆರೆದ ಪರಿವಾರವೆಲ್ಲ । ಕರೆಯಲವರ ಬೆರೆದು ಸರ್ವರ ।
ಭರದಿ ಪೊರೆದು ಮೆರೆದ ಲೋಕದಿ । ಕರುಣ ನಿಧಿಯು ಸಿರಿಧರ ॥ 7 ॥

ಗರಳ ಭಯದಿ ಧರೆಗೆ ಬಿದ್ದಂಥ ತುರುಗಳಿಗೆ ಸ್ಮರಣೆ ಬಪ್ಪಂತೆ
ಹರಿಯು ಕೊಳಲ ಸ್ವರ ಪೂರಣಮಾಡಿ । ಕರೆಯಲಾಗ ಲೆಚ್ಚರವಾಗೆ ।
ಕರುಣಾವಾರಧಿ ಕರಸ್ಪರ್ಶದಿ । ಪರಮುಲ್ಲಾಸ ಭರಿತರಾಗಿನ್ನು ।
ತರಳರೆಲ್ಲ ತತ್ತೋರಿಯನೂದುತ । ಪುರದ ದಾರಿಯ ತಿರುಗುತ ॥ 8 ॥

ಮಂಗಳ ಮೂರುತಿ ಪೊಂಗಳಲೂದುತ । ತಿಂಗಳಿನಂದದಿ ಕಂಗಳು
ಪೊಳೆಯೆ । ಅಂಗನೆರೆಲ್ಲರು ಶೃಂಗಾರವಾಗಿನ್ನು । ರಂಗನಾಲೆಯ
ರಿಟ್ಟ ರಂಗಣದಿ ॥ ಭಂಗಾರದಾಭರಣಂಗಳ ಧರಿಸಿ ಮುಂಗಟ್ಟಿ
ನಿಂತರು ಸಂಗೀತ ಪಾಡುತ್ತ । ತುಂಗ ವಿಕ್ರಮ ಗೋಪಾಲವಿಠ್ಠಲಗೆ ।
ಮಂಗಳಾರತಿ ಯೆತ್ತಿ ಶೃಂಗಾರದಿ ॥ 9 ॥

ರಾಗ : ನವರೋಜು **ಪದ 34** ಆದಿತಾಳ

ಶ್ರೀ ಮಹಾಲಕ್ಷ್ಮಮಾತೆ ತ್ರಿಭುವನ ಜನನಿ । ಶ್ರೀಮಂತ
ವಿಷ್ಣು ವಾಮಾಂಕ ಸದನಿ ॥ ಪ ॥
ತಾಮರಸಾಸನ ವ್ಯೋಮಾಳಕ ಸುರ । ಸ್ತೋಮ ವಿನುತೆ
ಹೇ ಸೋಮ ಸೋದರಿ ॥ ಅ.ಪ. ॥

ಗುಣತ್ರಯಾಥ್ಮಕ ಚೂಲಿಯನು ಅಲಂಕರಿಸಿ । ವನಜಭವಾಂಡ
ಪಾತ್ರೆಯನಲ್ಲಿರಿಸ । ಗಣನೆಯಿಲ್ಲದ ಜೀವ ಧಾನ್ಯ ತುಂಬಿರಿಸಿ ।
ಜನರ ಯೋಗ್ಯತೆ ಉದಕವನಲ್ಲಿ ಬೆರೆಸಿ ॥ ಮಿನುಗುವ ಕರ್ಮ
ಇಂಧನ ಕಾಲವೆ ಮಹಾ । ಅನಳ ಜನರ ಸಾಧನೆವೆಂಬ ದರ್ವಿಲಿ
ಇನಿತು ಪಾಕವ ಮಾಡಿ ಘನ ಮಹಿಮನ ಭೋ । ಜನಕನುಕೂಲ
ಮಾಡ್ದ ವನರುಹ ನಯನೆ ॥ 1 ॥

ನಿಲಯ ಶಯ್ಯ ತಾಂಬೂಲಾಯುಧ ಚೇಲ । ಜಲಜ ಮಂದಾರ ಚಂಪಕ
ಮಲ್ಲೆ ಬಹುಳ । ತುಲಸಿ ಕೇತಕಿ ದಿವ್ಯಗಂಧ ಪರಿಮಳ । ವಲಯ
ಕೀರಿಟ ಕುಂಡಲ ರತ್ನ ಮಾಲಾ ॥ ಹೊಳವ ಸುನವನವ ಕಳೇವರ
ಕೊಳುತಲಿ । ಹಲವು ವಿಧಾರ್ಚನೆಗಳಲಿ ಪತಿಯನು । ವಲಿಸಿ
ವಲ್ಲಭನ ತೋಳಲಿ ಬಿಗಿದಪ್ಪಿದ । ಬಲು ಸುಖ ಜಲನಿಧೆ
ಸಲಹೆ ನಮಿಸುವೆ ॥ 2 ॥

ಕಮಲೆ ಕುಟ್ಮಲ ರದನ ದಭಯ ಸುಪಾಣಿ । ವಿಮಲ ಸುಧಾಕರ ನಿಭ
ಶುಭವದನೆ । ಭ್ರಮರ ಕುಂತಳೆ ಹೇಮಾಂಬರ ಚಾರು ಶ್ರೋಣಿ ।
ಅಮಿತ ಸುಗುಣೆ ಶೋಭಿತ ಅಬ್ಜಸದನೆ । ತಮಹಾ ಗೋಪಾಲ
ವಿಠಲನರ್ಧಾಂಗಿಯೆ । ಸಮರೂಪ ಸಮಕಾಲ ಸಮದೇಶವ್ಯಾಪುತೆ ।
ರಮೆ ಅನುಪಮೆ ಸಮೆ ನಮಿಸುವೆ ಎನ್ನ ಭವ । ಶಮಲವಳಿದು
ಹೃತ್ಕಮಲದಿ ಹರಿ ತೋರೆ ॥ 3 ॥

ರಾಗ : ಕಾಪಿ

## ಪದ 35

ಅಟ್ಟತಾಳ

ಏಕೆ ಮಮತೆ ಕೊಟ್ಟು ದಣಿಸುವಿ ರಂಗ । ನೀ ಕರುಣದಿ
ಎನ್ನ ಪಾಲಿಸೋ ಕೃಷ್ಣ ॥ ಪ ॥

ನಿನ್ನ ಭಜಿಸಲು ಅನ್ಯ ವಿಷಯಂಗಳಿ । ಗೆನ್ನ ನೊಪ್ಪಿಸುವದು
ನೀತವೆ ॥ ಮನ್ನಿಸಿ ನೀನೆನ್ನ ದಯದಿ ಪಾಲಿಸದಿರೆ । ನಿನ್ನ
ನೇಮಕೆ ಪ್ರತಿಕೂಲವೆ । ರಂಗ ॥ ॥ 1 ॥

ಇಂದ್ರಿಯಂಗಳ ವಿಷಯದಿಂದ ಭೇಧಿಸೆ ಗೋ । ವಿಂದ ನಿನ್ನ
ಮನಕೆ ಬಾರದೆ । ಇಂದಿರೆಯರಸ ಬ್ರಹ್ಮಾದಿ ವಂದಿತ ನಿನ್ನ
ಬಂಧಕ ಶಕುತಿಗೆ ನಮೋನಮೋ । ರಂಗ ॥ ॥ 2 ॥

ಅರಿತು ಅರಿತು ಎನಗರೆ ಲವವಾದರು । ವಿರಕುತಿ ವಿಷಯದಿ
ಬಾರದು ॥ ಕರುಣಸಾಗರ ನಿನ್ನ ಸ್ಮರಣೆಯೊಂದಲ್ಲದೆ । ಮರುಳು
ನೀಗುವ ಬಗೆ ಕಾಣೆನೋ । ರಂಗ ॥ ॥ 3 ॥

ತನುವು ತನ್ನದು ಅಲ್ಲ ತನು ಸಂಮಂಧಿಗಳಾರೊ । ತನುವಾರೊ
ತಾನಾರೊ ಅವರಿಗೆ ॥ ಧನ ಮೊದಲಾದ ವಿಷಯಗಳ ಅನುಭವ
ಹಿಂ । ದಣ ಜನುಮದಂತಲ್ಲವೆ । ರಂಗ ॥ ॥ 4 ॥

ಎಂದಿಗೆ ಇನ್ನು ನಿನ್ನ ಚಿತ್ತಕ್ಕೆ ಬರುವದೊ । ಅಂದಿಗೆ ಉದ್ಧರಿಸೊ
ಕರುಣಿಯೆ । ಸುಂದರ ವಿಗ್ರಹ ಗೋಪಾಲವಿಠ್ಠಲ ಸುಖ । ಸಾಂದ್ರಭವ
ಮೋಚಕ ನಮೋ ನಮೋ । ರಂಗ ॥ ॥ 5 ॥

ರಾಗ : ಕಾಂಭೋಧಿ **ಪದ 36** ಝುಂಪೆತಾಳ

ಪೂಜೆಯನೆ ಮಾಡಿರೋ ಪಾಪ ಪುರುಷನಿಗೇ ॥ ಪ ॥

ಪೂಜಾ ವಿಧಿಗಳೆಲ್ಲ ಕಾಲಕಾಲದಿ ತಿಳಿದು ॥ ಅ.ಪ. ॥

ಕಾಯಮಲ ತೋಯದಾ ಸ್ನಾನವನ್ನು ಮಾಡಿಸಿ । ಬಾಯಿ ಮುಕ್ಕಳಿಸಿ
ದಾಚಮನ ಯೆನಿಸಿ ॥ ಹೇಯ ಮೈಲಿಗೆ ವಸನ ವಸ್ತ್ರಗಳನೆ ಕೊಟ್ಟು ।
ಕಾಯಕಳಚಿದ ರೋಮ ನಖಗಳ ಅಲಂಕರಿಸಿ ॥ 1 ॥

ನಯನ ನಾಸಿಕದ ಮಲಗಂಧ ಲೇಪನಮಾಡಿ । ಪ್ರಿಯವಾದಪಾನ
ವಾಯು ಧೂಪ ಮಾಡೀ । ಬೈವ ದುರುನುಡಿ ಯೆಂಬ ಪುಷ್ಪ
ಸಮರ್ಪಣೆ ಮಾಡಿ । ನೈವೇದ್ಯ ಸ್ಥಳಕೊಟ್ಟು । ಮಣೆಯಲ್ಲಿ ಕುಳ್ಳಿರಿಸಿ ॥ 2 ॥

ಗುಪಿತದಲಿ ಗುದಮಲ ಹಸ್ತೋದಕವ ಕೊಟ್ಟು । ತಪದಲ್ಲಿ ಮೂತ್ರ
ಪಾನೋದಕವೆ ಕೊಟ್ಟು ॥ ತೃಪ್ತ ನಾಗೋ ಎಂದು ತಪ್ಪದಲೆ ಸ್ಮರಿ
ಸುತ್ತ । ಕಪ್ಪುವರ್ಣನೆ ಚಲ್ವಗಡಿಗೆಯನಯನನೆ ಎಂದು ॥ 3 ॥

ಅಷ್ಟಮದ ದಾರಿದ್ರ್ಯ ಅಲ್ಪ ಬಲನೆ ಕ್ರೂರ । ದುಷ್ಟದುರಾಗ್ರಹ ಬ್ರಹ್ಮ
ಹತ್ಯಗಾರ ಶಿಷ್ಟ ಜನ ಮಲಹಾರ ನಷ್ಟ ಪ್ರತಿಷ್ಟನೆ ಎಂದು
ತುಷ್ಟಿ ಬಡಿಸುತ ಹೀಗೆ ಸ್ತೋತ್ರವನೆ ಮಾಡುತ್ತ ॥ 4 ॥

ನವವಿಧ ದ್ವೇಷಕ್ಕೆ ನೀನೆ ಅಧಿಕಾರಿಯು । ನವನಿಧೇಂದ್ರಿಯ
ದಿಂದ ಪೂಜೆಮಾಡು ॥ ಪವನಾಂತರ್ಯಾಮಿ ಶ್ರೀಗೋಪಾಲ
ವಿಠ್ಠಲನು । ಭವತರಿದು ತನ್ನನೂಭವವನ್ನು ನಿನಗೀವ ॥ 5 ॥

ರಾಗ – ಕಾಂಬೋಧಿ **ಪದ 37** ಝುಂಪೆತಾಳ

ಆವ ರೋಗವೊ ಎನಗೆ ದೇವ ಧನ್ವಂತ್ರಿ ॥ ಪ ॥

ಸಾವಧಾನದಿ ಎನ್ನ ಕೈ ಪಿಡಿಡದು ನೋಡಯ್ಯ ॥ ಅ.ಪ. ॥

ಹರಿ ಮೂರ್ತಿಗಳು ಕಾಣಿಸವು ಎನ್ನ ಕಂಗಳಿಗೆ । ಹರಿಯ
ಕೀರ್ತನೆಯು ಕೇಳಿಸದೆನ್ನ ಕಿವಿಗೆ ॥ ಹರಿಮಂತ್ರ ಸ್ತೋತ್ರ
ಬಾರದು ಎನ್ನ ನಾಲಿಗೆಗೆ । ಹರಿಪ್ರಸಾದವು ಎನಗೆ
ಸವಿಯಾಗ ದಯ್ಯಾ ॥ ॥ 1 ॥

ಹರಿಪಾದ ಸೇವೆಗೆನ್ನ ಹಸ್ತಗಳು ಚಲಿಸುವು । ಹರಿಗುರು
ಗಳಂಘ್ರಿಗೆ ಶಿರಬಾಗದು ॥ ಹರಿಯೆ ನಿರ್ಮಾಲ್ಯವಾ ಘ್ರಾಣಿಸದು
ನಾಸಿಕವು । ಹರಿಯಾತ್ರಿಗಳಿಗೆನ್ನ ಕಾಲೇಳವಯ್ಯಾ ॥ 2 ॥

ಅನಾಥ ಬಂಧು ಗೋಪಾಲವಿಠ್ಠಲರೇಯ । ಎನ್ನ ಭಾಗದ ವೈದ್ಯ
ನೀನೆ ಆದಿ । ಅನಾದಿ ಕಾಲದ ಭವರೋಗ ಕಳೆಯಯ್ಯ ।
ನಾನೆಂದಿಗೂ ಮರೆಯ ನೀ ಮಾಡಿದಪುಕಾರ ॥ 3 ॥

ರಾಗ : ಮೋಹನ **ಪದ 38** ಆದಿತಾಳ

ನಾಳೆ ಬರುವೆನೆಂದು ಪೇಳಿ ಮಧುರೆಗೆ ಪೋದ । ಬಹಳ ದಿನ
ವಾಯಿತಲ್ಲೇ ಉದ್ಧವಾ ॥ ಪ ॥

ಕೇಳಿದ್ಯಾ ನೀ ಬಾಹ ವೇಳೆಯಲಿ ಕೃಷ್ಣನ । ಆಲೋಚನೆಯೊ
ಳಿದ್ದೆವೋ ಉದ್ಧವಾ ॥ ಅ.ಪ. ॥

ಪಳ್ಳಿವಾಸಿಗಲ್ ನಾವು ಪರಿಪರಿಯಲಂಕರಿಸಿ । ಒಲಿಸೆಕೊಂಬುದೆ
ನರಿಯವೊ ಉದ್ಧವ । ಗೊಲ್ಲಸತಿಯರು ಸದಾ ಗೋರಕ್ಷಕರು ಮೈಯ ।
ಗೊಲ್ಲು ತೊಳೆಯಲು ಅರಿಯೆವೊ ಉದ್ಧವ ॥ ಬಲ್ಲಿದನ ಸಹವಾಸ
ಮಾಡ್ಯವನ ಮಹಿಮೆಗಳ । ಎಲ್ಲ ತಿಳುಹಿಸಿ
ಕೊಂಡೆವೊ ಉದ್ಧವ । ಚಲ್ವಗಂಗಳ ಚಪಳೆಯರು ಮಧುರೆ
ನಾರಿಯರ ಒಲುಪಿಗೆ ನಾವೆದುರೇನೋ ಉದ್ಧವ ॥ 1 ॥

ಚೊಕ್ಕನಾದ ನಿತ್ಯತೃಪ್ತನಿಗೆ ಬೆಣ್ಣೆ ಕಳ । ವಿಕ್ಕಿದೆವಲ್ಲವೋ
ಉದ್ಧವ । ಸಿಕ್ಕಿಸಿಕೊಂಡು ರಾಸಕ್ರೀಡೆಯಲಿ ಅವಗೆ । ಸೊಕ್ಕಿನುಕ್ತಿ
ನುಡಿದೆವೊ ಉದ್ಧವ । ಕಕ್ಕುಲಾತಿಲಿ ಕಾಮಾಸಕ್ತ ನಾಗ್ಯವನಮಗೆ ।
ದಕ್ಕಿದನು ಎಂತಿದ್ದೆವೂ ಉದ್ಧವ । ವಕ್ರಗತಿಯಾಗಿ ಅಕ್ರೂರ
ಬಂದು ನಮ್ಮ ಚಕ್ರಧರನಗಲಿಸಿದನೋ ಉದ್ಧವ ॥ 2 ॥

ಧೀರ ಸ್ವರಮಣ ದೋಷದೂರನ್ನ ಅಲ್ಪ ಬಹು । ಜಾರನೆಂದರಿದೆ
ವಲ್ಲೋ ಉದ್ಧವ । ಆರಾರ ಮನಕಿನ್ನು ತೋರದವನ ನಮ್ಮ ।
ಓರಗೆಯವ ನೆಂದರಿದೆವೋ ಉದ್ಧವ ॥ ಮೂರಾರಿ
ಅಜ ಪರಿವಾರ ದೊಡೆಯನ ನಾವು । ಪೋರನೆಂದಾಡಿದೆವೋ
ಉದ್ಧವ । ನಾರಿಯರು ನಾವಲ್ಪದಾರಿದ್ರ ಧಿಟ್ಟರಿಗೆ । ಶ್ರೀರಮಣ
ನೆಂತೊದಗುವನೋ ಉದ್ಧವ ॥ 3 ॥

ನಿಧಿಯ ಬದಿಲಿದ್ದರೂ ವಿಧಿಸುವದನರಿಯದೆ । ಮದಡೆಯವ
ರಾದೆವಲ್ಲೋ ಉದ್ಧವ ॥ ಮದನನಾಟಕೆ ಮನವಿಕ್ಕಿ ಅವನಿಂದೊಂದು ।
ವಿಧ ತತ್ವ ತಿಳಿಯ ಲಿಲ್ಲೋ ಉದ್ಧವ । ಚದುರೆಯರು
ನಮ್ಮ ಬಿಟ್ಟು ಕದಲನಿವ ವೆಂದೆಂಬೊ । ಮದದಿ ಮೋಸ ಹೋ
ದೆವೋ ಉದ್ಧವ । ಮಧುರೆಯಿಂದೆಮ್ಮ ತಮ್ಮ ಹೃದಯ ದೊ
ಳಿಪ್ಪೆನೆಂದು । ಚದುರ ಪೇಳಿಹನಂತೆಲೋ ಉದ್ಧವ ॥ 4 ॥

ಮತಿ ತಪಿದೆವೊ ನಾವು ಸತಿಯರೆಲ್ಲೊಂದಾಗಿ । ರಥವ
ನಿಲಿಸದೆ ಹೋದೆವೋ ಉದ್ಧವ । ಹಿತರಾರು ನಮಗೆ ಸಾರಥಿ
ನೀನು ದೊರೆತಿರೆ । ಯತನ ಮಾಡುತಲಿದ್ದೆವೊ ಉದ್ಧವ ॥
ಪಥವ ತೋರಿಸೊ ನಮಗೆ ಮುಂದೆಮ್ಮ ಚಲ್ವ ಶ್ರೀ । ಪತಿಯು
ಬಂದೊದಗುವಂತೆ ಉದ್ಧವ । ಗತಿಯಾರೊ ಅವನ್ಹೊರತು
ಗೋಪಾಲವಿಠ್ಠಲಾ । ಚ್ಯುತನ ಮಹಿಮೆ ಕಾಣೆವೋ ಉದ್ಧವ ॥ 5 ॥

ರಾಗ : ತೋಡಿ **ಪದ 39** ಅಟ್ಟತಾಳ

ಪೋಗಳಲೆನ್ನಳವೆ ರನ್ನ ಗುರುಗಳರನ್ನ ॥ ಪ ॥

ಪೊಗಳಲೆನ್ನಳವೆ ನಿನ್ನಗಣಿತ ಮಹಿಮೆಯ । ಖಗ
ವಾಹನ ದೂತ ತ್ರಿಜಗದೊಳ್ಪ್ರಖ್ಯಾತ ॥ ಅ.ಪ. ॥

ವಸುಧೆಯ ಮೇಲೇಸೋ ಅಸುರರು ಪುಟ್ಟತ್ರಿ । ದಶರನ್ನು
ಬಾಧಿಸೆ ಕುಸುಮ ಸಂಭವಗೆ ವಂ । ದಿಸಿ ಮೊರೆಯಿಡಲಾಗ
ಭಿಸಜನಾಭನು ಇದ್ದ । ದೆಸೆಗೆ ಪೋಗಿ ತಮ್ಮ ಕುಶಲಗಳನ್ನು
ಪೇಳೆ ನಸುನಕ್ಕು ಬೇಗನೆ ದಶರಥನಲ್ಲಿ ಉ । ದಿಸಲವನ
ಸೇವೆ ಯುದ್ದಿಸಕಾಗಿ ಅಂಜನೆ । ಬಸುರಲ್ಲಿ ಸಂಜನಿಸಿ ।

ಆಕ್ಷಣ ತಾಮ । ರಸ ಸಖನಿಗೆ ಲಂಘಿಸಿ । ಇಂದ್ರನ
ಚಾಪ । ಕೊಸರಿ ನಿರಾಕರಿಸಿ । ಅಸುರರ ಜೀವ । ದುಸುರನು
ಸೆಳೆದಂಥ ಅಸಮ ಪರಾಕ್ರಮಿ ॥ 1 ॥

ಕಂಜ ಮಿತ್ರನ ಸುತನೊಡನೆ ಸಖ್ಯವ ಮಾಡಿ । ಕಂಜ
ನಾಭನ ಪಾದಕ್ಕೆರಗಿ ಮುದ್ರಿಕೆಗೊಂಡು । ಮಂಜಿನುದಕ ಬಿಂದು
ವಂತೆ ವನಧಿ ದಾಟಿ । ಸಂಜೆಯ ಚರನ ಪುರವ ಪೊಕ್ಕು ವನದೊಳು ।
ಕುಂಜರಗಮನೆಗೆ ಕುರುಹು ಕೊಟ್ಟಸುರರ
ಭಂಜಿಸಿ ಅಕ್ಷ ಕುವರನ ಸಂಹಾರ ಮಾಡಿ । ಕಂಜಸಂಭವನಸ್ತ್ರಕೆಸಿಲುಕಿ
ಅಸುರಗೆ । ಅಂಜದುತ್ತರ ನಡೆಸಿ । ದನುಜಬಲ । ಪುಂಜಗಳನೆ
ಒರಿಸಿ । ಬಾಲದಲಿದ್ದ । ಪಂಜಿಲಿ ಪುರ ದಹಿಸಿ । ಮರಳಿ ಬೇಗ ।
ಕಂಜಜಾಂಡದ ಧೊರೆಗೆರಗಿದ ಮಹಧೀರ ॥ 2 ॥

ವಾನರ ನಿಕರವ ನೆರಹ ಸೇತುವೆಕಟ್ಟಿ । ಶ್ರೀನಾಥನಿಗೆ ವಾಹನ
ನಾಗಿ ದನುಜರೋಳ್ । ನಾನಾ ಯೂಥಪರನು ಕೊಂದು ಗಿರಿಯ
ತಂದು । ದಾನವೆಂದ್ರನ ರಾಮ ಮುರಿಯಲಾಕ್ಷಣ ವೇಗ
ಜಾನಕಿ ಕೃತಿತಂದು ಹರಿಗೆ ಅರ್ಪಣೆ ಮಾಡಿ । ದೀನ ವಿಭೀಷಣಗೆ
ಪಟ್ಟವನು ಕಟ್ಟಿ ಆ ನಾರದರು ಹರಿಯಾಜ್ಞೆಯಲಿ ಬಂದು ।
ಹೀನ ದಶಾಶ್ಯನ ಗೆಲಿದ ಜಯವಂತನು । ನೀನೆವೆ ಎಂತೆಂದೆನೆ
ನಿನಗೆ ಇನ್ನು । ಏನು ಬೇಕೋ ಬೇಡೆನ್ನೆ । ನಿನ್ನ ಪಾದ । ಧ್ಯಾನ
ನಿರತ ನೀಡೆನ್ನೆ । ಬಳಿರೆ ಶ । ತಾನಂದ ಪದವಿಯ ಕೊಂಡ
ಬಲುಧೀರ ॥ 3 ॥

ಕೃಷ್ಣನ ಸೇವೆಗೋಸುಗ ಕುಂತಿಜನಾಗಿ । ಹುಟ್ಟಿದಾಕ್ಷಣ ಬೆಟ್ಟ
ಕುಟ್ಟಿ ಹಿಟ್ಟನೆ ಮಾಡಿ । ಕೊಟ್ಟ ವಿಷವನುಂಡು ಅಹಿಗಳನೊರೆಗಿ
ಕೈ । ಕಟ್ಟಿ ಜಲದೊಳಿಡೆ ಬಂದು ಲಾಕ್ಷಾಗ್ರಹ । ಸುಟ್ಟುಭಸ್ಮ
ಮಾಡಿ ಹಿಡಿಂಬನನು ಕೊಂದು । ಧಿಟ್ಟ ಘಟೋತ್ಕಚನ ಪಡೆದು
ದನುಜೆಯಲ್ಲಿ । ಶಿಷ್ಟದ್ವಿಜನಿಗೋಲಿದು ಬಕನ ಸಂಹರಮಾಡಿ ।
ಕೃಷ್ಣೆ ಸ್ವಯಂವರದಿ ಜಿಷ್ಣುವಿಂದಲಿ ಲಕ್ಷ್ಯ । ಕುಟ್ಟಿ ಕನ್ನಿಕೆ
ವರಿಸಿ । ಅಲ್ಲಿಗೆ ಬಂದ । ದುಷ್ಟರ ಸಂಹರಿಸಿ । ಶಲ್ಯನ
ವ್ಯೋಮ । ಕಿಟ್ಟು ನೆಲದಲ್ಲಿರಿಸಿ ಇಂದ್ರ ಪ್ರಸ್ಥ । ಪಟ್ಟವ
ನಾಳಿದ ಶೂರ ಸಮೀರ ॥ 4 ॥

ವೀರ ರಾಯರನೆಲ್ಲ ಸೆರೆಯ ನಾಳುವಂಥ । ಕ್ರೂರ ಜರೆಯ ಸುತನೊಡನೆ ಯುದ್ಧವ ಮಾಡಿ । ಬೇರಿ ಬೊಬ್ಬಿಡುತಲಿ ಅವನ ಸೀಳಿದ ಶಬ್ದ ವಾರಿಜ ಜಾಂಡವವಡೆದುದ ಕಿಮ್ಮಡಿಯಾಗೆ । ಮೂರೇಳು ದಿಕ್ಕು ಜಯಿಸಿ ರಾಜ ಸೂಯ ಯಾಗ । ಪೂರೈಸಿ ಕೃಷ್ಣಗೆ ಅಗ್ರಪೂಜೆಯ ಮಾಡಿ । ಅರಣ್ಯದಲಿ ಪೋಗಿ ಮಣಿಮಂತ ಕಿಮ್ಮರ । ಕ್ರೂರ ಜಟಾಸುರಾದಿ ದೈತ್ಯರ ಕೊಂದು ವಿರಾಟ ನಗರದಿ ತರಿದು ಕೀಚಕರನು । ಧೀರ ಗೋವ್ಗಳ ಬಿಡಿಸಿ । ಅಕ್ಷೋಹಿಣಿ ಮುರಾರುಗಳ ಬೆರಸಿ । ಪಾರ್ಥನ ಧ್ವಜ । ಕ್ಕೇರಿ ಶಬ್ದವ ಘೋಷಿಸಿ। ಕೌರವ ಬಲ । ಅಕ್ಷೋಹಿಣಿ ಸಂಹಾರ ಮಾ ಡಿದ ಧೀರ ॥ 5 ॥

ನಡುರಣದಲಿ ಬಂದು ಘಡ ಘಡಿಸುತ ನಿಂದು ಜಡ ಜಂಗಮರೆಲ್ಲ
ನಡುಗೆ ದುಶ್ಯಾಸನ । ನ್ಹಿಡಿದು ಕೆಡೆಹಿ ಬಡಿದೊಡಲು ಬಗೆದು
ರಕ್ತ । ಕುಡಿದಂತೆ ತೋರಿಸಿ ಮಡದಿಗೆ ಕರುಳುನು । ಮುಡಿಸಿ
ಸುಯೋಧನನ ನೊಡನೆ ಗದಾಯುದ್ಧ । ಬಿಡದೆ ಜಡಿದು ಮಾಡಿ
ಒಡೆಯನಾಜ್ಞದಿ ತೊಡೆ । ಕಡಿದು ಪೊಡವಿ ಮೇಲೆ ಕೆಡಹಿ
ಅಗ್ರಜಾನುಜ ರೊಡನೆ ಸಾಮ್ರಾಜ್ಯವ ಸಡಗರದಿಂ ಮಾಡಿ ।
ಹಿಡಿದು ಕಲಿಯ ಭಂಜಿಸಿ । ಅಧರ್ಮವ । ಕೆಡಸಿ ಅಸಮ
ನೆನಿಸಿ । ಸನ್ಮಾರ್ಗವ । ಧೃಡಭಕ್ತರಿಗೆ ತೋರಿಸಿ । ಲೋಕದಿ
ಖ್ಯಾತಿ । ಪಡೆದು ಮೆರೆದೆ ಶರ್ವನೊಡೆಯ ಭಾರತಿಪ್ರಿಯ ॥ 6 ॥

ಮಾಯಿಗಳು ಹೆಚ್ಚೆ ಮಹಿಎಲ್ಲ ವ್ಯಾಪಿಸೆ । ಆ ಯಜ್ಞ
ಭುಜರು ಮತಿಗೆಟ್ಟೆ ಬಳಲುತ್ತ । ತೋಯಜ ಭವಗೆ ವಂದಿಸಿ
ಪೇಳಲಾತನು । ಶ್ರೀಯರಸಗೆ ಪೇಳೆ ಹರಿ ನಿನ್ನ ಮೊಗನೋಡೆ
ಆಯತವರಿತು ನೀನವನಿಯೊಳಗೆ ಮಧ್ವ । ಗೇಹ ಭಟ್ಟರಲ್ಲಿ
ಜನಿಸಿ ಅಚ್ಚುತಪ್ರೇಕ್ಷಾಚಾರ್ಯ ರಿಂದುಪದೇಶಗೊಂಡು ಗ್ರಂಥವನೋಡಿ ।
ನ್ಯಾಯ ಶಾಸ್ತ್ರವ ಮಾಡಿ ಸುರರಿಗೆ ಅದರರ್ಥ । ಪೀಯೂಷ
ವನೆ ಉಣಿಸಿ । ಮೋಹಕಶಾಸ್ತ್ರ । ಹೇಯವೆಂದು ತೋರಿಸಿ ।
ಅಜ್ಞಾನದ । ಮಾಯಾ ನಿರಾಕರಿಸಿ । ಸರ್ವರಿಗೆಲ್ಲ । ಪ್ರಿಯ
ಮಾರ್ಗವ ತೋರಿ ಯೆರೆದ ಮಾತರಿಶ್ವ ॥ 7 ॥

ದಶ ಉಪನಿಷತುಗಳಿಗೆ ಟೀಕವ ಮಾಡಿ । ಪೊಸ ಗೀತಾ
ಭಾಷ್ಯ ಋಗ್ಭಾಷ್ಯಾಣು ವೇದಾಂತ । ಅಸಮ ತಾತ್ಪರ್ಯ
ನಿರ್ಣಯ ದ್ವಾದಶಸ್ತೋತ್ರ । ಕುಶಲದಿ ಯಮಕ ಭಾರತ

ಗ್ರಂಥವಮಾಡಿ । ಕುಸುಮನಾಭತೀರ್ಥ ನರಹರಿತೀರ್ಥರು ।
ಎಸೆವ ಮಾಧವ ತೀರ್ಥ ಅಕ್ಷೋಭ್ಯತೀರ್ಥರಿ ।
ಗುಸುರಿ ಸರ್ವಾರ್ಥ ಸಾರವತೋರಿ ಗ್ರಂಥವ । ವಸುಧೆಯ
ಮೇಲಿರಿಸಿ । ರಂಜಿಸುತಲಿ । ಬದರಿಗೆ ನೀಗಮಿಸಿ । ವ್ಯಾಸ
ಮುನಿ । ಬಿಸಜ ಪಾದಕೆ ನಮಿಸಿ । ಮರಳಿಬಂದು ।
ದಶದಿಶೆಗಳ ಗೆದ್ದ ದಶಪ್ರಮತಿ ರಾಯ ॥ 8 ॥

ವಾಳುಕ ಮುಷ್ಟಿ ಅಷ್ಟವು ದಿಗ್ವಿಜಯರಾಮ । ಲೋಲವಿಠ್ಠಲ
ನರಹರಿ ಮುನಿತಂದಂಥ । ಮೂಲ ಸೀತಾರಾಮ ಹಯಗ್ರೀವ
ಮೂರುತಿ । ಸಾಲಿಗ್ರಾಮ ಶಂಖ ಮೊದಲಾದ ಪದಾರ್ಥ ।
ಭೂಲೋಕದೊಳು ನಿಮ್ಮ ಪೀಳಿಗೆಯಲಿ ನಿಲಿಸಿ । ಶೀಲ
ತ್ರಿವಿಕ್ರಮ ಪಂಡಿತಾಚಾರ್ಯರ । ಬಾಲನಾರಾಯಣ ಪಂಡಿತಾ
ಚಾರ್ಯರಿಗೆ । ಶೀಲ ಜ್ಞಾನವ ಬೋಧಿಸಿ । ಸ್ತೋತ್ರಕೈಕೊಂಡು ।
ಖೂಳ ಮಾಯ್ಗಳ ಭಂಜಿಸಿ । ಅವರಮತ । ಗಾಳಿಮಾಡಿ ಓಡಿಸಿ ।
ಸಿದ್ಧಾಂತವ ಮೇಲೆ ಮೇಲೆಂದೆನಿಸಿ । ಬದರಿಯಲ್ಲಿ । ಮೂಲೋ
ಕಾಧಿಪ ವ್ಯಾಸಮುನಿಯ ಸೇವಿಪ ಧೀರ ॥ 9 ॥

ಮೂರ್ಹತ್ತು ಎರಡು ಲಕ್ಷಣವುಳ್ಳ ಸುಕಾಯ । ಮೂರವತಾರ
ಮುಖ್ಯಪ್ರಾಣರಾಯ । ಮೂರೆರಡು ರೂಪ ಮುನಿಕುಲಪ್ರದೀಪ ।
ಮೂರುಕೋಟಿರೂಪ ಮೂರೆರಡರಿ ಲೋಪ । ಮೂರೆಂಟು
ತತ್ವೇಶರಿಗೆ ನಿಯಾಮಕ । ಮೂರೇಳು ಸಾವಿರ
ಮೂರೆರಡು ನೂರ್ಮಂತ್ರ । ಮೂರೊಂದವಸ್ಥೇಲಿ ಜೀವರಿಂ
ಮಾಡಿಪ । ಮೂರೊಂದು ಶರೀರವ್ಯಾಪ್ತ । ನಾರಾಯಣ ।
ಮೂರುತಿದೂತ ಆಪ್ತ । ಮಧ್ವರಾಯ । ಮೂರುಲೋಕವ
ಪೊತ್ತ ಮುಕುತಿ ಪ್ರದಾತ ॥ 10 ॥

ಆನಂದ ತೀರ್ಥ ನಿಜಾನಂದ ಚರಿತ ಪಂ । ಚಾನನ ಅಹಿ
ಖಗಾದ್ಯರಿಗೆಲ್ಲ ನೀ ಮುಖ್ಯ । ಪ್ರಾಣನೆ ಅಹಿಪರ್ವತವ
ನುಂಗುಂಟದಿ ಮೀಟಿ । ಶ್ರೀನಾಥನು ನಿನ್ನ ಬಲವೆಷ್ಟು ಪೇಳೆನೆ ।
ಈ ನಳಿನ ಜಾಂಡವ ಒಡೆದು ತಾಳವ ಮಾಡಿ । ಅನಾಯಾಸ
ದಲಿ ಘೋಷಿಸುವೆನೆಂದುಸುರಿದೆ । ದಾನವ ಸಮುದಾಯ

ತಿಮಿರ ಮಾರ್ತಾಂಡನೆ । ಜ್ಞಾನ ಮಯಾನಂದ ಗೋಪಾಲ
ವಿಠ್ಠಲನ । ಧ್ಯಾನಲೋಲತಿಬಲ । ಭಕ್ತರ ದೋಷ । ಕಾನನ
ದಾವಾನಳಾ ಸ್ವರೂಪದ । ಆನಂದ ಕೊಡುವ ಶೀಲ
ಸಮನಸರ । ಮಾನಸ ಚಕೋರ ಸೋಮ ಸದ್ಗುಣಧಾಮ ॥ 11 ॥

ರಾಗ : ಮುಖಾರಿ **ಪದ 40** ತ್ರಿಪುಟತಾಳ

ಬಂದೆ ಬಂದೆ ಸ್ವಾಮೀ । ಬಂದೆ ಬಂದೆ ॥ ಪ ॥

ಬಂದೆ ಬಂದೆ ಗೋವಿಂದ ಗೋವಳ । ಬಾಂಧವ ಭಕ್ತವತ್ಸಲ
ಇಂದಿರೇಶ ಶ್ರೀ ವೆಂಕಟ ನಿನ್ನ । ಸಂದರುಶನಕೆ ಸಾಗಿ ನಾ ನಿಲ್ಲಿ ॥ ಅ.ಪ. ॥

ನಡೆದು ನಡೆಸುತ ನುಡಿದು ನುಡಿಸುತ ಅಡಿಗಡಿಗೆ ಕಾಪಾಡುತ
ಒಡನೆ ಆಡುತ ಬಿಡದೆ ಕ್ಷಣವನು । ಸಡಗರದಿ ಕರೆತರಲು ನಾನಿಲ್ಲಿ ॥ 1 ॥

ಆಪ್ತ ಅನಿಮಿತ್ತ ವ್ಯಾಪ್ತ ಸರ್ವತ್ರ । ಗುಪ್ತ ಗುಣಗಣ ಪೂರ್ಣನೆ ಪ್ರಾಪ್ತ
ನೀನೆನಗಾಗ ಬೇಕೆಂದು । ವ್ಯಾಪ್ತಿ ನಿನ್ನದು ಹುಡುಕುತಲಿ ನಾ ॥ 2 ॥

ಒಂದು ರೂಪದಿ ನಿಂದು ಎನ್ನಲ್ಲಿ । ಚೆಂದದಿಂ ಕರೆ ತಂದೆ ಇಲ್ಲಿ ॥ ಒಂದರಿಯೆ
ನಿನ್ನ ವಂದಿಸುವ ಬಗೆ । ಬಂದೊದಗೊ ನೀನೆನ್ನ ವದನಕೆ ॥ 3 ॥

ಬಂದೆ ಬಂದೆ ನೀ ಬಂದಂತೆ ಕರೆ । ತಂದುದಕೆ ಫಲ ನೀನೆ ಬಲ್ಲೆ
ಸಂದರುಶನ ನಿನಗೆ ನೀ ಮಾ । ಳ್ಪಂದವನು ನೋಳ್ಪಾತುರದಿ ನಾ ॥ 4 ॥

ಏನು ಕೊಡಲಿಲ್ಲ ಏನು ಬೇಡಲಿಲ್ಲ । ಏನು ಪಡೆಯಲೊ ಕರುಣಿಯೆ
ನೀನು ಕೊಟ್ಟ ಸ್ವತಂತ್ರದ ಫಲ । ನಿನಗೆ ಅರ್ಪಿಸಬೆಕೆನುತ ಇಲ್ಲಿ ॥ 5 ॥

ರಕ್ಷ ಶಿಕ್ಷಕ ಮೋಕ್ಷದಾಯಕ । ಸೂಕ್ಷ್ಮ ಘನ ಮಹ ವ್ಯಾಪಕ । ಕುಕ್ಷಿ
ಯೊಳು ಜಗಭರಿತ ಪೂರಿತ । ಅಕ್ಷಯ ಫಲದಾಯಕ ॥ 6 ॥

ನಮೊ ನಮೋ ನಾಗಾರಿವಾಹನ । ನಮೊ ನಮೊ ಸುರ ಸುಪ್ರಸನ್ನನೆ
ನಮೊ ನಮೋ ಗೋಪಾಲವಿಠ್ಠಲ । ನಮಿಪ ಭಕ್ತರ ಸಲಹುವನೆಂದು ॥ 7 ॥

ರಾಗ : ಮೋಹನ **ಪದ 41** ಆದಿತಾಳ

ಬಾರಯ್ಯ ಬಾಬಾ ಭಕುತರ ಪ್ರೀಯ । ಶ್ರೀನಿವಾಸರಾಯ ॥ ಮಾರ
ಜನಕ ಮುಕುತ ರೊಡೆಯ । ದೇವಯ್ಯ ಜೀಯ ॥ ಪ ॥

ವಾರಿಜಾಲಯಪತೆ ವಾರಿಜ ನಾಭನೆ । ವಾರಿಜಭವ ಪಿತ ವಾರಿಜ
ನೇತ್ರನೆ । ವಾರಿಜ ಮಿತ್ರ ಅಪಾರ ಪ್ರಭಾವನೆ । ವಾರಿಜ ಜಾಂಡ
ಕಾರಣ ಧೊರೆಯೆ ॥ ಅ.ಪ. ॥

ಸ್ಯಂದನ ವೇರಿ ಬಪ್ಪ ರಂಗ । ದೇವೋತ್ತುಂಗ । ನಂದನಂದನ ಅರಿಮದ
ಭಂಗ । ಕಾರುಣ್ಯಾಪಾಂಗ । ಸಿಂಧುಶಯನ ಸುಂದರಾಂಗ । ಹೇನಾರಸಿಂಗ
ಕಂದ ವಿರಿಂಚಿಯು ನಂದಿವಾಹನ ಅಮ । ರೇಂದ್ರ ಸನಕಸನಂದನಾದಿ
ಮುನಿ । ವೃಂದ ಬಂದು ನಿಂದು ಧಿಂಧಿಂ ಧಿಮಿಕೆಂದು । ನಿಂದಾಡಲು
ಆನಂದದಿ ಮನಕೆ ॥ 1 ॥

ಜಗಜ್ಜನ್ಮಾದಿ ಕರ್ತ ಗೋವಿಂದ । ಉದರದಿ ಲೋಕ । ಲಘುವಾಗಿ
ಧರಿಸಿದ ಮುಕುಂದ । ಭಕ್ತರ ಮನಕೆ । ಝುಗಝುಗಿಸುತ
ಪೊಳೆವಾನಂದ । ನಿಗಮಾವಳಿಯಿಂದ ॥ ಅಗಣಿತ ಮುನಿಗಣ ನಗ
ಖಗ ಮೃಗ ಶಶಿ । ಗಗನ ಮಣ್ಯಾದ್ಯರು ಸೊಗಸಾಗಿ ಬಗೆ ಬಗೆ
ಪೊಗಳುತಲಿ ಬೇಗ ಚಿಗಿಚಿಗಿದಾಡಲು ಮುಗುಳು ನಗೆಯ
ಮಹೋರಗ ಗಿರಿವಾಸ ॥ 2 ॥

ತಡಮಾಡ ಬೇಡವೊ ಹೆ ನಲ್ಲ । ವಾಕು ಲಾಲಿಸು ಎ । ನ್ನೊಡೆಯ
ಗೋಪಾಲವಿಠ್ಠಲ । ದೇವ ಪರಾಕು । ಅಡಿಗಳನಿಡು ಭಕ್ತವತ್ಸಲ ।
ಶ್ರೀಲಕುಮಿನಲ್ಲ ॥ ಮಡುವಿನೊಳಗೆ ಗಜ ಮೊರೆ ಇಡಲಾಕ್ಷಣ ।
ಮಡದಿಗೆ ಹೇಳದೆ ದುಡುದುಡುನೇ ಬಂದು । ಹಿಡಿದು ನಕ್ರನ
ಬಾಯ ಕಡಿದು ಬಿಡಿಸಿದನೆ । ಸಡಗರದಲಿ ರಮೆ ಪೊಡ
ವಿಯೊಡನೆ ಕೂಡಿ ॥ 3 ॥

ರಾಗ : ದರ್ಬಾರ **ಪದ 42** ಅಟ್ಟತಾಳ

ರಾಮದೂತನ ಪಾದ ತಾಮರಸವ ಕಂಡ । ಆ ಮನುಜನೆ ಧನ್ಯನು ।
ಶ್ರೀಮನೋಹರ ನಂಘ್ರಿ ಭಜಕ । ಸ್ತೋಮ ಕುಮುದಕೆ ಸೋಮ
ನೆನಿಸುವ । ಭೂಮಿಯೊಳು ಯದುಗಿರಿಯ ಸೀಮೆಯ । ಕಾಮ
ವರದೊಳು ಪ್ರೇಮದಿಂದಹ ॥ ಅ.ಪ. ॥

ಕೋತಿರೂಪದಿ ರಘು । ನಾಥನಾಜ್ಞೆಯ ತಾಳೀ । ಪಾಥೋಧಿಯ
ಲಂಘಿಸಿ ॥ ಖ್ಯಾತ ಲಂಕೆಯ ಪೊಕ್ಕು ಶೋಧಿಸಿ । ಮಾತೆಯನು

ಕಂಡೆರಗಿ ದಶಮುಖ । ಪೋತ ಖಳಕುಲ ವ್ರಾತ ಘಾತಿಸಿ ।
ಸೀತೆ ವಾರ್ತೆಯ ನಾಥಗರುಹಿದ ॥ 1 ॥

ಪಾಂಡುಸುತನೆ ಪ್ರ । ಚಂಡ ಗದೆಯನು ದೋ । ರ್ದಂಡದಿ
ಧರಿಸುತಲಿ । ಮಂಡಲದೊಳು ಭಂಡ ಕೌರವ । ಚಂಡರಿಪು
ಗಳ ಖಂಡಿಸಿ ಶಿರ । ಚಂಡನಾಡಿ ಸತಿಗೆ ಕರುಳಿನ ದಂಡೆ
ಮುಡಿಸಿ ದುದ್ದಂಡ ವಿಕ್ರಮ ॥ 2 ॥

ಧಾರಣಿಯೊಳು ದ್ವಿಜ । ನಾರಿಗರ್ಭದಿ ಬಂದು ಮೂರೊಂಧಾ
ಶ್ರಮಧರಿಸಿ ॥ ಧೀರ ನೀನೆಳದಿಕ ತ್ರಿದಶ । ಸಾರಗ್ರಂಥಗಳ್
ವಿರಚಿಸುತ ಮಹ । ಶೂರ ಶ್ರೀಗೋಪಾಲವಿಠ್ಠಲನ । ಚಾರು
ಸರಣಕೆ ಅರ್ಪಿಸಿದ ಗುರು ॥ 3 ॥

ರಾಗ : ಮೋಹನ **ಪದ 43** ಝುಂಪೆತಾಳ

ವಿಷಯ ಸಂಗದಲಿಂದ ಕುಶಲವನು ಬಯಸಿದರೆ । ಹಸನಾಗಿ
ತೋರುವದೆ ನಿನಗೆ ॥ ಪ ॥ ಅಸಮ ಜ್ಞಾನಿಗಳ ಧಿಯುಮಸುಳಿ
ಮರುಳಾಗುವದು । ಮಶಕ ನಿನಗಾವ ನೆಲೆಯೋ ಮನುಜ ॥ ಅ.ಪ. ॥

ಭರತರಾಯನ ನೋಡು ಹರಿಣ ಕುಣಪನು ಪೋಗೆ । ಒರಲೊರಲಿ ಪ್ರಾಣ
ಬಿಡನೆ ॥ ಮರಳಿ ಎರಳೆಯ ಜನ್ಮವನುಭವಿಸಿ ಸಂಗವನು । ಥರವಲ್ಲ
ವೆಂದು ಮೊರೆ ಇಡನೇ ಮನುಜ ॥ 1 ॥

ವಿಪುಳ ಮತಿಯಾದ ಸೌಭರಿಯು ಧೃಡಮನಸಿನಲಿ । ತಪವ ಮಾಡುತ
ಕುಳ್ಳಿರೆ ॥ ಶಫರ ಶಫರಿಗಳ ಸಂಯೋಗವನ್ನು ಕಂಡು ಮನ ।
ಚಪಲವಾಯಿತು ನೋಡಲೋ ಮನುಜ ॥ 2 ॥

ಮೌನಿ ವಿಶ್ವಾಮಿತ್ರ ತಾನು ಊರ್ವಶಿ ಕೂಡಿ । ಶ್ವಾನನಾಗುತ
ಪೋದನೋ । ಏನೆಂಬೆ ದೇಹದಲಿ ಹೀನತ್ವವೈದಿ ನಿ । ತ್ರಾಣ
ನಾದನು ನೋಡಲೋ ಮನುಜ ॥ 3 ॥

ಲೇಸಾದ ಕುಲದಲ್ಲಿ ಸಂಜನಿಸಿದಜಮಿಳನು । ದಾಸಿ ಸಂಗವ
ಮಾಡಿದ ॥ ದಾಶರಾಯನ ಮಗಳ ಪರಮ ಋಷಿಯಾದ ಪ । ರಾ
ಶರನು ಕಂಡು ಮನಗೆಟ್ಟ ಮನುಜ ॥ 4 ॥

ಅಂದಣವ ನೇರಿದ ನಹುಷರಾಯನ ನೋಡು । ಇಂದ್ರಾಣಿಯನು ಬಯಸಿ
ಮಂದ ಅಜಗರನಾಗಿ ಬಂದ ಭೂಮಿಯಲಿ ಅದ । ರಿಂದ ಗೆಲ ಲೋಶವಲ್ಲವೋ
ಮನುಜ ॥ 5 ॥

ವಿಷಯದಲಿ ಮನ ಸನ್ನಿಕರ್ಷವಾದರೆ ನಿನ್ನ । ವಶಕೆ ಬರಲರಿಯದಯ್ಯ
ಎಸೆವ ಶ್ರುತಿ ಸ್ಮೃತಿ ಎಂಬ ನಿಶಾಣದಲಿ ಮಸೆ ಮಸೆದು । ವಶಮಾಡಿ
ಕೋ ಬಿಡದಲೇ ಮನುಜ ॥ 6 ॥

ವಿವಿಧ ಸಾಂಸಾರಿಕ ದುಃಖದರ್ಶನ ವಾಗೆ । ಶ್ರವಣೀಯ ಶಾಸ್ತ್ರಂಗಳ
ಹವಣವರಿತು ಜ್ಞಾನ ದ್ರವಿಣರಲಿ ಕೇಳಿಕೋ । ಭವಣೆ ದೂರಾಗುವದೋ
ಮನುಜ ॥ 7 ॥

ಈಷಣತ್ರಯ ನಿನಗೆ ಮೋಸಗೋಳಿಸಿ ಕಡೆಗೆ । ನಾಶವಾಗುವದು ಕಾಣೋ
ವಾಸುದೇವನ ಪರಮ ದಾಸರ ಕರುಣವನು । ಲೇಸಾಗಿ ಪೊಂದು ಸುಖಿಸೋ
ಮನುಜ ॥ 8 ॥

ಕ್ರಿಮಿ ಭಸ್ಮ ಮಲವಾಗಿಪೋಪ ದೇಹಕೆ ಬಹಳ । ಮಮತೆಯನು ಕೊಡಲಿ ಬೇಡ
ಕಮಲನಾಭನ ಪಾದ ಕಮಲವನು ಭಜಿಸಿ ಭವ । ಶಮಲಗಳ
ಕಳೆ ಕಂಡೆಯಾ ಮನುಜ ॥ 9 ॥

ಇಂತು ಮಹಾಂತದೃಷ್ಟಾಂತ ತೋರಿದೆ ನಿನಗೆ । ಭ್ರಾಂತಿಜ್ಞಾನವ ಕಳೆಯಲು ॥
ಶಾಂತ ನಾಗಿರು ವಿಷಯ ಕಾಂತಾರ ದೊಳುಬಿದ್ದು । ಭ್ರಾಂತನಾಗಲಿ
ಬೇಡವೋ ಮನುಜ ॥ 10 ॥

ದ್ರವ್ಯಕಾರಕ ಕ್ರಿಯ ಭ್ರಮವೆಂಬ ಭ್ರಮಣದಲು । ದುರ್ವಿಷಯದಲಿ
ಚರಿಸದೆ ॥ ಶರ್ವಪಿತ ಪ್ರೀಯ ಶ್ರೀಗೋಪಾಲವಿಠ್ಠಲನ । ಗುರ್ವಾಧಿಷ್ಠಾನದಲಿ
ಭಜಿಸೋ ಪ್ರಾಣಿ ॥ 11 ॥

ರಾಗ : ರೇಗುಪ್ತಿ **ಪದ 44** ಅಟ್ಟತಾಳ

ಸಾಕು ಸಾಕು ಭವಸಂಗ । ಚಿತ್ತ । ವೈಕಲ್ಯ ಕಾರಣವದು ಮಾನಭಂಗ ॥ ಪ ॥

ಪ್ರಾಕೃತರೊಡನೆ ಸಂಬಂಧ । ಸುವಿ । ವೇಕಕ್ಕೆ ಹಾನಿ ತೋರುವ ಪ್ರತಿ ಬಂಧ
ಶೋಕಮೋಹಗಳದರಿಂದ । ಮುಂದೆ । ಏಕಾಕಿಯಾಗಿ ಸಂಚರಿಪುದೇ ಚಂದ
॥ 1 ॥

ಬಿಟ್ಟದ್ದು ಬಯಸೋದು ಸಲ್ಲ । ತಾ । ಕೊಟ್ಟಾಭಯಕೆ ಕುಂದು ಬರ
ಬಾರದಲ್ಲಿ । ಸುಟ್ಟುಪಾಪಂಗಳೆನೆಲ್ಲ । ಬಲು । ಧಿಟ್ಟನಾಗಲಿ ಬೇಡವೆ ಹೇಸಿದ್ದೆಲ್ಲ ॥ 2 ॥

ಕ್ರೂರ ಕಾಮನದೊಂದು ಕಾಟ । ಮ । ತ್ತಾರಯ್ಯ ಇಹ ಪರಕೆಲ್ಲ ಕವಾಟ ॥
ಘೋರ ಪಾಪಂಗಳ ಕೂಟ । ಪರ । ನಾರಿಯರೊಡನಾಟ ನರಕದೊಳಾಟ ॥ 3 ॥

ಚಲಿಸದೆ ಧ್ಯಾನವ ಮಾಡೊ । ಮನ । ವೊಲಿಸಿದದೇ ಶ್ರವಣವನೆ ಮಾಡೊ ॥
ಸುಲಭದ ಜಪದಿ ಲೋಲ್ಯಾಡೊ । ಚಿತ್ತ । ವೊಳಗಾಗ ದಿರಲು ಕೀರ್ತನೆಗಳ
ಪಾಡೊ ॥ 4 ॥

ಎಲು ಮಜ್ಜ ಮಾಂಸದ ಪಿಂಡ । ಇದು ।
ತಿಳಿದು ನೋಡಿದರಲ್ಲಿ ಹುರುಡಿಲ್ಲ ಕಂಡ್ಯಾ ॥
ಮಲಮೂತ್ರ ಪೂರಿತಭಾಂಡ । ಇದ ।
ರೊಳಗಭಿಮಾನ ವುಳ್ಳಾತನೆ ಭಂಡ ॥ 5 ॥

ಭಿನ್ನ ಬುದ್ಧಿಯ ನೆರೆ ಮಾಣು । ಇನ್ನು । ನಿನ್ನಂತೆ ಸಕಲ ಭೂತಂಗಳ ಕಾಣು ॥
ಸನ್ನುತನಾದಡೆ ಜಾಣು । ಇದ । ಚನ್ನಾಗಿ ಕಾಣಲೀಸದು ಕರ್ಮ ರೇಣು ॥ 6 ॥

ಕಪಟ ಕಲ್ಮಷವ ನೀಡಾಡು । ಬಲು । ಗುಪಿತದಿ ಹರಿ ಭಕುತಿಯ ನೀ ಮಾಡು
ಚಪಳ ವೃತ್ತಿಯೆ ನಗೆಗೇಡು । ಬಲು । ನಿಪುಣರ ನಡೆವಳಿಯ ನೀನೋಡು॥ 7 ॥

ವ್ಯಾಪಾರಂಗಳ ತ್ಯಜಿಸು । ಬಪ್ಪ । ಕೋಪತಾಪಂಗಳ ಮಿಗೆ ಕಡೆಗಣಿಸು
ಪಾಪಕರ್ಮವ ಪರಿಹರಿಸು । ಚೆಲ್ವ । ಗೋಪಾಲವಿಠ್ಠಲ ಮೂರ್ತಿಯ ಸಾರಿಸುಖಿಸು ॥ 8 ॥

ರಾಗ : ಶಂಕರಾಭರಣ **ಪದ 45** ಆದಿತಾಳ

ಒಗತನದೊಳು ಸುಖವಿಲ್ಲ । ಇದ । ಒಲ್ಲೆನೆಂದರೆ ಬಿಡೆಯಲ್ಲ ॥ ಪ ॥

ಜಗದೊಳು ಹಗರಣ ಮಿಗಿಲಾಯಿತು ಪ । ನ್ನಗ ನಗ ನಗರ ನಿವಾಸ ॥ ಅ.ಪ.॥

ಮೂರು ಬಣ್ಣಿಗೆಯ ಮನೆಗೆ ಮೂರೆರಡು ಭೂತಗಳು । ಮೂರು ನಾಲ್ಕು
ಪ್ರಾಕಾರಕ್ಕೆ ಮೂರಾರು ಛಿದ್ರಗಳು ॥ ಮೂರು ಅವಸ್ಥೆಯು ಮೂರು
ನೂರಾಹತ್ತರಲಿ । ಮೂರುವಿಧ ದನ್ನದಿಂದ ಮೂರು ತಾಪಕ್ಕಾರೆ ॥ 1 ॥

ಐದು ಮಂದಿ ಭಾವನವರು ಐದು ಮೈದನರು ಕೂಡಿ । ಐದು ಪರಿತಾನಾಗಿ
ಮಾವ ನೈದು ಕತ್ತಲೆ ಕೋಣೆ ॥ ಗೈದುವಂತೆ ಮಾಡುವರು ಐದು ತಂದು
ಬೆಚ್ಚಿಸುವರು ಐದನೆ ಬೊಕ್ಕಸದ ಮನೆ ಯೆಲ್ಲಿದೆಯೊ ನಾಕಾಣೆ ॥ 2 ॥

ಆರಾರು ಎರಡುಸಾವಿರ ದಾರಿಯಲಿ ಹೋಗಿಬರುವವರು । ಆರು ಮೂರು
ಮೂರು ಸಾವಿರ ದಾರು ನಿತ್ಯದಿ ॥ ಆರುನಾಲ್ಕು ಮಂದಿ ಹಿರಿಯ
ಪಾರು ಪತ್ಯ ಗಾರರಿದಕೆ । ಆರು ಎರಡು ವಿಧದಲೆನ್ನ ಗಾರು ಮಾಡುತಿಪ್ಪರೋ
॥ 3 ॥

ಒಬ್ಬ ಬೆಳಕು ಮಾಡುವ ಮತ್ತೊಬ್ಬ ಕತ್ತಲೆ ಗೈದಿಸುವ । ಒಬ್ಬ ಎರಡು ಎರಡೂ
ಮಾಡುವ ಮೇಲೊಬ್ಬ ನಿಂತು ನೋಡುವ ॥ ಒಬ್ಬ ಮೂವರ ಒಳೊಳಗೆ
ಹಬ್ಬಿ ಕೊಂಡಿಪ್ಪವರಂತೆ । ಒಬ್ಬನ ಕಾಣದೆ ನಾ ತಬ್ಬಿಬ್ಬುಗೊಳಗಾದೆ ॥ 4 ॥

ಆರು ಹತ್ತರ ಮೂಲದಿ ಆರುಮಂದಿ ಬಿಡದೆ ಎನ್ನ ಘೋರಗೈಸುವರೋ
ಮರುಳೊಂದು ವಿಚಾರ ಮಾಡಲೀಸರೊ ॥ ಆರುಮೂರು ವಿಧದ ಸೋಪಸ್ಕರ
ಒಂದಾದರೂ ಇಲ್ಲ । ಆರೆ ಒಬ್ಬರು ಸವತೇರ ಹೋರಾಟವೆನೆಂಬೆ ॥ 5 ॥

ಹಡೆದ ತಾಯಿ ಮಾಯದಿ ಹಿಡಿದು ಬದುಕು ಮಾಡಿಸುವಳು । ಒಡಹುಟ್ಟಿ ದೈವರು
ಎನ್ನ ಕಡೆಗಣ್ಣಿಂದೀಕ್ಷಿಪರೋ ಬಿಡದೆ ಹತ್ತಿರ ಕಾದಿಪ್ಪನುಡಿಸನು ಹಿರಿಯಣ್ಣನವನ ।
ಮಡದಿಯ ತ್ಯಾಗಕ್ಕೇನೆಂಬೆ ತನ್ನವಡವೆ ಲೇಶವೀಯಳೊ ॥ 6 ॥

ಅತ್ತೆ ಅತ್ತಿಗೆಯು ಎನ್ನ ಸುತ್ತು ಮುತ್ತು ಕಾದು ಕಟ್ಟಿ । ಎತ್ತ ಹೋಗಲೀಸರೋ
ತೋರಲೀಸರೋ ನಿನ್ನತ್ತ ಬಾರಲೀಸರೊ ॥ ಹೊತ್ತಿಗೆ ಬಂದೊದಿಗಿ ನೃಪನ ಭೃತ್ಯರು
ಎಳೆದೊಯ್ಯುವಾಗ । ಹೆತ್ತಯ್ಯ ನೀ ಬಿಡಿಸ ದಿರಲು ಮತ್ಯಾರು ಗತಿ ಪೇಳೊ
॥ 7 ॥

ಮನೆಯೊಳು ನಾಳಿನ ಗ್ರಾಸಕ್ಕನುವಿಲ್ಲ । ಋಣದಿಂದ ಕಡೆಹಾಯ್ವ ಮಾರ್ಗ ಲೇಶ
ನಾಕಾಣೆ॥ ಗುಣಿಸಲು ಈ ಕಾಳಪುರುಷನ ಬಂಧನದಿಂದ ನಾನಿನ್ನು ದಣಿದೆನು
ಇನ್ನೇನು ನಿನ್ನಣುಗರೊಳಾಡಿಸೋ ॥ 8 ॥

ನಿನ್ನ ಹೊಂದಿ ಇಷ್ಟು ಭವಣೆಯನ್ನು ಬಡಲೀ ಜನರು । ನಿನ್ನ ದೂರಿ ಜರಿ
ವರೋ ನಾ ನಿನ್ನು ತಾಳಲಾರೆ । ಘನ್ನ ಕರುಣಿ ಸೌಭಾಗ್ಯ ಸಂಪನ್ನ ಗೋಪಾಲವಿಠ್ಠಲ।
ಬಿನ್ನಪವ ಚಿತ್ತೈಸಿ ಮನ್ನಿಸೈಯ್ಯ ಮಾಧವ ॥ 9 ॥

ರಾಗ : ಸುರುಟಿ

## ಪದ 46

ಆದಿತಾಳ

ಮಂಗಳಂ ಮಂಗಳಂ ಭವತು ತೇ ॥ ರಮಾಪತೇ ॥ ಪ ॥

ಮಂಗಳಂ ಮಧುವೈರಿ ದೇವವರೇಣ್ಯ ॥ ಅ.ಪ. ॥

ಮಾರ ಜನಕ ದಿವ್ಯ । ಸಾರ ಸುಂದರ ದೇಹ । ವಾರಿಜದಳನೇತ್ರ
ಕಾರುಣ್ಯ ಗುಣನಿಧೇ ॥ 1 ॥

ಮಣಿಮಯ ಶುಭಕರ ಕನಕ ಕುಂಡಲಧರ ಮಿನುಗುವ
ಮುಕುಟ ಶೋ । ಭನ ಕರಮೂರ್ತೆ ॥ 2 ॥

ವೇದ ವಿಬುಧ ವಂದ್ಯ । ಗೋಪಾಲವಿಠ್ಠಲ ॥ ಸಾಧು ಸಜ್ಜನ ಪಾಲ
ಶ್ರೀದೇವಿ ಲೋಲ ॥ 3 ॥

ರಾಗ : ಮೋಹನ

## ಪದ 47

ಮೂರುನಾಮಗಳ ಧರಿಸಿದ ಕಾರಣವೇನೊ । ಸಾರಿಪೇಳೆಲೋ ಈಗಲೆ ॥ ಪ ॥

ಶ್ರೀರಮಾಪತಿ ಶ್ರೀನಿವಾಸ ವೆಂಕಟರಮಣ । ಯಾರು ಇಟ್ಟರೊ ನಿನಗೆ
ಮೂರುನಾಮಗಳು ॥ ಅ.ಪ. ॥

ಶುದ್ಧವೈಷ್ಣವರೆಲ್ಲ ಶುದ್ಧ ಮೂರುತಿ ಎಂದು । ಶುದ್ಧ ಪಾದಕೆ ಎರಗಿ
ಕರವ ಮುಗಿದು । ಎದ್ದು ನೋಡಲು ನಿನ್ನ ಫಣಿಯೊಳೀಪರಿ ಇರಲು ।
ಮಧ್ವಮತದ ದೈವವೆಂದು ನಿನ್ನ ಕರೆಯುವರೊ ॥ 1 ॥

ಸಾಲದೇ ನಿನ್ನ ಸೌಂದರ್ಯಕ್ಕೆ ಒಂದು ತಿಲಕ । ಪಾಲಸಾಗರಶಾಯಿ ಚಲುವ
ಮೂರುತಿ । ವ್ಯಾಳೆವ್ಯಾಳೆಕೆ ಬರುವ ಭಕುತಜನ ವೃಂದದ ।
ದೃಷ್ಟಿ ತಾಕುವದೆಂದು ತೋರುವಾ ಬಗೆಯೊ ॥ 2 ॥

ಮೂರು ಲೋಕಗಳಿಹವು ಮೂರುರೂಪನು ನಾನು ಮೂರುಮಾಳ್ಪೆನು
ಜಗವ ಮೂರು ಗುಣದಿ । ಮೂರು ತಾಪವಗೆದ್ದು ಮಾರ್ಗದಿ ಭಜಿ
ಸಿದರಿಗೆ । ಪಾರುಮಾಡುವೆನೆಂದು ತೋರುವಾ ಬಗೆಯೂ ॥ 3 ॥

ಮೂರೆರಡು ಮೂರೊಂದು ಇಂದ್ರಿಯ ವರ್ಜಿಸಲು । ತೋರುವೆನು
ನಿಜರೂಪ ಭಕುತಗೆಂದು । ಸಾರುತಿದ್ದರು ವಾಯು । ಅರಿಯದೆ ಭಜಿ
ಸಿದರಿಗೆ । ಮೂರು ನಾಮಗಳೇಗತಿ ಎನ್ನುವಾ ಬಗೆಯೊ ॥ 4 ॥

ಶ್ರೀಲೋಲ ಕೃಷ್ಣ ಗೋಪಾಲವಿಠ್ಠಲ ನಿನ್ನ । ಈಬಗೆಯ ಲೀಲೆಗಳ
ರಿವರಾರೊ । ವ್ಯಾಳಶಯನ ವೆಂಕಟೇಶನೆ ಎನಗೆ । ಕಾಲಕಾಲಕೆ
ನಿನ್ನ ಲೀಲೆಗಳ ತೋರೊ ॥ 5 ॥

ರಾಗ –

## ಪದ 48

ಹ್ಯಾಂಗೆ ಮಾಡಲಯ್ಯಾ ಕೃಷ್ಣಾ ಹೋಗುತಿದೆ ಆಯು ॥ ಪ ॥

ಮಂಗಳಾಂಗ ಭವ ಭಂಗ ಬಿಡಿಸಿ ನಿನ್ನ ಡಿಂಗರಿಗನ
ಮಾಡೊ ಅಂಗಜ ಜನಕ ॥ ಅ.ಪ. ॥

ಏಸು ಜನುಮದ ಸುಕೃತದ ಫಲವೊ ತಾನು ಜನಿಸಲಾಗಿ ।
ಭೂಸುರ ದೇಹದ ಜನ್ಮವು ಎನಗೆ ಸಂಭವಿಸಿದೆ ಯಾಗಿ ।
ಮೋದತೀರ್ಥ ಮತ ಚಿನ್ಹಿತನಾಗದೆ ದೋಷಕೆ ಒಳಗಾಗಿ ।
ಲೇಸುಸಾಧನವ ಕಾಣದೆ ದುಃಸಹವಾಸ ದಿಂದಲೆ ದಿನದಿನಕಳೆದೆ ॥ 1 ॥

ಶಶಿ ಮುಖಿ ಕನಕದ ಆಶೆಗೆಬೆರೆತು ವಸುಪತಿ ನಿನ್ನಡಿಯಾ ।
ಹಸನಾಗಿ ನಿನ್ನ ನೆನೆಯದೆ ಕೃಪೆಯಾ ಘಳಿಸದೆ ಕೆಟ್ಟೆನಯ್ಯಾ ।
ನಿಶಿಹಗಲು ನೆಲವೊ ಸರ್ವಕಾಲ ನಿನ್ನೊಡೆತನೆಂಬುವ ಬಗೆಯನು ಅರಿಯದೆ॥2॥

ನೆರೆ ನಂಬಿದ ಪಾವಟಿಕರು ಎಲ್ಲಾ ಸರಿದು ಪೋದವಲ್ಲಾ । ಮರಳೆ
ಈಪರಿಜನುಮವು ಬರುವ ಭರವಸೆಯಂತು ಇಲ್ಲ । ಪರಿಪರಿ
ವಿಷಯದ ಆಶೆಯು ಎನೆಗೆ ಪಿರಿದು ಆಯಿತಲ್ಲಾ । ಹರಿಯು ಜಗದಿನೀ
ನೊಬ್ಬನಲ್ಲದೆ ಪೊರೆವರಿನ್ನಾರು ಇಲ್ಲವಯ್ಯಾ ॥ 3 ॥

ಅವನಿಯೊಳಗೆ ಪುಣ್ಯ ಕ್ಷೇತ್ರವು ಚಲಿಸುವ ಹವಣಿಕಾದರಿಲ್ಲ ।
ಪವನಾತ್ಮಕ ಗುರು ಮಧ್ವಶಾಸ್ತ್ರದ ಪ್ರವಚನ ಕೇಳಲಿಲ್ಲ । ತವಕದಿಂದ
ಗುರು ಹಿರಿಯರೆ ಸೇವಿಸಿ ಅವರ ಒಲಿಸಲಿಲ್ಲ । ರವಿನಂದನ ಕೇಳಿದ
ರುತ್ತರವು ಕೊಡೆ ವಿವರ ಸರಕು ಒಂದಾದರಲ್ಲ ॥ 4 ॥

ಭಾಗವತ ರೊಡಗೂಡಿ ಉಪವಾಸ ಜಾಗರ ಒಂದು ದಿನ ಮಾಡಲಿಲ್ಲ
ರಾಗದಿ ಶುಕ ಮುನಿ ಪೇಳಿದ ಹರಿಕಥೆ ಸಂಯೋಗ ವೆಂಬೊದಿಲ್ಲ । ನೀಗು
ವಂಥ ಭವಭಯ ಭಕುತಿ ವೈರಾಗ್ಯವೆಂಬೊದಿಲ್ಲ । ಯೋಗಿ
ವಂದ್ಯ ಗೋಪಾಲವಿಠ್ಠಲ ತಲಿಬಾಗಿ ನಿನ್ನನು ಬೇಡಿಕೊಂಬೆ ॥ 5 ॥

***

॥ ಶ್ರೀ ಗೋಪಾಲವಿಠ್ಠಲ ಪ್ರಸನ್ನ ॥

## ಶ್ರೀ ವಿಜಯ ವಿಠ್ಠಲನ ಉಪಾಸಕರು



# ಶ್ರೀ ಗೋಪಾಲವಿಠ್ಠಲರು

## ರಚಿಸಿದ ಉಗಾಭೋಗಗಳು

1. ಅನ್ಯರಿಂದಲಿ ಸುಖವಾಯಿತೆಂಬುದಕಿಂತ । ನಿನ್ನಂದಾಯಿತೆಂಬ
ಕ್ಲೇಶ ಮೇಲಯ್ಯ । ನಿನ್ನರಿಯದೆ ಅನ್ಯರ ಬಲ್ಲೆನೆಂಬುದಕಿಂತ ।
ಕಣ್ಣಿಲ್ಲದಿರುವ ಕುರುಡ ಮೇಲಯ್ಯಾ । ಪುಣ್ಯ ಪಾಪವರಿಯದೆ
ಬದುಕುವ ಮನು । ಜನಿಗಿಂತ ನಾಯಿಕುನ್ನಿ ಲೇಸಯ್ಯ ಕುಲ
ಹೀನನಾದರು ಸುಖದುಃಖಗಳು । ನಿನ್ನಂದಾಯಿತೆಂಬ ಮತಿ ।
ಚನ್ನಾಗಿ ತಿಳಿಸಯ್ಯ ಗೋಪಾಲವಿಠ್ಠಲ ॥ 1 ॥

2. ನೀರಿನಲಿನಿಂತು ನಿಡುಗಟ್ಟು ನಾರುವಗೆಸಾರಗಂ । ಬೂರ ಕಸ್ತೂರಿ
ಲೇಪನದಮದವೊ । ಭಾರ ಬೆನ್ನಿಲಿ ಪೊತ್ತು ಕಾಲ ಕೈ ಮುದುರಿದಗೆ। ಧೀರ
ಶೇಷಶಯನದ ಮದವೊ । ಮೋರೆಯಲಿ ನೆಲಕೆದರಿ ಬೇರುಗಳ
ಮೆಲುವವಗೆ । ಸಾರ ಷಟ್ರಸ ಭೋಜನದ ಮದವೊ । ಕಾರು
ಕರುಳನ್ನ ವನಮಾಲೆ ಹಾಕಿದವಗೆ । ಹಾರ ಪದಕಾದಿಗಳ ಹಾಕಿದ
ಮದವೊ । ಮೂರಡಿಯ ಭೂದಾನವನ್ನು ಬೇಡಿದವಗೆ ಸಾರಿದ
ರಭೀಷ್ಟಗಳ ಕೊಡುವ ಮದವೊ । ಧಾರಣಿಯನಿತ್ತು ಕುಳ್ಳಿರೆ
ಸ್ಥಳವಿಲ್ಲದವಗೆ । ಈ ರೇಳು ಲೋಕಗಳ ನಾಳ್ವ ಮದವೊ । ನಾರಿ
ಯನು ಬಿಟ್ಟು ವನವನವ ಸಂಚರಿಸಿದಗೆ ಮೂರು ಧಾಮದಿ
ರಮೆಯ ಭೋಗದ ಮದವೊ । ಊರ ನಾರಿಯರಿಂದ ಬೈಸಿಕೊಂಬು
ವನಿಗೆ । ವಾರಿಜ ಭವಸುರರ ವಂದನೆಯ ಮದವೊ ।
ಊರೆಲ್ಲ ನೋಡೆ ಬತ್ತಲೆಯಾಗಿ ನಿಂತವಗೆ । ಚಾರು ಪೀತಾಂಬರ
ಉಡುವ ಮದವೊ । ಘೋರ ತುರಗವನೇರಿ ಹಾರಿಸ್ಯಾಡುವಗೆ ।
ವೀರ ಸಿಂಹಾಸನದಿ ಕುಳಿತಿರುವ ಮದವೊ । ಬಾರದಲೆ
ತಪ್ಪದೊ ಹಿಂದಣ ಭವಣೆಗಳು । ದೂರ ವಿಚಾರಿಸಿಕೊ
ಮಾರಮಣನೆ । ಮೂರು ದಿನದರಸುತನ ಸ್ಥಿರ
ವೆಂದು ನೀ ನೆಚ್ಚಿ । ಸೇರಿದವರನು ಬಿಡುವದು ಧರ್ಮ
ವೇನೊ । ಶ್ರೀರಂಗರಾಜ ಗೋಪಾಲವಿಠ್ಠಲರೇಯ । ಸಾರಿದವರನು
ಪೊರೆದು ಕೀರುತಿಯ ಪಡೆಯೊ ॥ 2 ॥

3. ಹಲ್ಲಣವಿಲ್ಲದ ಕುದುರೆ ಹತ್ತಿ ಓಡಿಸಿದಂತೆ । ಬೆಲ್ಲ ಹಾಕದ ಪರಮಾನ್ನ
ದಂತೆ । ಇಲ್ಲದೇ ಹುಟ್ಟು ಹರಿಗೋಲ ನೇರಿದಂತೆ । ಸೊಲ್ಲಿಗೆ
ಬುಡದಲ್ಲಿ ಅಳೆದಂತೆ ಸಾಧನ । ಎಲ್ಲ ಒಂದೆ ಎಂಬ ಜ್ಞಾನ

ಉಂಟಾದವ । ಎಲ್ಲ ಸಾಧನಗಳ ಮಾಡಲೇನು । ಬೆಲ್ಲ
ಬೇವಾಗುದವನಿಗೆ । ಎಲ್ಲ ಕಡೆಯಲ್ಲಿ ನೋಡಿಮೆದ್ದರನ್ನ
ಮಲ್ಲಮರ್ದನ ಗೋಪಾಲವಿಠ್ಠಲನಂಘ್ರಿ । ಪಲ್ಲವವನು
ಕಾಣ ಎಲ್ಲಿ ಪೋದರನ್ನ ॥ 3 ॥

4. ಕ್ಷೀರಸಾಗದ ಬಿಟ್ಟು ಲವಣ ಸಾಗರದಲ್ಲಿ । ಮನೆಯ ಕಟ್ಟುವರೇನೋ
ಉತ್ತಮ ತ್ರಿಧಾಮವ ಬಿಟ್ಟು ಮರ್ತ್ಯಲೋಕದಲ್ಲಿ । ಬಂದು ಪುಟ್ಟುವ
ರೇನೋ । ನಿತ್ಯಸರ್ವಜ್ಞ ಪ್ರಕಾಶ ಮತ್ತೆ ಯಾದವರ । ಕೂಡಿ ಆಡುವುದೇನೊ
ನಿತ್ಯತೃಪ್ತನು ನೀನು ಮುಕ್ತ ರೊಡೆಯರಂಗ । ಮತ್ತೆ ವಿದುರನ ಮನೆಯ
ಪಾಲ್ಕುಡಿವರೇನೊ । ಸತ್ಯಸಂಕಲ್ಪ ಗೋಪಾಲವಿಠ್ಠಲ ನಿನ್ನ । ಕೃತ್ಯ
ಕೊಂಡನಂತಾನಂತ ನಮೊ ನಮೋ ಎಂಬೆ ॥ 4 ॥

5. ಆರಿಗಾರಾಗುವರೊ ಆಪತ್ತು ಕಾಲಕ್ಕೆ । ಆರಿಗಾರಾಗುವರೊ
ಸಂಪತ್ತುಕಾಲಕ್ಕೆ । ಆರಿಂದ ಬಪ್ಪುವದು ಆರಿಂದ ತಪ್ಪುವದು ।
ಆರಿಸಿನೊಡುವದು ಇದರ ಕಾರಣವನು ಇದ । ಕಾರುವಾರಣ
ದಲಿನೋಡಿ । ಆರೋಪಿಸಲು ಎಲ್ಲ ಭಾರ ಅವಗೆ । ಕಾರುಣ್ಯ
ಮೂರುತಿ ಗೋಪಾಲವಿಠ್ಠಲ । ಈ ರೀತಿ ಆರಿದವಗೆ ಇಲ್ಲೆ ಪೊರೆವ॥ 5 ॥

6. ಎಂತು ಪೋವುದು ಮನದ ಕಿಂತು (ಚಿಂತೆ) ಎಂಬೋದು ಎನ್ನ ।
ಅಂತರಂಗದಲ್ಲಿಪ್ಪನು ಸುಂದರಾಂಗ ಪಿಂತಿನ ಸಂಸಾರ ಮರೆದು ಪೋಗಿತ್ತು
ಈಗ । ಚಿಂತನಿಗೆ ಬಂದು ಬಹು ದಣಿಸುವದು ಎಂತು ವಿಹಿತ
ದಲ್ಲಿ ಬಿಡಿಸುವೆ ಈ ಅರ್ತಿ । ನಿಂತಲ್ಲಿ ಕುಳಿತಲ್ಲಿ ಹತ್ತಿಹ್ಯದು ।
ನಿಂತು ಮಾತೆಯಲ್ಲಿ ಪುಟ್ಟಿಸಿದವನಾರು । ಚಿಂತಾಯಕ ದೇವ
ಗೋಪಾಲವಿಠ್ಠಲ ನಿ । ಶ್ಚಿಂತನಿಗೆ ವಿಷಯನಾಗಿರು ಸರ್ವದಾ ॥ 6 ॥

7. ಓವನ್ನಕಾಣದಲೆ ದೇಶದೇಶವತಿರಿಗಿ । ಘಾಸಿಯಾದೆನು ಬಲುಗರ್ವ
ತನದಿ । ಈಶರೀರ ದೊಳಗೆ ವಾಸವಾಗಿ ಇದ್ದು ಕಾ । ಣಿಸಿಕೊಳದೆ
ಎನಗೆ । ಮೋಸಗೋಳಿಪೆ । ಕೂಸಿನ ಮುಖಕೆ ಬೀಳದೆ ಜನನಿ ಮರೆಯ
ಲಿರೆ । ಕೂಸಿಗಿನ್ನಾವ ಬಲ ರೋದನೊಂದೆ । ಆಶಿಶುವು ಕಳೆಗುಂದಿ
ಸುಮ್ಮನಿ । ದ್ದಿದ್ದರೆ । ಪೋಷಿಸುವ ಜನನಿ ತಾ ಸುಮ್ಮನಿಹಳೊ । ಕೂಸಿನಂತೆ
ನಾನು ಜನನಿಯಂತೆ ನೀನು ಎಸುದಿನವೆಂದು ಉಪವಾಸವಿರಲಿ ।
ದಾಸರ ದಾಸತನ ಉಂಟಾಗೆ ನೀ । ಪೋಷಿಸುತಲಿಪ್ಪೆ ಇದ್ದಲ್ಲಲ್ಲೆ

ಎನ್ನ । ಈ ಸಥೆಯ ಮಾತು ನೀನಾಡಿಸಿದ್ದಲ್ಲವೆ ಶ್ರೀಶ ಗೋಪಾಲ
ವಿಠ್ಠಲ ಹಾ ಹಾ ಹಾ ॥ 7 ॥

8. ಎಷ್ಟುಮಂದಿ ಧರಣಿ ಆಳಿ ಅರಸುಗಳೆನಿಸಿ । ನಷ್ಟವಾಗಿ ಪೋದರಲ್ಲ
ನೋಡ ನೋಡಾ । ಕಟ್ಟಿಕೊಂಡೆಯ್ದುರು ತೃಣವಾದರು ಹಿಂದೆ ॥ ಇಷ್ಟನಿಷ್ಟಕೆ
ಪಾತ್ರರಾಗುವರು । ದಿಟ್ಟತಾ ಹರಿಗೋಲ (ದಾಟಿಪೆನೆಂದು)
ಹುಟ್ಟಲಿ ನೀರು ತಿರುಹಿ ಕಡೆದಾಟಿಸೆ । ಹುಟ್ಟದ ಆಕೀರ್ತಿ ಹಾಕಿ
ದವನದು ಎಂದು । ಕೊಟ್ಟವರಗುಂಟು ಬಹುಮಾನವ । ಎಷ್ಟೇ
ಉದಕದಿ ಹುಟ್ಟು ಹೊರಳಿ ಆಡಿದರದಕೆ । ಎಷ್ಟುಹತ್ತೋದು ಜಲವು
ಅಷ್ಟೇ ಅಲ್ಲದೆ । ಇಷ್ಟು ಹರುಯಾಧೀನ ನಂಬಿದಂಬಿಗನಯ್ಯ । ಇಷ್ಟ
ರೊಳು ಚಲುವ ಗೋಪಾಲವಿಠ್ಠಲ । ಇಷ್ಟನಾಗಿಸರ್ವಾಭೀಷ್ಟಗಳನೀವ॥ 8 ॥

9. ತನ್ನ ನರಿಯದೆ ಅನ್ಯರ ಬಲ್ಲೆನೆಂಬುದಕಿಂತ । ಕಣ್ಣು ಇಲ್ಲದೆ ಈ
ಪರಿ ಮಾನುಳಿಸಯ್ಯ ಅ । ಜ್ಞಾನಿಗಳ ಮುಂದೆನ್ನ ಮಾನಕಳೆಯಯ್ಯ
ಸುಜ್ಞಾನಿಗಳ ಮುಂದೆ ನಾಣು ಎಂಬುದು ಬಿಡಿಸು । ಸಕಲರ್ಕೃತ್ವ
ದೋಳು ನೀನು ಎಂಬೋದು ತಿಳಿಸು । ಅಲ್ಲಲ್ಲಿಶ್ವಾನ ಸೂಕರ ನಾನಾ
ಯೋನಿಗಳು ಬರಲಿ । ಜ್ಞಾನವಿದು ಒಂದೀಯೊ । ದೀನರೊಡೆಯ
ಜ್ಞಾನಮಯ ಗೋಪಾಲವಿಠ್ಠಲ । ಮೌನಿಗಳರಸ ನಮೋ ಎಂಬೆನೊ॥ 9 ॥

10. ತೀರಿತೆ ನಿನ್ನ ಸ್ಥಿತಿಸೃಷ್ಟಿಲಯ ವ್ಯಾಪಾರ । ಪೋರನೊಬ್ಬನಗ
ಲಿಸಿ ಸೆಳೆದು ಒಯ್ದುದರಿಂದ । ಪೂರುತಿ ಆಯಿತೆ ನಿನ್ನ ಸಂ
ಕಲ್ಪಕ್ಕೆ । ಕಾರುಣ್ಯನಿಧಿ ಕಪಟ ನಾಟಕನೆ । ಧಾರುಣಿ ಯೊಳಗವನ
ಸೃಜಿಸಿ ಇಟ್ಟುದರಿಂದ । ಕೀರುತಿಯ ತಂದಿತ್ತಿ ಧರ್ಮದಲ್ಲಿ
ತೀರಿತೋ ಅವನ ಪುಣ್ಯ ತೋರಿತೊ ಮ್ಯಾಲಾವುದೊ । ತೋರ
ದೆನಗೆ ಒಂದು ಆರಿಂದಾರೊ । ಭಾರವಾದರು ಬಲು ಪೊತ್ತಿದೆ ಎನ್ನೊ
ಳಗೆ । ಕೀರುತ್ಯಪಕೀರುತಿನ್ನಾರದಯ್ಯ । ಭಾರ ಪೂರುತಿ
ಯಾಯಿತೆ ಅವನ ಸಾಧನೆವೆಂಬೆನೆ । ತೋರುತದೆ ಮನಕೆ
ಮತ್ತೆಲ್ಲಿ ಜನನ । ಭಾರ ನಿನ್ನದು ಎನ್ನ ಎಲ್ಲಿ ನೀನಿರಿಸಿದರೂ
ಸಾರಿ ಮೊರೆ ಇಡುವೆ । ಪಾಲಿಸು ಬಿನ್ನಪ ಭಾರತೀಶನೋಡೆಯ
ಗೋಪಾಲವಿಠ್ಠಲ ಈ ರೀತಿ ನರಿಯಲಿಲ್ಲ ॥ 10 ॥

ರಾಗ : ಕಾಂಬೋಧಿ ಝಂಪೆತಾಳ

ಐದನೇ ತಿಂಗಳಲ್ಲಿ ನಿಶ್ಚೈಸಿದೆ ॥ ಪ ॥

ಐದುವರ್ಷದವನ ಮುಂದಾಹ ಶುಭಚರಿತೆ ॥ ಅ.ಪ. ॥

ಐದರೊಳಗೊಂದರ ತನಯ ನೆನಿಸಿಕೊಂಡು । ಐದರೊಳ
ಗೊಂದು ಮಾರ್ಗವನೆ ಪಿಡಿದು ॥ ಐದರೊಳಗೊಂದು
ರಾಶಿಯ ಹಾರಿ ರಕ್ಕಸರ । ಐದೆರಡು ವರ್ಷಗಳ ಮ್ಲಾನ
ಮಾಡಿದನೆಂದು ॥ 1 ॥

ಐದರೊಳಗೊಂದರೆ ತನಯಗಳಿಗೆ ನಮಿಸಿ ಮ । ತ್ತೈ
ದೆರಡು ಮುಖದವನ ಸುತ ವೀರನ । ಐದತ್ವ
ವೈದಿಸಿ ಅರಿಯವರ ಪುರವನ್ನು ಐದರೊಳಗೊಬ್ಬನ
ಮುಖಕೆ ನೀಡಿದನೆಂದು ॥ 2 ॥

ಐದು ಇಂದ್ರಿಯಗಳೊಳಗೊಂದರಧಿಪನಸುತನ ।
ಐದು ಪ್ರಾಣವನ್ನು ಸೆಳೆದವನ ರಥಕೆ ॥ ಐದು ನಾಲ್ಕು
ಗ್ರಹಗಳೊಳಗೆ ಕಡೆಯವ ನೆನಿಸಿ । ಐದುರೂಪದಿ ನಮ್ಮೊ
ಳಿದ್ದು ಸಲಹುವನೆಂದು ॥ 3 ॥
ಐದರೊಳು ನೋಡಲು ಅತಿ ಬಲವೆಂದೆನಿಸಿ । ಐದೊಂದು
ರಥಿಕರೊಳು ಅಧಿಕ ನೆನಿಸಿ ॥ ಐದು ಪುರಿ ಬೇಡೆ ಕೂಡದಿರಲವನ
ಮಡದಿಯರ । ಐದು ಮುತ್ತಯವುಳ್ಳನ ದೂರಮಾಡಿದನೆಂದು ॥ 4 ॥

ಐದು ಬಾಣನಗೆಲಿದು ಆಶ್ರಮವ ಕೈಕೊಂಡು । ಐದೊಂದು
ಅರಿಗಳನು ಮುರಿದು ಮೆಟ್ಟಿ । ಐದುಪ್ರಾಣರಿಗೆ
ಗುರು ಗೋಪಾಲವಿಠ್ಠಲನ । ಐದೆರಡು ನಾಮಗಳಿಂದ ಭಜಿಸುವನೆಂದು ॥ 5 ॥

## ಶ್ರೀ ಗೋಪಾಲದಾಸರ ಸ್ತೋತ್ರಪದ

ರಾಗ – ಕಾಂಬೋಧಿ ಝಂಪೆತಾಳ

ಬಾಗಿ ಬೇಡುವೆ ಪಿಡಿಯೊ ಬೇಗ ಕೈಯ ।
ಭಾಗವತ ಜನ ಪ್ರಿಯ ಭಾಗಣ್ಣದಾಸಾರ್ಯ ॥ ಪ ॥

ದ್ವಿಜ ಕುಲಾಬ್ಧಿಗೆ ಪೂರ್ಣ । ದ್ವಿಜರಾಜನೆಂದೆನಿಪ ।
ವಿಜಯ ವಿಠ್ಠಲದಾಸ ರೊಲಿಮೆ ಪಾತ್ರ ॥ ನಿಜಮನದಿ ನಿತ್ಯದಲಿ ।
ಭುಜಗ ಶಯನನ ಪಾದ । ಭಜಿಪ ಭಾಗ್ಯದಿ ನಲಿವ ।
ಸುಜನರೊಳಿಡು ಎಂದು ॥ 1 ॥

ನೀನೇವೆ ಗತಿಯೆಂದ । ದೀನರಿಗೆ ನಾನೆಂದು ।
ಹೀನ ಮತಿ ಕಳೆದು ಪವಮಾನ ಪಿತನ।
ಧ್ಯಾನ ಗೈಯುವ ದಿವ್ಯ । ಜ್ಞಾನ ಮಾರ್ಗದಿ ತೋರಿ ।
ಸಾನುರಾಗದಿ ಪೊರೆವ । ದಾನಿ ದಯವಾರಿಧಿಯೆ ॥ 2 ॥

ಮಂದ ಜನ ಸಂದೋಹ ಮಂದಾರತರು ವಿಜಿತ ।
ಕಂದರ್ಪ ಕಾರುಣ್ಯ ಸಿಂಧು ಬಂಧೋ ।
ಕಂದನೆಂದರಿದೆನ್ನ । ಕುಂದು ಎಣಿಸದೆ ಹೃದಯ ।
ಮಂದಿರದಿ ಶ್ರೀ ಶ್ಯಾಮಸುಂದರನ ತೋರೆಂದು ॥ 3 ॥

ಶ್ರೀಮದ್ವೇಶಾರ್ಪಿತವು